# ಆಧುನಿಕ ಭಾರತದಲ್ಲಿ ವೃತ್ತಿನಿರತ ಮಹಿಳೆಯರ ಬದಲಾದ ಪಾತ್ರ ಮತ್ತು ಅಂತಸ್ತು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಕಿರು ಪ್ರಬಂಧ)

ಸಂಶೋಧಕರು

**ಮಂಜುಳಾ ಬಿ.ಜಿ.**

ಸಂಶೋಧನಾ ವಿದ್ಯಾರ್ಥಿ

ಮಹಿಳಾ ಅಧ್ಯಯನ ವಿಭಾಗ

ಮಾರ್ಗದರ್ಶಕರು

**ಡಾ. ಹೆಚ್.ಎಸ್. ಶ್ರೀಮತಿ**

ಪ್ರಾಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ



ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-583276

**2008-09**

# ಆಧುನಿಕ ಭಾರತದಲ್ಲಿ ವೃತ್ತಿನಿರತ ಮಹಿಳೆಯರ ಬದಲಾದ ಪಾತ್ರ ಮತ್ತು ಅಂತಸ್ತು

(ಎ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಕಿರು ಪ್ರಬಂಧ)


ಸಂಶೋಧಕರು

**ಮಂಜುಳಾ ಬಿ.ಜಿ.**

ಸಂಶೋಧನಾ ವಿಧ್ಯಾರ್ಥಿ

ಮಹಿಳಾ ಅಧ್ಯಯನ ವಿಭಾಗ





ಮಾರ್ಗದರ್ಶಕರು

**ಡಾ. ಹೆಚ್.ಎಸ್. ಶ್ರೀಮತಿ**

ಪ್ರಾಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ






**ಮಹಿಳಾ ಅಧ್ಯಯನ ವಿಭಾಗ**

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-583276


**2008-09**

# ದೃಢೀಕರಣ

**"ಆಧುನಿಕ ಭಾರತದಲ್ಲಿ ವೃತ್ತಿನಿರತ ಮಹಿಳೆಯರ ಬದಲಾದ ಪಾತ್ರ ಮತ್ತು ಅಂತಸ್ತು"** ಎಂಬ ಶೀರ್ಷಿಕೆಯ ಸಪ್ರಬಂಧವನ್ನು ನಾನು ಡಾ. ಶ್ರೀಮತಿ. ಹೆಚ್.ಎಸ್., ನಿರ್ದೇಶಕರು ಹಾಗೂ ಪ್ರಾಧ್ಯಾಪಕರು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಇವರ ಮಾರ್ಗದರ್ಶನದಲ್ಲಿ ಸಿಧ್ಧಪಡಿಸಿರುತ್ತೇನೆ. ಇದನ್ನು ಈ ಹಿಂದೆ ಯಾವುದೇ ಪದವಿಗಾಗಿ ಬೇರೆ ವಿಶ್ವವಿದ್ಯಾಲಯಕ್ಕೆ ಅಥವಾ ಸಂಘ ಸಂಸ್ಥೆಗಳಿಗೆ ಸಲ್ಲಿಸಿಲ್ಲವೆಂದು ಈ ಮೂಲಕ ನಾನು ದೃಢೀಕರಿಸುತ್ತೇನೆ.

ದಿನಾಂಕ: 7/11/08
ಸ್ಥಳ: ವಿದ್ಯಾರಣ್ಯ

ಸಂಶೋಧಕಿ

ಮಂಜುಳ ಬಿ.ಗುಡಿಮನಿ

# ಮಾರ್ಗದರ್ಶಕರ ಪ್ರಮಾಣ ಪತ್ರ

**"ಆಧುನಿಕ ಭಾರತದಲ್ಲಿ ವೃತ್ತಿನಿರತ ಮಹಿಳೆಯರ ಬದಲಾದ ಪಾತ್ರ ಮತ್ತು ಅಂತಸ್ತು"** ಎಂಬ ಶೀರ್ಷಿಕೆಯ ಸಪ್ರಬಂಧವನ್ನು **ಮಂಜುಳ ಬಿ.ಗುಡಿಮನಿ** ಇವರು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್. ಪದವಿಗಾಗಿ ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯಕ್ಕೆ ಒಪ್ಪಿಸಲು ಸಿಧ್ಧಪಡಿಸಿದ್ದಾರೆ. ಇದನ್ನು ಈ ಹಿಂದೆ ಯಾವುದೇ ಪದವಿಗಾಗಿ ಬೇರೆ ವಿಶ್ವವಿದ್ಯಾಲಯಕ್ಕೆ ಅಥವಾ ಸಂಘ ಸಂಸ್ಥೆಗಳಿಗೆ ಸಲ್ಲಿಸಿಲ್ಲವೆಂದು ಈ ಮೂಲಕ ನಾನು ದೃಢೀಕರಿಸುತ್ತೇನೆ.

ದಿನಾಂಕ: 7/11/08
ಸ್ಥಳ: ವಿದ್ಯಾರಣ್ಯ

**ಡಾ. ಹೆಚ್.ಎಸ್. ಶ್ರೀಮತಿ**
ನಿರ್ದೇಶಕರು ಹಾಗೂ ಪ್ರಾಧ್ಯಾಪಕರು,
ಮಹಿಳಾ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಪ ರಿ ವಿ ಡಿ

## ೧.೧ ಪ್ರಸ್ತಾವನೆಃ

ದೈನಂದಿನ ಜೀವನದಲ್ಲಿ ಮಹಿಳೆಯು ಪ್ರತಿದಿನ ತನಗಾಗಿ ಬದುಕುವ ಆಸೆ-ಆಕಾಂಕ್ಷೆಗಳು ತೀರ ವಿರಳ. ಅವಳು ಪ್ರತಿದಿನ ಗಂಡ, ಮನೆ, ಮಕ್ಕಳು, ಸಂಸಾರ, ಕುಟುಂಬದ ಕ್ಷೇಮಾಭಿವೃದ್ದಿಯ ಕಡೆಗೆ ಹೆಚ್ಚು ಗಮನಹರಿಸಿ ಅವುಗಳ ಸಫಲತೆಗೋಸ್ಕರ ಹಗಲಿರುಳು ಶ್ರಮಿಸುತ್ತಾಳೆ. ತನ್ನ ವೈಯಕ್ತಿಕ ಬದುಕಿಗೆ ಅಷ್ಟಾಗಿ ಗಮನ ಹರಿಸದೇ ಗಂಡನ ಶ್ರೇಯೋಭಿವೃದ್ದಿಗೆ, ಮಕ್ಕಳ ಲಾಲನೆ-ಪಾಲನೆಗಳಿಗೆ ಸಮಯವನ್ನು ಮೀಸಲಿಡುತ್ತಾಳೆ. ಪುರುಷ ಪ್ರಧಾನ ವ್ಯವಸ್ಥೆ ಹಾಕಿಕೊಟ್ಟಿರುವ ಚೌಕಟ್ಟಿನಲ್ಲಿಯೇ ತನ್ನತನವನ್ನು ಕಾಣುತ್ತಾಳೆ. ಚಿಕ್ಕ ವಯಸ್ಸಿನಲ್ಲಿ ತಾಯಿ-ತಂದೆಯರ ಆಸರೆಯಲ್ಲಿ, ಯೌವ್ವನದಲ್ಲಿ ಗಂಡನ ಆಸರೆಯಲ್ಲಿ, ಜೀವಿತದ ಕೊನೆಯ ಇಳಿ ವಯಸ್ಸಿನಲ್ಲಿ ಗಂಡು ಮಕ್ಕಳ ಆಶ್ರಯದಲ್ಲಿ ಹೀಗೆ ಪ್ರತಿಯೊಂದು ಜೀವನದ ಹಂತದಲ್ಲೂ ಪುರುಷ ಮಹಿಳೆಯನ್ನು ತನ್ನ ಕಪಿಮುಷ್ಟಿಯಲ್ಲಿ ಇಟ್ಟುಕೊಂಡು ಅವಳನ್ನು ಸ್ವತಂತ್ರವಾಗಿ ಬದುಕಲು ಬಿಡದೇ ಅತಂತ್ರ ಜೀವನ ರೂಪಿಸಿಕೊಟ್ಟಿದ್ದಾನೆ. ಇಂತಹ ಸಮಾಜ ರೂಪಿತ ನಿರ್ಬಂಧಗಳಲ್ಲಿ ಮಹಿಳೆ ತನ್ನ ಜೀವನವನ್ನು ರೂಪಿಸಿಕೊಂಡು ಸಾರ್ಥಕತೆ ಹೊಂದುವ ದೌರ್ಭಾಗ್ಯ ಪಡೆದಿದ್ದಾಳೆ. ಅವಳು ಎಷ್ಟೇ ಚತುರೆ, ಜಾಣೆ ಆದರೂ ಸಹಿತ ಮುಕ್ತವಾಗಿ ಪುರುಷನ ಹಾಗೇ ಶಿಕ್ಷಣ ಪಡೆದುಕೊಂಡು ಸ್ವತ0ತ್ರ ಜೀವನ ನಡೆಸಲು ಮನೆಯ ಯಜಮಾನನ ಒಪ್ಪಿಗೆ ಅವಶ್ಯಕವಾಗಿ, ಇಲ್ಲದಿದ್ದರೆ ಅವಳನ್ನು ಹಠಮಾರಿ ಹೆಣ್ಣು, ಗಂಡುಬೀರಿ ಎಂದು ಮೂದಲಿಸುವುದು ಸಹಜವಾಗಿದೆ. ಒಂದು ವೇಳೆ ಅವಳು ಜಾತಣನದಿಂದ ಓದಿ ಯಾವುದಾದರೂ ಉದ್ಯೋಗ ಪಡೆಯಬೇಕು ಎನ್ನುವಷ್ಟರಲ್ಲಿ ಅವಳಿಗೆ ಮದುವೆ ಎಂಬ ಬಂಧನಕ್ಕೆ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಬಂಧಿಸಲು ಪ್ರಯತ್ನಿಸುತ್ತಾರೆ. ಹೀಗೆ ಅವಳನ್ನು ಹಿಡಿತದಲ್ಲಿಟ್ಟುಕೊಳ್ಳಲು ಕುಟುಂಬದವರಿಂದಲೇ ಪ್ರಯತ್ನಗಳನ್ನು ಪ್ರಾರಂಭಿಸಿ ಮುಂದೆ ಅವಳ ಜೀವನದ ಉದ್ದಕ್ಕೂ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ವಿವಿಧ ಎಲ್ಲಾ ರೀತಿಯಿಂದಲೂ ಅವಳನ್ನು ಸ್ವತಂತ್ರವಾಗಿ ಬಿಡದೇ ಅವಳ ಸಾಧನೆ-ಛಲಗಳಿಗೆ ಒಂದು ಚೌಕಟ್ಟನ್ನು ಸಾಮಾಜಿಕ ವ್ಯವಸ್ಥೆ ರೂಪಿಸುತ್ತದೆ. ಇಂತಹ ಚೌಕಟ್ಟಿನಿಂದ ಮಹಿಳೆ ಇಂದೂ ಅಲ್ಪ-ಸ್ವಲ್ಪವಾಗಿ ಎಲ್ಲಾ ವಿವಿಧ ರಂಗಗಳಿಂದಲೂ ಹೊರ ಬರಲು ಪ್ರಯತ್ನಿಸುತ್ತಿರುವುದು ಒಂದು ಸಂತೋಷಕರ ವಿಷಯವೇ ಸರಿ.

ಶಿಕ್ಷಣವನ್ನು ಪಡೆದುಕೊಂಡು ಅವಳು ಉದ್ಯೋಗ ಹೊಂದಿ ಸ್ವಾವಲಂಬಿ ಜೀವನ ನಡೆಸುವ ಮನೋಭಾವನೆ ಹೊಂದಿರುವುದು ಆರೋಗ್ಯಕರ ವಿಷಯವೇ ಆಗಿದ್ದರೂ ಸಹ ಅವಳು ಆ ಉದ್ಯೋಗ ಪಡೆದುಕೊಳ್ಳುವಾಗ ಹಾಗೂ ಪಡೆದುಕೊಂಡ ಮೇಲೆ ಅವಳು ಎದುರಿಸುವ ಸಮಸ್ಯೆಗಳು, ಕಷ್ಟಗಳು ಹೇಳತೀರದು.

ಇಂತಹ ಸಮಸ್ಯೆಗಳನ್ನು ಎದುರಿಸಬೇಕಾದರೆ ಅವಳು ಮೊದಲು ಶಿಕ್ಷಣ ಪಡೆದುಕೊಳ್ಳುವುದು ಅನಿವಾರ್ಯವಾಗಿದೆ. ಅದರಲ್ಲೂ ಉನ್ನತ ಶಿಕ್ಷಣದ ಅಗತ್ಯ ಇಂದು ಹೆಚ್ಚಾಗಿ ಕಾಣುತ್ತದೆ. ಅಂತೆಯೇ "ಹತ್ತೊಂಭತ್ತನೆಯ ಶತಮಾನದ ಆದಿಭಾಗದಲ್ಲಿ ಜೀವನದ ನೆನಪುಗಳನ್ನು ಬರೆದಿಟ್ಟ ಬಹುಮಟ್ಟಿನ ಹೆಂಗಸರು ಓದು ಕಲಿಯಲು ತಮಗಿದ್ದ ತೀವ್ರ ಆಸೆಯ ಬಗ್ಗೆ ಹೇಳಿಕೊಂಡಿದ್ದಾರೆ. 1809 ರಲ್ಲಿ ಜನಸಿದ ರಾಸ್ಸುಂದರಿದೇವಿ ಕೊನೆಯಿಲ್ಲದ ಮನೆಗೆಲಸಗಳು, ಹನ್ನೆರಡು ಮಕ್ಕಳನ್ನು ಸುಧಾರಿಸುವ ಅವಿರತ ಹೊಣೆಗಳ ನಡುವೆಯೂ ತನ್ನ ಹುಚ್ಚನ್ನು ನೆನಪಿನ ಚಿತ್ರಣಗಳಲ್ಲಿ ಹಿಡಿದಿಟ್ಟಿದ್ದಾಳೆ. ಮನೆಗೆಲಸದ ಸಾಗರದಲ್ಲಿ ನಾನು ಮುಳುಗಿ ಹಗಲು ರಾತ್ರಿಗಳ ಪರಿವೆ ಇಲ್ಲದೆ ದುಡಿಯುತ್ತಿದ್ದೆ. ಸ್ವಲ್ಪ ದಿನಗಳ ನಂತರ ಒಂದಿಷ್ಟು ಸರಿಯಾಗಿ ಓದುವುದನ್ನು ಕಲಿಯಬೇಕೆಂಬ ಆಸೆ ನನ್ನೊಳಗೆ ತೀವ್ರವಾಯಿತು. ಅಸಹಾಯಕತೆಯಲ್ಲಿದ್ದಾಗ ಈ ಓದುವ ಹುಚ್ಚು ನನಗೆ ಅಂಟಿತಾದರೂ ಏಕೆ ಎಂದು ನನ್ನ ಮೇಲೆ ನನಗೇ ಕೋಪವೂ ಬರುತ್ತಿತ್ತು. ಹಾಗೆ ಹುಡುಗಿಯರಿನ್ನೂ ಆಗ ಓದುತ್ತಿರಲಿಲ್ಲ.

ಆ ಕಾಲದಲ್ಲಿ ಹುಡುಗಿಯರು ಓದುವುದು ಕೆಟ್ಟದ್ದೆಂಬ ಅಭಿಪ್ರಾಯವೇ ಇದ್ದದ್ದು. ಹೆಂಗಸರ ಕೈಲಿ ಕಾಗದದ ಚೂರೊಂದು ಕಾಣಿಸಿತೆಂದರೆ ಉರಿದು ಬೀಳುತ್ತಿದ್ದರು. ಆದರೆ ಅದೇಕೋ ಇದು ನನಗೆ ಇಷ್ಟವಾಗಲಿಲ್ಲ[1] ಎಂದು ರಾಸ್ಸುಂದರಿ ಅವರು ಹೇಳಿಕೊಂಡಿರುವುದು ನೋಡಿದರೆ ಆ ಕಾಲದಲ್ಲಿ ಮಹಿಳೆಯ ಶಿಕ್ಷಣದ ಮಟ್ಟ ಎತ್ತಿ ತೋರಿಸುತ್ತದೆ. ಅಂದು ಎಲ್ಲೋ ಒಬ್ಬ ಮಹಿಳೆ ವಿಧ್ಯಾವಂತೆ ಸಿಗುವ ಕಾಲ ಅದು. ಆದರೆ ನಮ್ಮ ದೇಶದಲ್ಲಿ ಮಹಿಳೆಗೆ ಮುರ್ಕವಾಗಿ ಶಿಕ್ಷಣವನ್ನು ಪಡೆದುಕೊಳ್ಳಲು ಅವಕಾಶ ಸಿಕ್ಕಿರುವುದು ಬ್ರಿಟಿಷರ ಕಾಲಕ್ಕೆ ಎಂದರೆ ತಪ್ಪಾಗಲಾರದು. ಅವರ ಇಂಗ್ಲೀಷ್ ಶಿಕ್ಷಣ ಪದ್ಧತಿಯಿಂದಾಗಿ "ಭಾರತಕ್ಕೆ 1840 ರ ದಶಕದಲ್ಲಿ ಅವಿವಾಹಿತ ಸನ್ಯಾಸಿನಿ ಮಿಷಿನರಿಗಳು ಬಂದವು. ಇಲ್ಲಿನ ಮಹಿಳೆಯರು ಮತ್ತು ಮಕ್ಕಳ ಕೆಲಸವನ್ನು ಅವರಿಗೆ ವಹಿಸಲಾಗಿತ್ತು. ಈ ಮಿಷನರಿ ಮಹಿಳೆಯರು ವಿದ್ಯಾವಂತೆಯರಾಗಿದ್ದು ತಮಗೆ ವಹಿಸಿದ್ದ ಕಾರ್ಯ ನಿರ್ವಹಣೆಯಲ್ಲಿ ತಾವೆಷ್ಟು ನಿಪುಣರೆಂಬುದನ್ನು ಸಾಬೀತುಪಡಿಸುವ ಉತ್ಸಾಹವನ್ನು ತುಂಬಿಕೊಂಡಿದ್ದರು. ಪ್ರೌಢ ವಿವಾಹಿತ ಭಾರತೀಯ ಮಹಿಳೆಯರನ್ನು

ಕ್ರಿಶ್ಚಿಯನ್ ಜಾತಿಗೆ ಪರಿವರ್ತಿಸುವ ಕೆಲಸದಲ್ಲಿ ಮಗ್ನರಾಗಿದ್ದರು. ಅಲ್ಲದೆ ಭಾರತೀಯ ಮನೆಗಳಲ್ಲಿ ಶಿಕ್ಷಕಿಯರಾಗಿ ಪ್ರವೇಶ ದಪಡೆದರು. ಕಥೆಗಳನ್ನು ಹೇಳುವುದು, ಕಸೂತಿ ಕಲಿಸುವುದು ಇವುಗಳ ಜೊತೆಗೆ ಕ್ರಿಸ್ತನ ಉಪದೇಶಗಳನ್ನು ಬಿತ್ತಲು ಯತ್ನಿಸುತ್ತಿದ್ದರು. ಆದರೂ ಕ್ರೈಸ್ತರಾಗಿ ಪರಿವರ್ತಿತರಾಗುವವರು ಅಷ್ಟಾಗಿಯೇನು ಅವರಿಗೆ ಸಿಗುತ್ತಿರಲಿಲ್ಲ. ಈ ಅಂತಃಪುರ ಪ್ರವೇಶದ ಉಪಾಯ ಅಷ್ಟೇನೂ ಫಲದಾಯಕವಾಗಲಿಲ್ಲ ಎಘಬುದನ್ನು ಮನಗಂಡ ಮಿಷನರಿಗಳು ಆಮೇಲಾಗಲೇ ಬಾಲಕಿಯರ ಶಾಲೆಗಳನ್ನು ತೆರೆದರೆ ಲಾಭದಾಯಕವಾಗಬಹುದು ಎಂದು ಯೋಚಿಸಿ, ಮಿಷಿನರಿ ಮಹಿಳೆಯರೇ ಅಧ್ಯಾಪಕಿಯರಾಗಿ ಮುಂದೆ ಈ ಶಾಲೆಗಳಲ್ಲಿ ಕಲಿತ ಭಾರತದ ಮಹಿಳೆಯರು ಅವರ ಜವಾಬ್ದಾರಿಯನ್ನು ವಹಿಸಿಕೊಂಡು ಬಾಲಕಿಯರ ಶಾಲೆಗಳಲ್ಲಿ ಅಧ್ಯಾಪಕಿಯರಾದರು"

ಭಾರತದಲ್ಲಿ ಮೊದಲು 1816 ರಲ್ಲಿ ಬ್ರಿಟೀಷರು ಬಾಲಿಕಾ ಶಾಲೆಗಳಿಗೆ ಹೆಚ್ಚು ಪ್ರೋತ್ಸಾಹ ನೀಡಿ ಅಂತಹ ಶಾಲೆಗಳಲ್ಲಿ ಪ್ರಾರಂಭಿಸಲು. ಉದಾಃ 1816 ರಲ್ಲಿ ಹಿಂದೂ ಕಾಲೇಜುಗಳ ಆರಂಭ. ಇಲ್ಲಿ ಸ್ತ್ರೀ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಲಾಯಿತು. "ಬ್ರಿಟೀಷ್ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಡಾಲ್‌ಹೌಸಿಯು ಸ್ತ್ರೀ ಶಿಕ್ಷಣದಲ್ಲಿ ಬದಲಾವಣೆಗಳಾಗದ ಹೊರತು ಇನ್ನಾವುದೇ ರೀತಿಯ ಪ್ರತ್ಯೇಕ ಬದಲಾವಣೆಯೂ ಪ್ರಧಾನವಾದ ಹಾಗೂ ಲಾಭದಾಯಕವಾದ ಪರಿಣಾಮಗಳನ್ನು ತರಲು ಸಮರ್ಥವಾಗಲಾರು ಎಂದು ಘೋಷಿಸಿದರು. ಇಲ್ಲಿಯವರೆಗೂ ಶ್ರೀಮಂತರಿಗೆ ಉನ್ನತ ಶಿಕ್ಷಣ ದೊರೆಯಲು ಬೇಕಾದ ಬೆಂಬಲವನ್ನು ನೀಡುತ್ತಿದ್ದ ಸರ್ಕಾರದ ಶಿಕ್ಷಣ ನೀತಿಯಲ್ಲಿ ಬದಲಾವಣೆಯನ್ನು ಸೂಚಿಸಿ ಇನ್ನು ಮುಂದೆ ಈ ಗಮನವನ್ನು ಸರ್ಕಾರವು ದೇಶೀ ಭಾಷೆಗಳಲ್ಲಿ ಸಮೂಹ ಶಿಕ್ಷಣವನ್ನು ಬೆಂಬಲಿಸುತ್ತಾ ಬರಬೇಕೆಂದು 1852 ರಿಂದ 1855 ರವರೆಗೆ ಬೋರ್ಡ್ ಆಫ್ ಕಂಟ್ರೋಲ್‌ನ ಅಧ್ಯಕ್ಷನಾಗಿದ್ದ ಸರ್ ಚಾರ್ಲ್ಸ್‌ವುಡ್‌ರವರು 1854 ರಲ್ಲಿ ಆದೇಶ ಹೊರಡಿಸಿದರು. ಇದರಲ್ಲಿ ಹೊಸ ನೀತಿಯು ಹೇಗೆ ಜಾರಿಗೊಳ್ಳಬೇಕೆಂಬ ವಿವರಗಳನ್ನು ಹೇಳಲಾಗಿತ್ತು. ಇಡೀ ಶಿಕ್ಷಣ ವ್ಯವಸ್ಥೆಯನ್ನು ಸಮಗ್ರವಾಗಿ ಗಮನಿಸಿದ್ದ ಈ ಆದೇಶವು ಸ್ತ್ರೀ-ಪುರುಷರಿಬ್ಬರಿಗೂ ಅನ್ವಯಗೊಳ್ಳುವಂತೆಯೂ ಇತ್ತು[2]

ಇಂತಹ ವ್ಯವಸ್ಥೆಗಳು ಬ್ರಿಟೀಷರ ಕಾಲದಲ್ಲಿ ಕಂಡು ಬಂದರೂ ಸಹ ಭಾರತದಲ್ಲಿ ಮಹಿಳೆಯರೆಲ್ಲರೂ ಶಿಕ್ಷಣ ಪಡೆದು ವಿದ್ಯಾವಂತೆಯರಾಗಲು ಸಾಧ್ಯವಾಗಲಿಲ್ಲ. ಆದರೆ ಇದಕ್ಕೆ ಸಂಪೂರ್ಣವಾಗಿ ಒಂದು ಸ್ವರೂಪ ಕಂಡು ಕೊಂಡಿದ್ದು ಜಗತ್ತಿನಾದ್ಯಂತ ಮಹಿಳಾ ಚಳುವಳಿಗಳು ಪ್ರಾರಂಭಿಸಿದ ಮೇಲೆಯೇ. ಅಂದರೆ ಶಿಕ್ಷಣ ಪಡೆದುಕೊಂಡು

ವಿದ್ಯಾವಂತರಾದ ಮಹಿಳೆರೆಲ್ಲರೂ ಎಚ್ಚೆತ್ತುಕೊಂಡು ಪ್ರಪಂಚಾದ್ಯಂತ 1970 ರ ದಶಕದ ಆಸುಪಾಸಿನಲ್ಲಿ ಚಳುವಳಿಗಳಿಗೆ ಧುಮುಕಿದರು. ಮೊಟ್ಟಮೊದಲು ನಮಗೆ ಅಮೇರಿಕಾದ ನ್ಯೂಯಾರ್ಕಿನ ಸೆನೇಕಾ ಫಾಲ್ಸ್‌ನಲ್ಲಿ ಮೊದಲ ಬಾರಿಗೆ ಮಹಿಳಾ ಚಳುವಳಿಯು ಉದ್ಘಾಟಿತಗೊಂಡಿತು. ಇಲ್ಲಿ ಇಬ್ಬರು ಮಹಿಳಾ ಸುಧಾರಣಾವಾದಿಗಳು ಸ್ಥಳೀಯ ಮಹಿಳಾ ಹಕ್ಕುಗಳನ್ನು ಕುರಿತು ಈ ಸಭೆಯಲ್ಲಿ ಪ್ರಸ್ತಾಪಿಸಿದರು. ಈ ಚಳುವಳಿಯು ರಾಜಕೀಯವಾಗಿ, ಆರ್ಥಿಕವಾಗಿ ಸಮಾನತೆಗಳನ್ನು ಪಡೆಯುವ ಕಡೆಗೆ ಪ್ರೋತ್ಸಾಹ ನೀಡಿತು. ಈ ಸಭೆಯಲ್ಲಿ ಪ್ರಮುಖವಾಗಿ ಮಹಿಳೆಯರ ವಿಶಿಷ್ಟ ಸಮಸ್ಯೆಗಳಿಗೆ ಸಂಬಂಧಪಟ್ಟಂತೆ ಚರ್ಚೆಗಳನ್ನು ಮಾಡಿದರು. ಪ್ರಮುಖವಾಗಿ ವಿಚ್ಛೇದನಾ ಹಕ್ಕುಗಳು, ಮಕ್ಕಳ ಪೋಷಕರಾಗುವ ಹಕ್ಕಗಳು, ಆಸ್ತಿ ಮೇಲಿನ ಹಕ್ಕು ಹಾಗೂ ನಿಯಂತ್ರಣ, ಮತದಾನದ ಹಕ್ಕು ಈ ಎಲ್ಲಾ ವಿಷಯಗಳ ಕುರಿತು ಚರ್ಚಿಸಿತು. ಮುಂದೆ 1939 ರಲ್ಲಿ ಯುರೋಪ್ ಖಂಡದಲ್ಲಿ ಎರಡನೇ ಮಹಾಯುದ್ಧ ನಡೆದಾಗ ಆ ಖಂಡದ ಪುರುಷರೆಲ್ಲರೂ ಯುದ್ಧರಂಗಕ್ಕೆ ಹೋಗುವ ಅನಿವಾರ್ಯ ಉಂಟಾಗಿತ್ತು. ಇಲ್ಲಿ ಸುಮಾರು ಹದಿನೆಂಟು ವರ್ಷದಿಂದ ಹಿಡಿದು ಸುಮಾರು ಅರವತ್ತು ವರ್ಷದವರೆಗಿನ ಎಲ್ಲಾ ಪುರುಷರು ಯುದ್ಧದ ತರಬೇತಿ ಪಡೆದುಕೊಂಡು ಎರಡನೇ ಮಹಾಯುದ್ಧದಲ್ಲಿ ಕಡ್ಡಾಯವಾಗಿ ಭಾಗವಹಿಸಲೇಬೇಕಾದಂತಹ ಪರಿಸ್ಥಿತಿ ಉಂಟಾಯಿತು. ಆಗ ಅಲ್ಲಿನ ಹೆಂಗಸರೂ ಮನೆಯ ಹೊರಗಿನ ಕೆಲಸಗಳನ್ನು ನೋಡಿಕೊಳ್ಳುವ ಅನಿವಾರ್ಯ ಪರಿಸ್ಥಿತಿ ಎದುರಾದಾಗ ಮಹಿಳೆಯರಕ್ಷೇತ್ರ, ಸಾರ್ವಜನಿಕ ಸ್ಥಳಗಳಲ್ಲಿ ಅಂದರೆ ಉದ್ಯೋಗ ಕ್ಷೇತ್ರದಲ್ಲಿ ಶಿಕ್ಷಕರಾಗಿ, ಬ್ಯಾಂಕ್ ನೌಕರರಾಗಿ, ಹೋಟೆಲ್‌ಗಳನ್ನು ನಡೆಸುವ ಮಾಲೀಕರಾಗಿ ತಮ್ಮ ಕೆಲಸದಲ್ಲಿ ತೊಡಗಿದರು. ಇದು ಮುಂದುವರೆಂದು ಯುದ್ಧಕ್ಕೆ ಹೋದ ಪುರುಷರೆಲ್ಲರೂ ಮರಳಿ ವಾಪಸ್ ಮನೆಗಳಿಗೆ ಹಿಂತಿರುಗಿದಾಗ, ಪುರುಷ ಮರಳಿ ಬರುವಿಕೆಯಿಂದಾಗಿ ಸಾರ್ವಜನಿಕ ಮತ್ತು ಉತ್ಪಾದನಾ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಮಹಿಳೆಯರು ಪುನಃ ಮೊದಲಿನಂತೆ ನಾಲ್ಕು ಗೋಡೆಗಳ ಮಧ್ಯೆ ಹೊರಗಿನ ಕೆಲಸಗಳಿಂದ ವಂಚಿತರಾಗಿ ಕುಳಿತುಕೊಳ್ಳಲು ಇಷ್ಟವಿಲ್ಲದೆ ಆ ವ್ಯವಸ್ಥೆಯಿಂದ ಹೊರಬರಲು ಪ್ರತಿಭಟನೆಗೆ ಇಳಿಸಿದರು. ಇಂತಹ ಕೆಲವು ಪ್ರತಿಭಟನೆಗಳ ಗಾಳಿ ಭಾರತದ ಮೇಲೂ ಸಹ ಬೀಸಿತು. ಭಾರತದಲ್ಲಿದ್ದ ಮಹಿಳೆಯರೆಲ್ಲರೂ ಪ್ರಪಂಚಾದ್ಯಂತ ಚಳುವಳಿಗಳು ನಡೆಯುತ್ತಿರುವುದರ ಪ್ರಭಾವದಿಂದಾಗಿ ತಾನು ಪುರುಷ ಪ್ರಧಾನ ವ್ಯವಸ್ಥೆಯ ಕಪಿಮುಷ್ಟಿಯಿಂದ ವಿಮುಖಳಾಗಲು ಚಳುವಳಿಗಳಿಗೆ ಧುಮುಕಿದಳು. ಸುಮಾರು ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ

ಭಾರತದಲ್ಲಿ ಚಳುವಳಿಗಳು ಕಾಣಿಸಿಕೊಂಡವು. ಆದರೆ ಅದಕ್ಕೆ ಸರಿಯಾದ ಕಾಲ ಕೂಡಿ ಬಂದಿದ್ದು ಬ್ರಿಟೀಷರ ಕಾಲಕ್ಕೆ ಎಂದು ಹೇಳಬಹುದು.

"ಭಾರತದಲ್ಲಿ ಮಹಿಳೆಯರ ಸ್ಥಾನಮಾನಗಳನ್ನು ಸುಧಾರಿಸುವಲ್ಲಿ ದುಡಿದ ಅನೇಕ ಮಹನೀಯರಲ್ಲಿ ಕೇಳಿ ಬರುವ ಮೊದಲ ಹೆಸರು ರಾಜಾರಾಂ ಮೋಹನರಾಯ್. ಇವರು ಸ್ಥಾಪಿಸಿದ ಬ್ರಹ್ಮ ಸಮಾಜವು ಭಾರತೀಯ ಮಹಿಳೆಗೆ ಸಂಬಂಧಿಸಿದ ಮೂರನೆ ಬಗೆಯ ಚಿಂತನೆಯಾಗಿ ಮೂಡಿ ಬಂತು[3]

ಸುಧಾರಣವಾದಿಗಳಲ್ಲೊಬ್ಬರಾದ "ಧೋಂಡೋ ಕೇಶವ ಕರ್ವೆಯವರು ಶಿಕ್ಷಿತ ವಿಧವೆಯರಿಗೆ ಹೆಣ್ಣು ಮಕ್ಕಳ ಶಾಲೆಗಳಲ್ಲಿ ಉಪಾಧ್ಯಾಯಿನಿಯರಾಗುವ ಅವಕಾಶವನ್ನು ಕಲ್ಪಿಸಿಕೊಟ್ಟರು[4]

1926 ರಲ್ಲಿ ಹುಟ್ಟಿಕೊಂಡ 'ಅಖಿಲ ಭಾರತ ಸ್ತ್ರೀ ಸಮಾವೇಶ 'ದ ಅಧ್ಯಕ್ಷೆಯಾದ ಸರೋಜಿನಿ ನಾಯ್ಡು ಅವರು, ರಾಜಕೀಯೇತರ ಸಂಘಟನೆಯಾಗಿ ಅದನ್ನು ಬೆಳೆಸುವಲ್ಲಿ ಆಸಕ್ತರಾದರು. ಇದರಿಂದಾಗಿ ಸಮಾವೇಶದ ಯಶಸ್ಸಿಗೆ ಕಾರಣರಾದರು. ಮುಂದೆ ಸ್ವಾತಂತ್ರ್ಯೋತ್ತರ ನಂತರ ತೆಲಂಗಾಣದ ಮಹಿಳಾ ಚಳುವಳಿ ಹೆಚ್ಚು ಗಮನ ಸೆಳೆಯಿತು. ಮುಂದೆ ಕೋಪನ್ ಹೇಗನ್ ಸಮಾವೇಶದ ನಂತರ "ಅಖಿಲ ಭಾರತ ಮಹಿಳಾ ಸಮನ್ವಯ ಸಮಿತಿಯನ್ನು ಮೊದಲಿಗೆ ಸ್ಥಾಪಿಸಲಾಯಿತು. 1954 ರಲ್ಲಿ ಈ ಸಮಿತಿಯು ಕಲ್ಕತ್ತೆಯಲ್ಲಿ ಸಮಾವೇಶವನ್ನು ಕರೆಯಿತು. " ಸಮಾವೇಶದ ಧ್ಯೇಯೋದ್ದೇಶಗಳು ಈ ರೀತಿ ಇದ್ದವು.

ಅ) ಶಾಂತಿ ಸ್ವಾತಂತ್ರ್ಯಗಳ ರಕ್ಷಣೆ

ಆ) ಮಹಿಳಾ ಹಕ್ಕುಗಳ ಶಾಸನಗಳ ರಚನೆ

ಇ) ಮಹಿಳೆಯರ ಉದ್ಯೋಕಾವಕಾಶಗಳ ಹೆಚ್ಚಳ

ಈ) ರೈತ ಮಹಿಳೆಯರ ಹಕ್ಕುಗಳ ರಕ್ಷಣೆ

ಉ) ತಾಯಿ-ಮಕ್ಕಳ ಆರೋಗ್ಯ ರಕ್ಷಣೆ

ಇಂತಹ ಅಮೂಲ್ಯವಾದಂತಹ ಧ್ಯೇಯೋದ್ದೇಶಗಳನ್ನು ಬೇಡಿಕೆಯಲ್ಲಿಡಲಾಯಿತು.[5]

ಈ ರೀತಿಯ ಬೇಡಿಕೆಗಳ ಮೂಲಕ ಮಹಿಳಾ ಚಳುವಳಿಗಳು ಮಹಿಳೆಯರ ಬದುಕನ್ನು ವಿಸ್ತರಿಸುವ ಹಿನ್ನೆಲೆಯಲ್ಲಿ ತಮ್ಮದೇ ಆದಂತಹ ಪಾತ್ರವನ್ನು ನಿರ್ವಹಿಸಿದವು. ಮುಂದೆ ಭಾರತದಲ್ಲಿ ವುಮೆನ್ಸ್ ಇಂಟರ್‌ನ್ಯಾಷನಲ್ ಡೆಮಾಕ್ರಟಿಕ್ ಫೆಡರೇಷನ್ ಸಂಘಟನೆಯು, ವಿಶ್ವಸಂಸ್ಥೆಯ ಸ್ತ್ರೀಯರ ಸ್ಥಾನಮಾನ ಕುರಿತು ಸಮಿತಿಗೆ ನೀಡಿದ ಸಲಹೆಯ ಅನುಸಾರವಾಗಿ 1975 ನೇ ವರ್ಷವನ್ನು ಅಂತರರಾಷ್ಟ್ರೀಯ ಮಹಿಳಾ ವರ್ಷವನ್ನಾಗಿ ಘೋಷಿಸಿತು. ಸಮಾನತೆ, ಅಭಿವೃದ್ಧಿ ಇದರ ಮುಖ್ಯ ಉದ್ದೇಶಗಳಾಗಿದ್ದವು. ಭಾರತದಲ್ಲಿಯ ಸ್ವಾಯತ್ತ ಮಹಿಳಾ ಚಳುವಳಿಗಳು ಮಹಿಳೆಯರ ಲೈಂಗಿಕ ಅಸಮಾನತೆ, ಮಹಿಳಾ ದೈಹಿಕ ಹಿಂಸೆ, ಕೌಟುಂಬಿಕ ಹಿಂಸೆ, ಸ್ತ್ರೀ ದೇಹದ ವ್ಯಾಪಾರೀಕರಣ ಇವೆಲ್ಲಲವುಗಳ ವಿರುದ್ದ ಹೋರಾಡುತ್ತಾ, ಸ್ತ್ರೀವಾದಿ ಪ್ರಜ್ಞೆಯನ್ನು ಸಾಮಾಜಿಕ ಆಲೋಚನೆಗಳ ಪಮುಖ ವಾಹಿನಿಯಾಗಿ ರೂಪಿಸುವ ಮಹತ್ತರ ಗುರಿ ಹೊಂದಿವೆ. ಅಲ್ಲದೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅವಳ ಆರ್ಥಿಕ, ಸಾಮಾಜಿಕ ಸ್ವಾತಂತ್ರ್ಯಗಳಿಗೋಸ್ಕರವಾಗಿ ಅವಳಿಗೊಂದು ಉದ್ಯೋಗದ ಅವಶ್ಯಕತೆ ಇದೆ ಎಂಬುದನ್ನು ಬಿತ್ತರಿಸಿದವು. ಹೀಗಾಗಿ ಅಂದಿನಿಂದಲೇ ಪ್ರಾರಂಭವಾದ ಉದ್ಯೋಗದ ಕಲ್ಪನೆಗಳು ಇಂದಿಗೂ ಕಾಣುತ್ತವೆ.

ಮಹಿಳೆಯಾದವಳು ಉದ್ಯೋಗದ ಕಲ್ಪನೆಯನ್ನು ಹೊತ್ತುಕೊಳ್ಳುವುದರ ಜೊತೆಗೆ ಅವಳು ಅಂತಹ ಉದ್ಯೋಗದಲ್ಲಿ ಸೇರಬೇಕಾದಾಗ ಹಲವಲಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ನಮ್ಮಲ್ಲಿ ಮಹಿಳೆಗೆ ಸ್ವಾತಂತ್ರ್ಯ ಇಂದು ನೀಡಿದಾ್ದರೂ ಸಹ ಅದು ಹೆಸರಿಗೆ ಮಾತ್ರ ಎನ್ನುವಂತಾಗಿದೆ. ಕಾರಣ ಪುರುಷನ ಹಸ್ತಕ್ಷೇಪ ಉದ್ಯೋಗದಲ್ಲೂ ಬಿಟ್ಟಿಲ್ಲ. ಅವಳು ಅಸಂಘಟಿತ ವಲಯದಲ್ಲಾಗಿರಬಹುದು ಇಲ್ಲವೇ ಸಂಘಟಿತ ವಲಯದಲ್ಲಿ ದುಡಿಯುತ್ತಿರಬಹುದು. ಅಲ್ಲಿಯೂ ಸಹ ಪುರುಷಾಧಿಕಾರ ಕಂಡು ಬರಬಹುದು. ಆದರೆ ಕೆಳದರ್ಜೆಯ ಉದ್ಯೋಗಗಳಲ್ಲಿ ದುಡಿಯುವ ಮಹಿಳೆಯ ಸ್ಥಿತಿ ಹೇಳತೀರದು. ಅದರಲ್ಲಿಯೂ ಸಹ ಶಿಕ್ಷಣ ಇಲಾಖೆಯಂತಲ್ಲಿ ಶಿಕ್ಷಕಿಯರಾಗಿ ಅದು ಪ್ರಾಥಮಿಕ ಶಾಲಾ ಹಂತದ ಶಿಕ್ಷಕಿಯರಾಗಿ ದುಡಿಯುವ ಮಹಿಳೆಯ ಸ್ಥಿತಿ ಇಂದೂ ಸಹ ತುಂಬಾ ಶೋಚನೀಯವಾಗಿದೆ. ಕಣ್ಣಿಗೆ ತುಂಬಾ ಒಳ್ಳೆಯ ಕೆಲಸದಂತೆ ಕಂಡರೂ ಸಹ ಅಲ್ಲಿ ಶಿಕ್ಷಕಿಯಾದವಳು ಅನುಭವಿಸುವ ಕಷ್ಟಗಳು ಹಲವಾರು.

ಪ್ರಾಥಮಿಕ ಶಾಲಾ ಹಂತದಲ್ಲಿ ಇಂದು ವೃತ್ತಿ ನಿರತವಾಗಿರುವ ಮಹಿಳೆ ಹೆಸರಿಗೆ ಶಿಕ್ಷಕಿ ಎಂದು ಮರ್ಯಾದೆಯಿಂದ ಸಂಭೋಧಿಸಿದರೂ ಸಹ ಅಲ್ಲಿ ಅವಳನ್ನು ನೋಡುವ ಹಿನ್ನೆಲೆಯ ನೋಟದ ಅರ್ಥವೇ ಬೇರೆ. ಈ ಮೂರು-ನಾಲ್ಕು ವರ್ಷಗಳಿಂದ ಇತ್ತೀಚೆಗೆ ಪ್ರಾಥಮಿಕ ಶಾಲಾ ಹಂತದಲ್ಲಿ ರಚಿತಗೊಂಡಿರುವ ಎಸ್.ಡಿ.ಎಂ.ಸಿ.ಯಿಂದಾಗಿ ಅಲ್ಲಿನ ಸದಸ್ಯರ ಕಿರುಕುಳ ಶಿಕ್ಷಕಿಯಾದವಳಿಗೆ ತಡೆಯಲಾರದ ಹಿಂಸೆಯಾಗಿ ಪರಿಣಮಿಸಿದೆ. ಪುರುಷ ಅಧ್ಯಕ್ಷನಾಗಿದ್ದು ಅವನಿಗೆ ತಕ್ಕ ಹಾಗೇ ಹೊಂದಾಣಿಕೆ ಮಾಡಿಕೊಳ್ಳದಿದ್ದಲ್ಲಿ ಶಿಕ್ಷಕಿಯಾದವಳು ಕೆಲಸದಿಂದ ನಿರ್ಗಮಿಸುವ ಹಂತ ತಲುಪುತ್ತದೆ. "ಆ ಸದಸ್ಯರ ಲೈಂಗಿಕ ಕಿರುಕುಳದಿಂದಾಗಿಯೇ ಗದಗ ಜಿಲ್ಲೆಯ ಮುಂಡರಗಿ ಎಂಬಲ್ಲಿ ಪ್ರೇಮಾ ಎನ್ನುವ ಶಿಕ್ಷಕಿಯ ಜೀವಂತ 'ದೇಹ ದಹನ' ಮಾಡಿಕೊಂಡ ಸನ್ನಿವೇಶ ಇನ್ನೂ ಮರೆಮಾಚಿಲ್ಲ[6]

ಅಲ್ಲದೆ ಇದರಿಂದಾಗಿ ಅವಳ ಸಂಸಾರವೇ ಮುರಿದು ಹೋಗಿ ಮಕ್ಕಳು ಅನಾಥರಾದ ಸಂಗತಿ ಎಂಥವರನ್ನು ಕರುಳು ಹಿಸುಕುತ್ತದೆ. ಇಂತಹ ಪ್ರಕರಣಗಳು ಇತ್ತೀಚೆಗೆ ಗ್ರಾಮ ಶಾಲೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಿದ್ದು ಇದಕ್ಕೆ ಯಾವುದೇ ಪ್ರಕಾರದ ಕ್ರಮವನ್ನು ಸರ್ಕಾರವು ತೆಗೆದುಕೊಳ್ಳದಿರುವುದು ಮಹಿಳೆಗೆ ನೀಡಿರುವ ಪ್ರಾಶಸ್ತ್ಯವನ್ನು ಎತ್ತಿ ತೋರಿಸುತ್ತದೆ. ಈ ಸಮಸ್ಯೆಯು ಒಂದು ಕಡೆಯಾದರೆ ಶಾಲಾ ಮುಖ್ಯೋಪಧ್ಯಾಯರ ಸಮಸ್ಯೆ ಇನ್ನೊಂದು ಕಡೆ ದಿನಕ್ಕೊಂದು ಆದೇಶ, ಕೆಲಸಗಳು ಇವತ್ತು ಹೆಚ್ಚುತ್ತಿರುವುದರ ಪರಿಣಾಮವಾಗಿ ಎಲ್ಲಾ ಶಾಲಾ ಕೆಲಸದ ಹೊರ ಶಿಕ್ಷಕಿಯ ಕೊರಳಿಗೆ ಹಾಕಿ ತಾವು ಮಾತ್ರ ಸಭೆ-ಸಮಾರಂಭ, ತಾಲ್ಲೂಕು ಕಛೇರಿಗೆ ಭೇಟಿ ನೀಡುವುದು ಹೀಗೆ ಹತ್ತು ಹಲವು ಕಾರಣಗಳನ್ನು ತೋರಿಸಿ ಶಾಲಾ ಮುಖ್ಯೋಪಧ್ಯಾಯರು ಕೆಲಸ ಮಾಡುವ ಸನ್ನಿವೇಶದಿಂದ ನುಣುಸಿಕೊಳ್ಳುವ ಸನ್ನಿವೇಶಗಳು ಹೆಚ್ಚು. ಮಹಿಳೆಯಾದವಳಿಗೆ ತಾಳ್ಮೆ, ಸಹನೆ, ಸಹಕಾರದ ಗುಣಗಳಿರುತ್ತವೆ ಎಂಬುದನ್ನು ಹೇಳುವುದರ ಮುಖಾಂತರ ಪುರುಷರು ಅವಳಿಗೆ ಹೆಚ್ಚು ಹೆಚ್ಚು ಕೆಲಸಗಳಿಗೆ ತೊಡಗುವಂತೆ ಮಾಡುತ್ತಾರೆ.

ಶಾಲಾ ಕಾರ್ಯನಿರ್ವಹಣೆ ಮುಗಿದ ಬಳಿಕ ಮರಳಿ ಮನೆಗೆ ಹೋಗುವಾಗ ಬಸ್ಸಿನ ಸ0ಚಾರದಲ್ಲಿ ಪೋಲಿಪುಂಡರ ಉಪಟಳ ಇನ್ನೊಂದು ಕಡೆ. ಮಹಿಳೆಯರನ್ನು ಮುಟ್ಟುವುದು, ಅವಳಿಗೆ ಡಿಕ್ಕಿ ಹೊಡೆಯುವುದು ಇತರೆ ಲೈಂಗಿಕ ಪ್ರಚೋದಿತವಾಗುವಂತಹ ಸ್ಥಳಗಳಲ್ಲಿ ಅವಳಿಗೆ ಮುಟ್ಟಿ ಹಿಂಸಿಸುವುದು. ಹೀಗೆ ಸಂಚಾರ

ವ್ಯವಸ್ಥೆಯಲ್ಲಿ ಪುರುಷರಿಂದಾಗ ಕಷ್ಟ ಅನುಭವಿಸುತ್ತಾಳೆ. ಕೊನೆಗೆ ನೆಮ್ಮದಿಯೊಂದ ಮನೆಗೆ ಬಂದು ಸೇರಿ ವಿಶ್ರಾಂತಿ ಪಡೆಯೋಣ ಎನ್ನುವಷ್ಟರಲ್ಲಿ ಮನೆಯ ಸದಸ್ಯರ ಕಾಟ ಇನ್ನೊಂದು ಕಡೆ. ಸ್ವಲ್ಪ ತಡವಾಗಿ ಬಂದರೆ ಯಾಕೆ ಇಷ್ಟು ತಡವಾಗಿ ಬಂದೆ? ಮಕ್ಕಳನ್ನು ನೋಡಿಕೊಳ್ಳುವವರು ಯಾರು? ಮನೆಯ ಬಗ್ಗೆ ಜವಾಬ್ದಾರಿ ಇದೆಯಾ? ಅಡುಗೆ ಕೆಲಸ ಯಾರು ಮಾಡುವುದು ಹೀಗೆ ಪ್ರಶ್ನೆಗಳ ಸುರಿಮಳೆಯೇ ಸುರಿಸಿಬಿಡುವ ಕೌಟುಂಬಿಕ ವ್ಯವಸ್ಥೆ, ಈ ಎಲ್ಲದರ ನಡುವೆ ಜರ್ಜರಿತಳಾಗದೇ ನಿರ್ಮಲ ಮನಸ್ಸಿನಿಂದ ಪ್ರತಿದಿನ ವೃತ್ತಿನಿರತಳಾಗಿ ಮಕ್ಕಳಿಗೆ ಪಾಠ ಕಲಿಕೆಯಲ್ಲಿ ತೊಡಗಿಸುವುದು ಎಂದರೆ ಸುಮ್ಮನೆಯೇ? ಇಂತಹ ಇನ್ನು ಹತ್ತು ಹಲವು ತೊಂದರೆಗಳು ನಮ್ಮ ಮುಂದೆ ಕಾಣಿಸುತ್ತವೆ. ಈ ಎಲ್ಲಾ ತೊಂದರೆಗಳಿಂದ ಮಹಿಳೆಯು ಮಾನಸಿಕವಾಗಿ ಕುಗ್ಗುವುದರ ಜೊತೆಗೆ ರಕ್ತದ ಒತ್ತಡ (ಬಿ.ಪಿ) ಗಳಂತಹ ಖಾಯಿಲೆಗಳಿಗೆ ತುತ್ತಾಗಬೇಕಾಗುತ್ತದೆ. ಆಗ ಮನೆಯ ಯಜಮಾನನ ಅಡಿಯಲ್ಲಿ ಹೇಳಿದಂತೆ ಕೇಳಿಕೊಂಡು ಬದುಕುವ ಮಹಿಳೆಗೆ ಸ್ವತಃ ದುಡಿಮೆಯ ಸಂಪಾದನೆಯಲ್ಲಿ ಖರ್ಚು ಮಾಡುವ ಸ್ವಾತಂತ್ರ್ಯ ಇರದೇ ಪ್ರತಿಯೊಂದು ಕೆಲಸ ಕಾರ್ಯಗಳಿಗೆ ಯಜಮಾನನ ಮುಂದೆ ಕೈಚಾಚುವ ಪ್ರಮೇಯ ತಪ್ಪುವುದಿಲ್ಲ.

ಪ್ರಾಥಮಿಕ ಶಾಲಾ ಶಿಕ್ಷಕಿಯಾದವಳಿಗೆ ಅವಳ ದೌರ್ಭಾಗ್ಯದಿಂದ ದೊಡ್ಡ ಖಾಯಿಲೆಗಳಂತಹವು (ಕ್ಯಾನ್ಸರ್, ಕ್ಷಯರೋಗ ಇತ್ಯಾದಿ) ಕಾಣಿಸಿಕೊಂಡರಂತೂ ಮುಗಿದೇ ಹೋಯಿತು ಅವಳ ಕಥೆ. ಏಕೆಂದರೆ ಅವಳಿಗೆ ಬರುವ ತಿಂಗಳಿನ ವೇತನ ಸಾಮಾನ್ಯವಾಗಿ 8000 ರಿಂದ 10000 ಗಳಿರಬಹುದು. ಆದರೆ ಅಂತಹ ದೊಡ್ಡ ಖಾಯಿಲೆಗಳಿಗೆ ಭರಿಸುವಷ್ಟು ಹಣ ಅವಳಿಗೆ ಸಾಧ್ಯವಾಗುವುದಿಲ್ಲ. ಆಗ ಅವಳ ತಿಂಗಳ ವೇತನ ಸಂಪೂರ್ಣ ಹಕ್ಕು ಮನೆಯ ಯಜಮಾನನದ್ದಾಗಿರುವುದರಿಂದ ಸ್ವತಂತ್ರವಾಗಿ ಖಾಯಿಲೆಯನ್ನು ಗುಣಮುಖ ಮಾಡಿಕೊಳ್ಳುವ ಹಕ್ಕು ಅವಳಿಗೆ ಇಲ್ಲವಾಗುತ್ತದೆ. ಆಗ ಮತ್ತೇ ಅವಳು ತವರು ಮನೆಯ ಮೊರೆ ಹೋಗಬೇಕಾಗುತ್ತದೆ. ಅವಳ ತವರು ಮನೆಯವರು ಅವಳನ್ನು ರಕ್ಷಿಸಿದರೆ ಪರವಾಗಿಲ್ಲ. ಒಂದು ವೇಳೆ ಅಲ್ಲಿಯೂ ಅವಳಿಗೆ ರಕ್ಷಣೆ ಸಿಗದಿದದಾಗಿ ಅವಳು ಉದ್ಯೋಗದಲ್ಲಿದ್ದು ಅವಳ ಆರೋಗ್ಯ ಕಾಪಾಡಿಕೊಳ್ಳಲು ಸಾಧ್ಯವಾಗದೇ ಹೋಗಿ ಅವಳು ಕೊನೆಗೆ ತನ್ನ ಜೀವನವನ್ನೇ ಬಲಿ ಕೊಡಬೇಕಾದ ಪ್ರಮೇಯ ಉಂಟಾಗುತ್ತದೆ. ಇಂತಹ ಕಷ್ಟಗಳಿಂದ ಅವಳು ವಿಮುಕ್ತಗೊಳ್ಳದೆ ಇರುವುದು ಅವಳ ದೌರ್ಭಾಗ್ಯವೇ ಸರಿ.

## ೧.೨ ಅಧ್ಯಯನದ ಉದ್ದೇಶಃ

ಪ್ರತಿ ಉದ್ಯೋಗದಲ್ಲೂ ಮಹಿಳೆಯು ಸಮಸ್ಯೆಗಳಿಂದ ಕೂಡಿದ್ದಾಳೆ ನಿಜ. ಆದರೆ ಕೆಳದರ್ಜೆಯ ಹಂತದಲ್ಲಿ ಕೆಲಸ ಮಾಡುವ ಪ್ರಾಥಮಿಕ ಮಹಿಳಾ ಶಿಕ್ಷಕಿಯು ಅನುಭವಿಸುವ ತೊಂದರೆಗಳು, ಸಮಸ್ಯೆಗಳು ಹತ್ತು ಹಲವು. ಅವು ತೆರೆಮರೆಯಲ್ಲಿ ನಡೆಯುವ ವ್ಯವಸ್ಥೆ ಒಂದು ಕಡೆ ಇದ್ದರೆ ಇನ್ನೊಂದು ಕಡೆ ಮೇಲಾಧಿಕಾರಿಗಳ ತೊಂದರೆ. ಇಂತಹ ಪ್ರಾಥಮಿಕ ಶಿಕ್ಷಕಿಯ ಬದುಕಿನ ಪಾತ್ರ ಮತ್ತು ಅವಳ ಅಂತಸ್ಥಿನ ಕುರಿತು ಅರ್ಥ ಮಾಡಿಕೊಳ್ಳುವ ಉದ್ದೇಶದಿಂದ ಈ ಸಂಶೋಧನೆಯನ್ನು ಅಧ್ಯಯನಕ್ಕಾಗಿ ಅರಿಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದ ವಿಷಯವು ಕೆಲವು ಗುರಿ ಮತ್ತು ಉದ್ದೇಶಗಳನ್ನು ಹೊಂದಿದೆ. ಅವು ಈ ಕೆಳಗಿನಂತಿವೆ.

ಅ) ಉದ್ಯೋಗಸ್ಥ ಮಹಿಳೆಯರ ಪ್ರಮುಖ ಸಮಸ್ಯೆಗಳನ್ನು ಅದರಲ್ಲೂ ಕುಟುಂಬ ಕೇಂದ್ರಿತ ಸಮಸ್ಯೆಗಳ ಮೂಲ ಕಾರಣಗಳನ್ನು ಅರಿಯುವುದು ಹಾಗೂ ವಿಶ್ಲೇಷಿಸುವುದು.

ಆ) ಉದ್ಯೋಗಸ್ಥ ಮಹಿಳೆಯರು ಉದ್ಯೋಗವನ್ನು ಪಡೆಯುವ ಹಾಗೂ ನಿಭಾಯಿಸುವ ಸಂಧರ್ಭದಲ್ಲಿ ಎದುರಿಸುವ ಸಂಗತಿಗಳನ್ನು ವಿಶ್ಲೇಷಿಸುವುದು.

ಇ) ಮಹಿಳೆ ಗಳಿಸಿದ ವರಮಾನದ ಮೇಲೆ ಅವಳಿಗಿರುವ ಹಕ್ಕು ಮತ್ತು ನಿಯಂತ್ರಣ ಇವನ್ನು ವಿಶ್ಲೇಷಿಸುವುದು.

ಈ) ವರಮಾನ, ಸಾಮಾಜಿಕ ಸ್ಥಾನ-ಮಾನ, ನಿರ್ಧಾರ ಕೈಗೊಳ್ಳುವಿಕೆ ಇವುಗಳ ಸಂಬಂಧಗಳನ್ನು ತಿಳಿಯುವುದು.

## ೧.೩ ಅಧ್ಯಯನದ ವ್ಯಾಪ್ತಿಃ

ಸಂಶೋಧನೆಗೆ ಹೈದರಾಬಾದ್ ಕರ್ನಾಟಕದ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕನ್ನು ಮಾತ್ರ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಎಲ್ಲಾ ವೃತ್ತಿಯಲ್ಲೂ ಮಹಿಳಾ ಶೋಷಣೆ ನಡೆಯುವುದರ ಜೊತೆಗೆ ಅವಳ ಪಾತ್ರ ಮತ್ತು ಅಂತಸ್ತುಗಳು ಕಂಡು ಬರುತ್ತವೆ. ಆದರೆ ಅಧ್ಯಯನದ ಮಿತಿಯಿಂದಾಗಿ ಕೇವಲ ಪ್ರಸಕ್ತ ಪ್ರಾಥಮಿಕ ಶಾಲಾ ಹಂತದ ಶಿಕ್ಷಕಿಯರನ್ನು ಮಾತ್ರ ಅಧ್ಯಯನ ಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

ಈ ಅಧ್ಯಯನವು ಮಹಿಳೆಯ ವೈವಾಹಿಕ ಸ್ಥಾನ-ಮಾನ, ಕುಟುಂಬ, ಉದ್ಯೋಗ ಕ್ಷೇತ್ರಗಳಲ್ಲಿನ ಅಂತಸ್ತು ಮತ್ತು ಅವಳು ನಿರ್ವಹಿಸುವ ಪಾತ್ರಗಳಿಗೆ ಮಾತ್ರ ಸಂಬಂಧಿಸಿದೆ.

## ೧.೪ ಅಧ್ಯಯನದ ಮಹತ್ವ:

ವೃತ್ತಿನಿರತ ಮಹಿಳೆಯ ಬದಲಾದ ಪಾತ್ರ ಮತ್ತು ಅಂತಸ್ತು ಬಗೆಗಿನ ಅಧ್ಯಯನವು ಸಂಶೋಧನೆಯ ಕ್ಷೇತ್ರದಲ್ಲಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದ್ದು ಬೇರೆ ಬೇರೆ ವೃತ್ತಿಗಳಿಗೆ ಸಂಬಂಧಿಸಿದ ಅಧ್ಯಯನಗಳು ಇತ್ತೀಚಿಗೆ ನಡೆಯುತ್ತಿದ್ದು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಒಂದು ಕಾಲಕ್ಕೆ ಶ್ರೇಷ್ಠ ಎನಿಸಿದ ಶಿಕ್ಷಕಿಯ ವೃತ್ತಿ ಇದಿಗೂ ಅದರ ಪ್ರಾಮುಖ್ಯತೆ ಅದೇ ರೀತಿ ಇದ್ದರೂ ಕೂಡ ಶಿಕ್ಷಕಿಯಾಗಿ ಸೇವೆ ಸಲ್ಲಿಸುವ ಮಹಿಳೆಯ ಸಮಸ್ಯೆಗಳು, ತೊಂದರೆಗಳು ಹೆಚ್ಚಾಗಿ ಕಂಡು ಬರುತ್ತಿದ್ದು ಮಹಿಳಾ ಶಿಕ್ಷಕಿಯ ಕಷ್ಟಗಳು ಹೆಚ್ಚುತ್ತಲಿವೆ ಹೊರತು ಕಡಿಮೆಯಾಗುತ್ತಿಲ್ಲ. ಇದರ ಹಿನ್ನೆಲೆಯನ್ನು ಅರಿಯುವುದು ಅವಶ್ಯವಾಗಿದ್ದು ಎಷ್ಟು ದುಡಿದರೂ ಅವಳು 'ಗಾಣದ ಎತ್ತಿನಂತೆಯೇ ' ಹೊರತು ಮನೆಯ ಯಜಮಾನಿಕೆ ಎಂಬುದಿಲ್ಲ. ಸ್ವತಂತ್ರ ನಿರ್ಧಾರಗಳನ್ನು ನಿರ್ಧರಿಸುವ ಸಂಪೂರ್ಣ ಹಕ್ಕಿಲ್ಲ. ಅದಕ್ಕೆ ಹೊಂದಿಕೊಂಡಂತೆ ಅವಳ ಅಂತಸ್ತಿನ ಕುರಿತು ಕಾರಣಗಳನ್ನು ಕಂಡು ಕೊಳ್ಳುವುದು ಈ ಅಧ್ಯಯನದ ಮಹತ್ವವನ್ನು ಎತ್ತಿ ತೋರಿಸುತ್ತದೆ.

ಕೆಳದರ್ಜೆಯಲ್ಲಿ ನಿರ್ವಹಿಸುವ ಪ್ರಾಥಮಿಕ ಶಾಲಾ ಶಿಕ್ಷಕಿಯ ಬದಲಾದ ಪಾತ್ರ ಹಾಗೂ ಅಂತಸ್ತಿನ ಕುರಿತು ತಿಳಿಯುವುದು ಅವಶ್ಯಕವಾಗಿದ್ದು ಇಲ್ಲಿ ಪುರುಷ ಪ್ರಧಾನತೆಯ ಛಾಯೆ ರೀತಿಯಾಗಿ ಮಹಿಳಾ ಶಿಕ್ಷಕಿಯ ಮೇಲೆ ಪ್ರಭಾವ ಬೀರಿದೆ ಎಂಬುದನ್ನು ತಿಳಿದುಕೊಳ್ಳುವುದು ಈ ಅಧ್ಯಯನದ ಮಹತ್ವವನ್ನು ತಿಳಿಸುತ್ತದೆ.

## ೧.೫ ಅಧ್ಯಯನದ ವೈಧಾನಿಕತೆ:

ಸಂಶೋಧನೆಗೆ "ಆಧುನಿಕ ಭಾರತದಲ್ಲಿ ವೃತ್ತಿ ನಿರತ ಮಹಿಳೆಯ ಬದಲಾದ ಪಾತ್ರ ಮತ್ತು ಅಂತಸ್ತು" ಎ0ಬ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಲಿಖಿತವಾಗಿ ಮಹಿಳಾ ವಿಷಯಗಳಿಗೆ ಸಂಬಂಧಿಸಿದ ಪುಸ್ತಕಗಳು ಹಾಗೂ ನಿಯತಕಾಲಿಕೆಗಳು, ಇತರೆ ಆಧಾರಗಳನ್ನು ಆಧರಿಸಿ ವೃತಿ ನಿರತ ಮಹಿಳೆಯ ಬದಲಾದ ಪಾತ್ರ ಮತ್ತು

ಅಂತಸ್ತುಗಳಿಗೆ ಸಂಬಂಧಿಸಿದಂತೆ ಸ್ತ್ರೀವಾದಿ ಮಹಿಳಾ ಅಧ್ಯಯನದ ದೃಷ್ಟಕೋನದಿಂದ ನಿರ್ಧಿಷ್ಟ ಚೌಕಟ್ಟಿನೊಳಗೆ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಪ್ರಸ್ತುತ ಸಂಶೋಧನ ವಿಷಯಕ್ಕೆ ಈ ಕೆಳಗಿನ ಸಂಶೋಧನಾ ವಿಧಾನಗಳನ್ನು ಅನುಸರಿಸಲಾಗಿದೆ. ಅವು ಇಂತಿವೆ.

**೧. ಪ್ರಶ್ನಾವಳಿ**

ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿ ಪಡೆಯಲು ಆಯ್ದುಕೊಂಡ ಕ್ಷೇತ್ರಕಾರ್ಯಕ್ಕೆ, ಆ ಕ್ಷೇತ್ರದ ಮಹಿಳೆಯರ ಜೊತೆ ಚರ್ಚಿಸಲು ರಚಿತ ಪ್ರಶ್ನಾವಳಿಯನ್ನು ಸಿದ್ದಪಡಿಸಿ ಅದಕ್ಕೆ ಪೂರಕವಾಗಿ ಅರಚಿತ ಪ್ರಶ್ನಾವಳಿಯ ಸಹಾಯವನ್ನು ಪಡೆಯಲಾಗಿದೆ.

**೨. ಸಂದರ್ಶನಾ ವಿಧಾನ**

ಸಂಶೋಧನಾ ವಿಷಯಕ್ಕೆ ಸಂಬಂಧಪಟ್ಟಂತೆ ವೃತ್ತಿನಿರತ ಮಹಿಳೆಯ ಪ್ರಾಥಮಿಕ ಶಾಲಾ ಹಂತದ ಶಿಕ್ಷಕಿಯರನ್ನು ಮತ್ತು ಲಿಖಿತ ಪುಸ್ತಕಗಳ ಮಾಹಿತಿಗಳೊಂದಿಗೆ ಶಿಕ್ಷಕಿಯರನ್ನು ಸಂದರ್ಶಿಸಿ ಮಾಹಿತಿ ಪಡೆದುಕೊಳ್ಳಲಾಗಿದೆ.

**೩. ಅವಲೋಕನ**

ವೃತ್ತಿ ನಿರತ ಮಹಿಳೆಯರ (ಶಿಕ್ಷಕಿ) ಪಾತ್ರ ಮತ್ತು ಅಂತಸ್ತುಗಳ ಕುರಿತು ಸೂಕ್ಷ್ಮವಾಗಿ ಅವಲೋಕಿಸುವುದು.

**೪. ಮಾಹಿತಿ ಸಂಗ್ರಹಣೆ**

೪.೧ **ದತ್ತಾಂಶ ಸಂಗ್ರಹಣೆ:** ಗಂಗಾವತಿ ತಾಲ್ಲೂಕಿನ ಜನಸಂಖ್ಯೆ, ಸಂಘಟಿತ ವಲಯಕ್ಕೆ ಸಂಬಂಧಿಸಿದ ಪ್ರಾಥಮಿಕ ಶಾಲಾ ಶಿಕ್ಷಕಿಯರ ಬಗ್ಗೆ ಮಾಹಿತಿ ಹಾಗೂ ಕುಟುಂಬದ ಬಗ್ಗೆ ಮಾಹಿತಿಗಳನ್ನು ಪಡೆದುಕೊಳ್ಳಲಾಗುವುದು.

(೪.೨) (ಅ) ಮೂಲ ಆಕರಗಳು:

ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿಕೊಳ್ಳುವುದರ ಜೊತೆಗೆ ಇದಕ್ಕೆ ಪ್ರಶ್ನಾವಳಿ ವೈಧಾನಿಕತೆಯನ್ನು ಅನ್ವಯಿಸಲಾಗಿದೆ. ಯಾವ ಕಾಲಕ್ಕೆ ಸಂಧರ್ಭಕ್ಕೆ ಯಾವ ವಿಧಾನ ಮಹತ್ವ ಪಡೆದುಕೊಳ್ಳುವುದೋ ಆ ವಿಧಾನದ ಮೂಲಕ ರಚಿತಲವಾಗಿ ಹಾಗೂ ಅರಚಿತವಾಗಿ ಪ್ರಶ್ನಾವಳಿಗಳನ್ನು ರಚಿಸಿ ಕೇಳುವುದರ ಮೂಲಕ ಮಾಹಿತಿ ಸಂಗ್ರಹಿಸಿ ಆದಷ್ಟು ಮಟ್ಟಿಗೆ ಎಲ್ಲಾ ಮಾಹಿತಿ ಸಂಗ್ರಹಿಸಲು ಪ್ರಯತ್ನಿಸುವುದರ ಜೊತೆಗೆ ಯೋಗ್ಯ ವಿಧಾನವನ್ನು ನನ್ನ ಸಂಶೋಧನೆಗೆ ಬಳಸಿಕೊಳ್ಳಲಾಗಿದೆ.

(ಆ) ಅನುಷಂಗಿಕ ಆಕರಗಳು:

ಸಂಶೋಧನಾ ವಿಷಯಕ್ಕೆ ಸಂಬಂಧಪಟ್ಟಂತೆ ನಿಯತಕಾಲಿಕೆ, ವೃತ್ತಪತ್ರಿಕೆ, ವರದಿಗಳನ್ನು ಗಮನಿಸಿ ಪೂರಕ ಮಾಹಿತಿ ಸಂಗ್ರಹಿಸಿದೆ. ಸಂಶೋಧನಾ ಪ್ರಬಂಧದ ವಲಯ ಕ್ಷೇತ್ರದ ವಿಷಯಕ್ಕೆ ಸಂಬಂಧಿಸಿದ ಇತರ ಅಕಾಡೆಮಿ ಮಾಹಿತಿಯನ್ನು ಕೂಡ ಪಡೆದುಕೊಳ್ಳಲಾಗಿದೆ.

**ಅಧ್ಯಾಯ-೧ : ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಹಾಗೂ ವೈಧಾನಿಕತೆ**

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ಮಹತ್ವ

೧.೪ ಅಧ್ಯಯನದ ವೈಧಾನಿಕತೆ

**ಅಧ್ಯಾಯ-೨ : ಅಧ್ಯಯನದ ತಾತ್ವಿಕ ನೆಲೆಗಳು**

೨.೧ ವೃತ್ತಿಯ ಪರಿಕಲ್ಪನೆಗಳು–ಒಂದು ಸ್ತ್ರೀವಾದಿ ನೆಲೆಯ ಸ್ತ್ರೀ ವಿಮರ್ಶೆ, ಶ್ರಮ, ವೇತನ, ಸಮಯ ಮತ್ತು ಕುಶಲತೆ

೨.೨ ವೃತ್ತಿಗೆ ಪೂರಕ ಸಂಗತಿಗಳು

ಎ. ಶಿಕ್ಷಣ

# ಗ್ರಂಥಋಣ


೧. ಇಂಗ್ಲೀಷ್ ಮೂಲ ಜೆರಾಲ್ಡಿನ್ ಫೋರ್ಬ್ಸ್ ಕನ್ನಡಕ್ಕೆ ಡಾ. ಹೆಚ್.ಹೆಸ್. ಶ್ರೀಮತಿ, ಆಧುಮಿಕ ಭಾರತದಲ್ಲಿ ಮಹಿಳೆ, ಪುಟ ೫೨

೨. ಇಂಗ್ಲೀಷ್ ಮೂಲ ಜೆರಾಲ್ಡಿನ್ ಫೋರ್ಬ್ಸ್ ಕನ್ನಡಕ್ಕೆ ಡಾ. ಹೆಚ್.ಹೆಸ್. ಶ್ರೀಮತಿ, ಆಧುಮಿಕ ಭಾರತದಲ್ಲಿ ಮಹಿಳೆ, ಪುಟ ೫೨

೩. ಇಂಗ್ಲೀಷ್ ಮೂಲ ಜೆರಾಲ್ಡಿನ್ ಫೋರ್ಬ್ಸ್ ಕನ್ನಡಕ್ಕೆ ಡಾ. ಹೆಚ್.ಹೆಸ್. ಶ್ರೀಮತಿ, ಆಧುಮಿಕ ಭಾರತದಲ್ಲಿ ಮಹಿಳೆ, ಪುಟ ೫೨

೪. ಇಂಗ್ಲೀಷ್ ಮೂಲ ಜೆರಾಲ್ಡಿನ್ ಫೋರ್ಬ್ಸ್ ಕನ್ನಡಕ್ಕೆ ಡಾ. ಹೆಚ್.ಹೆಸ್. ಶ್ರೀಮತಿ, ಆಧುಮಿಕ ಭಾರತದಲ್ಲಿ ಮಹಿಳೆ, ಪುಟ ೫೨

೫. ಪ್ರೀತಿ ಶುಭ ಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ೨೦೦೨, ಪುಟ ೨೫೪

೬. ನಿಯಕಕಾಲಿಕೆ ಪ್ರಜಾವಾಣಿ, ದಿ:೪-೮-೨೦೦೬, ಪುಟ ೧ ಮತ್ತು ೪

## ೨.೧ ವೃತ್ತಿಯ ಪರಿಕಲ್ಪನೆಗಳು-ಒಂದು ಸ್ತ್ರೀವಾದಿ ಸತಿಯ ಸ್ತ್ರೀ ವಿಮರ್ಶೆ

**ಶ್ರಮಃ**

ಅರ್ಥಶಾಸ್ತ್ರವನ್ನು ಸೇರಿಸಿಕೊಂಡು ಸಮಾಜ ವಿಜ್ಞಾನಗಳೆಲ್ಲವೂ ಮೂಲತಃ ಲಿಂಗನಿರಪೇಕ್ಷೆ ಜ್ಞಾನಶಿಸ್ತುಗಳಾಗಿವೆ. ಆದರೆ ವಾಸ್ತವದಲ್ಲಿ ಅವು ಪುರುಷ ಶಾಹಿ ಪುರುಷ ಪ್ರಧಾನತೆಯಿಂದ ಮೆರೆಯುತ್ತಿವೆ. ಪುರುಷರ ನೆಲೆಯಿಂದ ಜ್ಞಾನವನ್ನು ಪರಿಭಾವಿಸಿಕೊಳ್ಳುವುದು ರೂಢಿಯಲ್ಲಿದೆ. ಈ ಎಲ್ಲಾ .ಜಾಞನ –ಶಿಸ್ತುಗಳು ಮಹಿಳೆಯರನ್ನು ಜೈವಿಕ ಘಟಕವೆಂದು ಪರಿಭಾವಿಸುತ್ತಿವೆ ವಿನಃ ಅಭಿವೃದ್ದಿ ಘಟಕವೆಂದು ಪರಿಭಾವಿಸುವುದಿಲ್ಲ. ಸಾಮಾಜಿಕವಾಗಿ ಅಸ್ತಿತ್ವದಲ್ಲಿರುವ ಲಿಂಗ ತಾರತಮ್ಯ, ಲಿಂಗ ಅಸಮಾನತೆ, ಮಹಿಳೆಯರ ಮಂಲಿನ ಹಿಂಸೆಗಳನ್ನು ಜ್ಞಾನ ಶಿಸ್ತುಗಳು ದೃಢಪಡಿಸುತ್ತಿರುವಂತೆ ಕಾಣುತ್ತದೆ. ಅಭಿವೃದ್ದಿಗೆ ಸಂಬಂಧಿಸಿದ ಯಾವುದೇ ಸೂಚಿಯನ್ನು ತೆಗೆದುಕೊಂಡರೂ ಮಹಿಳೆಯರ ಸ್ಥಾನಮಾನ ಹಾಗೂ ಸ್ಥಿತಿಗತಿಗಳು ಪುರುಷರ ಸ್ಥಾನಮಾನ ಹಾಗೂ ಸ್ದಿತಿಗತಿಗಿಂತ ಕೆಳಮಟ್ಟದಲ್ಲಿರುವುದು ಕಂಡು ಬರುತ್ತದೆ. ಇದನ್ನು ಅತ್ಯಂತ ಸ್ಪಷ್ಟವಾಗಿ ಕೆಳಮಟ್ಟದಲ್ಲಿರುವ ಲಿಂಗ ಅನುಪಾತದಿಂದ ತಿಳಿದುಕೊಳ್ಳಬಹುದು. ಜನಸಂಖ್ಯೆಯಲ್ಲಿನ ಮಹಿಳೆಯರ ಮತ್ತು ಪುರುಷರ ಸಂಖ್ಯೆಗಳ ನುಡುವಣ ಅನುಪಾತವು ನಮ್ಮ ಸಮಾಜದ ಸಂಧರ್ಭದಲ್ಲಿ ಪೂರ್ಣಾಂಕಕ್ಕಿಂತ ಕಡಿಮೆಯಿದೆ. ಎಳೆ ಮಕ್ಕಳಿಗೆ (0-6 ವರ್ಷ) ಸಂಬಂಧಿಸಿದಂತೆ ಲಿಂಗ ಅನುಪಾತವು ಕುಸಿಯುತ್ತಿದೆ. ಇವು ಮಹಿಳೆಯರ ದುಸ್ಥಿತಿಯ ಸೂಚಿಗಳಾಗಿವೆ.

ಈ ಬಗೆಯ ತಾರತಮ್ಯ, ಅಸಮಾನತೆಗಳನ್ನು ನಾವು ಮೂಲತಃವಾಗಿ ದುಡಿಮೆಯಿಂದ ಪ್ರಾರಂಭವಾಗಿ ಅವಳ ಪ್ರತಿಯೊಂದು ಚಟುವಟಿಕೆಯ ತನಕ ಗುರುತಿಸಬಹುದು. ಕೇವಲ ಪುರುಷ ಪ್ರಧಾನಕ್ಕೆ ಹೆಚ್ಚಿನ ಆದ್ಯತೆ ನೀಡಿ ಮಹಿಳೆಯು ಸಹಭಾಗಿತ್ವಳಾಗಿ ದುಡಿಮೆಯಲ್ಲಿ ಕಾಣಿಸಿಕೊಂಡರೂ ಸಹ ಅವಳಿಗೆ ಪುರುಷನ ಹಾಗೆಯೇ ಬೆಲೆ ಸಿಗುತ್ತಿಲ್ಲಾ. ನಾವು ಮೊದಲು ದುಡಿಮೆಯ ಸಹಭಾಗಿತ್ವದಲ್ಲಿ ಮಹಿಳೆಯರ ಪ್ರಮಾಣ ಜಾಸ್ತಿ ಇದೆ ಎಂದು ಪರಿಭಾವಿಸಿದರೂ ಸಹ ಲೆಕ್ಕಾಚಾರವಾಗಿ ಪುರುಷರ ಸಹಭಾಗಿತ್ವಕ್ಕೆ ಹೋಲಿಸಿದರೆ ಮಹಿಳಾ ದುಡಿಮೆಯ ಸಹಭಾಗಿತ್ವ ಕೇವಲ ಶೇ.25.66 ರಷ್ಟಾದರೆ ಪುರುಷರು ಶೇ. 51.94 ಎಂದು ಅಂಕಿ ಅಂಶಗಳ ಮೂಲಕ ಸ್ಪಷ್ಟಪಡಿಸಿದರೂ ಸಹ ಇಲ್ಲಿ ಮಹಿಳೆಯ ಕೆಲಸವು ಅಥವಾ ದುಡಿಮೆಯು ಮರೆ ಮಾಚುತ್ತಿದೆ ಎಂದು ಸ್ಪಷ್ಟವಾಗುತ್ತದೆ. ಏಕೆಂದರೆ ಮಹಿಳೆಯು ಕೇವಲ ಆರ್ಥಿಕಾಭಿವೃದ್ದಿಯಂತಹ ದುಡಿಮೆಗಳಲ್ಲಿ ಪಾಲ್ಗೊಂಡರೂ ಸಹ

ಅವಳ ದುಡಿಮೆ ಸಹಭಾಗಿತ್ವ ಕೌಟುಂಬಿಕ ವಲಯದಲ್ಲಿ ಹೆಚ್ಚಾಗಿ ಕಾಣಸಿಗುತ್ತದೆ. ಆದರೆ ಆರ್ಥಿಕವಾಗಿ ನೋಡಿದಾಗ ಅವಳ ಕುಟುಂಬದಲ್ಲಿ ಸಲ್ಲಿಸುವ ಸೇವೆಗಳಿಗೆ ಮೌಲ್ಯ ಸಿಗದೇ ಇರುವುದರಿಂದ ಅವಳ ದುಡಿಮೆಯು ಮರೆಮಾಚುತ್ತಿದೆ ಎಂದು ಹೇಳಬಹುದು. ಪ್ರತಿಯೊಂದು ಹೆಣ್ಣು ಕುಟುಂಬವನ್ನು ಸರಿಯಾಗಿ ನೋಡಿಕೊಂಡು ಹಿರಿಯರ ಸೇವೆ, ಗಂಡನ ಸೇವೆ, ತಾಯಿ-ತಂದೆಯರ ಸೇವೆ, ಅತ್ತೆ-ಮಾವನವರ ಸೇವೆ ಹೀಗೆ ಸೇವೆಗಳ ಪಟ್ಟಿಯು ಬೆಳೆದಂತೆ ಅವಳ ಕೆಲಸವು ಬೆಳೆಯುತ್ತಾ ಹೋಗುವ ಸಂದರ್ಭಗಳು ಹೆಚ್ಚಾಗುತ್ತವೆ. ಜೊತೆಗೆ ಈ ಎಲಲಾ ಕುಟುಂಬ ಸದಸ್ಯರನ್ನು ಚೆನ್ನಾಗಿ ನೋಡಿಕೊಂಡು ಕುಟುಂಬದ ನಿರ್ವಹಣೆ ನಿಭಾಯಿಸಿದಾಗ ಮಾತ್ರ ಅವಳು ಪರಿಪೂರ್ಣ ಮಹಿಳೆ ಎಂದೆನಿಸಿಕೊಳ್ಳುತ್ತಾಳೆ ಎನ್ನುವ ಪುರುಷಾರ್ಥ ಸಂಬೋಧನೆಗಳು ಮಹಿಳೆಯರನ್ನು ಮೂಲೆಗುಂಪಾಗಿಸಿವೆ. ಅವಳು ಸಮಾಜದಲ್ಲಿ ಎರಡನೇ ದರ್ಜೆಯಲ್ಲಿ ಜೀವಿಸುವಂತಹ ಪರಿಸ್ಥಿತಿಗೆ ತಂದು ನಿಲ್ಲಿಸಿದೆ.

ನಮ್ಮ ಆರ್ಥಿಕ ವಲಯದಲ್ಲಾಗಲೀ ಅಥವಾ ಸಾಮಾಜಿಕವಾಗಿಯೇ ಆಗಲೀ "ಲಿಂಗ ಸಂಬಧಿ ದೃಷ್ಟಿಕೋನದಿಂದ ಮಹಿಳೆಯರ ದುಡಿಮೆಯನು ಮೂರು ಬಗೆಯಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಉತ್ಪಾದನೆ ದುಡಿಮೆ, ಮನೆಯೊಳಗೆ ಹಾಗೂ ಮನೆಯ ಹೊರಗೆ ಬೆವರನ್ನು ಹರಸಿ ಮಹಿಳೆಯರು ಉತ್ಪಾದನೆ ದುಡಿಮೆಯಲ್ಲಿ ನಿರತರಾಗಿರುವುದನ್ನು ಗುರುತಿಸಬಹುದಾಗಿದೆ. ಎರಡನೆಯದಾಗಿ ಕೌಟುಂಬಿಕ ದುಡಿಮೆ. ಇದನ್ನು ಮನೆಯೊಳಗಿನ ದುಡಿಮೆಯೆಂದು ಕರೆಯಬಹುದು. ಮೂರನೆಯದು ಸಂತಾನೋತ್ಪತ್ತಿಯ ದುಡಿಮೆ. ಇದು ಮಹಿಳೆಯರಿಗೆ ನಿರ್ಧಿಷ್ಟವಾದ ದುಡಿಮೆಯಾಗಿದೆ. ಮಗುವೊಂದಕ್ಕೆ ಜನ್ಮ ನೀಡುವ, ರಕ್ತವನ್ನು ಹಂಚಿಕೊಳ್ಳುವ ಕ್ರಿಯೆಯೇ ಸಂತಾನೋತ್ಪತ್ತಿ ದುಡಿಮೆ. ಇದನ್ನು ಸಂಗೋಪನಾ ದುಡಿಮೆಯಂತಲೂ ಕರೆಯಬಹುದು. ಮಹಿಳೆಯರು ಮೂರು ಬಗೆಯ ದುಡಿಮೆಯನ್ನು ನಿರ್ವಹಿಸುತ್ತಿದ್ದರೆ ಕೇವಲ ಪುರುಷರ ದುಡಿಮೆ ಎನ್ನುವುದು ಉತ್ಪಾದನಾ ವಲಯಕ್ಕೆ ಮಾತ್ರ ಮೀಸಲು ಎನ್ನುವಂತಾಗಿದೆ"[45]. ಹೀಗಿದ್ದರೂ ಸಹ ಅವಳ ದುಡಿಮೆಗಿಂತಲೂ ಹೆಚ್ಚು ಪ್ರಾಧಾನ್ಯತೆ ಪಡೆದುಕೊಳ್ಳುವುದು ಹೆಚ್ಚಾಗಿ ಪುರುಷರದ್ದೇ ಎಂದು ಹೇಳಬಹುದು. ಈ ರೀತಿಯ ಲಿಂಗ ಸಂಬಂಧಿ ಶ್ರಮ ವಿಭಜನೆ ಮಹಿಳೆಯರಿಗೆ ಆಘಾತಕಾರಿಯಾಗಿ ಪರಿಣಮಿಸಿದೆ. ಇದರಿಂದಾಗಿ ಪ್ರತಿಯೊಂದು ದುಡಿಮೆಯಲ್ಲೂ ಅವಳ ದೈಹಿಕ ಶಕ್ತಿಯ ದುರ್ಬಳಕೆಯಾಗುತ್ತಿದೆ.

ಏಕೆಂದರೆ "ಶ್ರಮವಿಭಜನೆಯು ಅಭಿವೃದ್ಧಿ ಅಧ್ಯಯನಗಳಲ್ಲಿ ಮುಖ್ಯವಾದ ಪರಿಭಾವನೆಯಾಗಿದೆ. ಶ್ರಮವಿಭಜನೆ ಎಂದರೆ ಉತ್ಪಾದನಾ ಪ್ರಕ್ರಿಯೆಯ ವಿವಿಧ ಹಂತಗಳಾಗಿವೆ. ಅಂದರೆ ಒಂದು ವಸ್ತುವಿನ ಉತ್ಪಾದನೆಯ ಪ್ರಕ್ರಿಯೆಗಳನ್ನು ವಿವಿಧ ಹಂತಗಳಾಗಿ ಅಥವಾ ವಿವಿಧ ಕ್ರಮಗಳಾಗಿ ವಿಭಜಿಸುವಂತ ಕ್ರಮವನ್ನು ಶ್ರಮ ವಿಭಜನೆ ಎಂದು ಕರೆಯಲಾಗುತ್ತಿದೆ[2]. ಉದಾಃ ಹೊಲಿಗೆಯ ಕ್ರಮವನ್ನು ತೆಗೆದುಕೊಂಡರೆ, ಅಳತೆ ತೆಗೆದುಕೊಳ್ಳುವುದು. ಅಳತೆ ತಕ್ಕಂತೆ ಕತ್ತರಿಸುವುದು, ವಿವಿಧ ಭಾಗಗಳನ್ನು ಹೊಲೆಯುವುದು ಇತ್ಯಾದಿ. ಈ ರೀತಿಯ ಕಾರ್ಯವನ್ನು ಒಬ್ಬರೇ ಮಾಡಬಹುದು. ಇಲ್ಲವೇ ನಾಲ್ಕೈದು ಜನರು ಸೇರಿ ಮಾಡಬಹುದು. ಆದರೆ ಒಬ್ಬರೇ ಮಾಡುವುದರಿಂದ ಉತ್ಪಾದನಾ ಸರಕುಗಳು ನಿರಂತರ ಸದ್ಬಳಕೆಯಾಗದೇ ಸಮಯದ ನಷ್ಟತೆಯನ್ನು ಅನುಭವಿಸುವುದರ ಜೊತೆಗೆ ಕಾರ್ಯ ವಿಳಂಬತೆಯುಂಟಾಗುವುದನ್ನು ಕಾಣಬಹುದು. ಆದರೆ ಅದೇ ಕೆಲಸವನ್ನು ಸಮೂಹದಲ್ಲಿ ಶ್ರಮ ವಿಭಾಜಿಸಿಕೊಳ್ಳುವುದರ ಮೂಲಕ ಮಾಡುವುದರಿಂದ ಸಂಪನ್ಮೂಲಗಳ ಸದ್ಬಳಕೆಯ ಜೊತೆಗೆ ನಿಗದಿತ ವೇಳೆಯಲ್ಲಿ ಉತ್ಪಾದನಾ ಸರಕುಗಳನ್ನು ಸರಿಯಾಗಿ ಬಳಸಿಕೊಂಡು ಸಮಯ ನಷ್ಟವಿಲ್ಲದೆ ತಯಾರಿಸಬಹುದಾಗಿದೆ. ಈ ರೀತಿಯಾಗಿ ತಯಾರಿಸಿದ ಉತ್ಪಾದಿತ ವಸ್ತು "ಸಂಪಾದನಾ ಚಟುವಟಿಕೆಯಾಗಿದ್ದು, ಮಾರುಕಟ್ಟೆಯನ್ನು ಗುರಿಯಾಗಿ ಇಟ್ಟುಕೊಂಡು ವರಮಾನ ಸಂಬಂಧಿಯಾಗಿ, ವಿನಿಮಯ ಮಹತ್ವದೊಂದಿಗೆ ಮನೆಯ ಹೊರಗೆ ನೆಲೆಗೊಂಡಿರುವುದರ ಜೊತೆಗೆ ಸಾರ್ವಜನಿಕ ಗುಣ ಹೊಂದಿರುವುದಲ್ಲದೆ ಗಣನೆಗೆ, ಮಾಪನಕ್ಕೆ ಒಳಗೊಳ್ಳುವಂತಿದ್ದರೆ[3] ಆ ವಸ್ತುವಿಗೆ ಎಲ್ಲಿಲ್ಲದ ಬೇಡಿಕೆ ಹೆಚ್ಚಾಗುತ್ತದೆ. ಈ ರೀತಿಯ ಉತ್ಪಾದನಾ ವಸ್ತುಗಳನ್ನು ತಯಾರಿಸುವ ಹಾಗೂ ಉತ್ಪಾದಿಸುವುದನ್ನು ನಮ್ಮ ಆರ್ಥಿಕ ವಲಯದಲ್ಲಿ ಹೆಚ್ಚಾಗಿ ಮಹಿಳೆಗಿಂತ ಪುರುಷ ಮಾಡುತ್ತಾನೆ. ಅವನು ಮಾಡುವ ಕೆಲಸಗಳಿಗೆ ಈ ಮೇಲೆ ಹೇಳಿರುವ ಎಲ್ಲಾ ಗುಣಗಳಿರುತ್ತವೆ ಎಂದು ನಮ್ಮ ಸಾಮಾಜಿಕ ವ್ಯವಸ್ಥೆ ಪರಿಭಾವಿಸಿಕೊಂಡಿದೆ. "ಮಹಿಳೆಯ ದುಡಿಮೆಗೆ ಸಂಪಾದನೆಗಿಂತ ಸಂಗೋಪನೆ ಗುಣ ಪ್ರಧಾನವಾಗಿರುತ್ತದೆ[4]. ಅವಳ ದುಡಿಮೆಯು ಕುಟುಂಬದ ಆಶೋತ್ತರಗಳನ್ನು ಈಡೇರಿಸುವುದೇ ವಿನಃ ಮಾರುಕಟ್ಟೆಯಲ್ಲಿ ಬೆಲೆ ಸಿಗಲಿಕ್ಕೆ ಸಾಧ್ಯವಿರುವಂತಹ ದುಡಿಮೆಯಾಗಿರುವುದಿಲ್ಲಾ ಎಂದು ನಮ್ಮ ವ್ಯವಸ್ಥೆ ಬಿಂಬಿಸಿದೆ. ಆದಾಗ್ಯೂ ಅವರು ಗಳಿಸುವ ವರಮಾನ ಬದುಕು ಸಾಗಿಸಲಿಕ್ಕೆಂದು ಪರಿಭಾವಿಸಲಾಗಿದೆ.

ಆದರೆ ಇತ್ತೀಚಿನ ದಿನಗಳಲ್ಲಿ ಉತ್ಪಾದನಾ ಕ್ರಿಯೆ ಸಂಕೀರ್ಣವಾಗುತ್ತಿರುವುದನ್ನು ಗಮನಿಸಿದಾಗ ಅಲ್ಲಿ ಶ್ರಮವಿಭಜನೆಯ ಅಳವಡಿಕೆಯನ್ನು ಸಹ ನೋಡಬಹುದಾಗಿದೆ. ಅಂದರೆ ಭೌಗೋಳಿಕವಾಗಿ ಮಾಡಿಕೊಂಡಿರುವುದು ಕಂಡುಬರುತ್ತದೆ. ಇಲ್ಲಿ ಪ್ರಮುಖವಾಗಿ ಗಮನಿಸಬೇಕಾದ ಅಂಶವೇನೆಂದರೆ ಶ್ರಮ ವಿಭಜನೆಯು ಚಾರಿತ್ರಿಕ ವಿಕಾಸ ಹಾಗೂ ನಾಗರಿಕತೆಯ ವಿಕಾಸದೊಂದಿಗೆ ಬೆಳೆದುಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಶ್ರಮ ಎಂದರೆ ಕೆಲಸ, ವಿಭಜನೆ ಎಂದರೆ ಹಂಚಿಕೆ ಎಂದು. ಶ್ರಮ ವಿಭಜನೆಯನ್ನು ಅರ್ಥೈಸಿದಾಗ ಇದು ಯಾರ ನಡುವೆ ಹಂಚಿಕೆಯಾಯಿತು? ಎಂಬ ಪ್ರಶ್ನೆಗೆ ಉತ್ತರವೇ ಪುರುಷ ಮತ್ತು ಮಹಿಳೆಯರ ನಡುವೆ ಹಂಚಿಕೆಯಾದಂತಹ ಕೆಲಸಗಳು ಎಂಬುದು ನಮಗೆ ಸ್ಪಷ್ಟವಾಗುತ್ತದೆ. ಇಲ್ಲಿ ಪಾರಿಭಾಷಿಕವಾಗಿ ಹೇಳುವುದಾದರೆ, ಶ್ರಮ ವಿಭಜನೆ ಎಂದರೆ ಪುರುಷ ಮತ್ತು ಸ್ತ್ರೀಯರ ನಡುವೆ ಹಂಚಿಕೆಯಾದ ಕೆಲಸಗಳು ಅಥವಾ ಅದನ್ನೇ ಲಿಂಗಸಂಬಂಧಿ ಶ್ರಮವಿಭಜನೆ ಎಂದು ಹೆಸರಿಸಲಾಗಿದೆ. ಪುರುಷ ಮತ್ತು ಮಹಿಳೆಯರ ನಡುವ ಉತ್ಪಾದನಾ ಪ್ರಕ್ರಿಯೆಯನ್ನು ವರ್ಗೀಕರಿಸುವ ಒಂದು ಕ್ರಮವನ್ನು ಲಿಂಗ ಸಂಬ0ಧಿ ಕ್ರಮ ವಿಭಜನೆ ಎಂದು ಕರೆಯಲಾಗತ್ತಿದೆ. ಈ ರೀತಿಯ ಶ್ರಮವಿಭಜನೆಯು ಮನುಷ್ಯ ನಾಗರಿಕತೆಯಲ್ಲಿ ರೂಪುಗೊಂಡಂತ ಒಂದು ಮುಖ್ಯವಾದಂತ ಘಟ್ಟವಾಗಿದೆ. ಆದರೆ ಇಂದು ಅನೇಕ ಬದಲಾವಣೆಗಳ ಕಾರಣದಿಂದಾಗಿ ಮಹಿಳೆಯರು ಉದ್ಯೋಗ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದಾರೆ. ಸಾಮಾಜಿಕವಾಗಿ ಅವರು ಪುರುಷರಿಗೆ ಸರಿಸಮವಾಗಿ ದುಡಿಯುತ್ತಿದ್ದಾರೆ. ಮನೆಯ ಹೊರಗೆ ಲಿಂಗ ಸ0ಬಂಧಿ ಶಮ ವಿಭಜನೆಯ ಒತ್ತಡ ಕಡಿಮೆಯಾಗುತ್ತಿದೆ. ಉದ್ಯೋಗದ ಕ್ಷೇತ್ರದಲ್ಲಿ ಆಕೆಯ ದುಡಿಮೆಯು ಅನಿವಾರ್ಯವಾಗಿದೆ. ಮನೆಯ ಹೊರಗೆ ಪುರುಷರಿಗೆ ಸರಿಸಮವಾಗಿ ದುಡಿಯುತ್ತಿರುವ ಕಾರಣವಾಗಿ ಆಕೆಗೆ ಕೌಟುಂಬಿಕ ದುಡಿಮೆಯಿಂದ ವಿನಾಯಿತಿ ದೊರೆಯುವುದಿಲ್ಲಾ. ಏಕೆಂದರೆ ಕೌಟುಂಬಿಕ ದುಡಿಮೆಯನ್ನು ಮಹಿಳೆಗೆ ನಿರ್ಧಿಷ್ಟಪಡಿಸಲಾಗಿದೆ. ಹೀಗಾಗಿ ಮಹಿಳೆಯರು ಮನೆಯೊಳಗೆ ಹಾಗೂ ಮನೆಯ ಹೊರಗೆ ಎರಡೂ ಕ್ಷೇತ್ರಗಳಲ್ಲಿ ದುಡಿಯಬೇಕಾದ ಪ್ರಮೇಯ ಬಂದಿದೆ. ಇದರಿಂದಾಗಿ ಯಾವುದೇ ಕ್ಷೇತ್ರದಲ್ಲಿ ಆಕೆ ದೊಡ್ಡ ಸಾಧನೆಯನ್ನು ಮಾಡಲಾಗದ ಸ್ಥಿತಿಯಲ್ಲಿದ್ದಾಳೆ. ಇಬ್ಬಗೆಯ ಹೊಣೆಗಾರಿಕೆಯಿಂದಾಗಿ ಅವಳು ದಿನವಹಿ ಪುರುಷನಿಗಿಂತ ಹೆಚ್ಚು ಗಂಟೆಗಳ ಕಾಲ ದುಡಿಯಬೇಕಾಗಿದೆ. ಇದರಿಂದ ಮಹಿಳೆಯರಿಗೆ ಉಂಟಾಗುತ್ತಿರುವ ಪರಿಣಾಮವನ್ನು ನಾವು ಊಹಿಸಿಕೊಳ್ಳಬಹುದಾಗಿದೆ[5]. ಆದ್ದರಿಂದಾಗಿ

ಶ್ರಮ ವಿಭಜನೆಯು ಮಹಿಳೆಯರಿಗೆ ಆಘಾತಕಾರಿಯಾಗಿ ಪರಿಣಮಿಸಿದೆ. ಅಲ್ಲದೆ ಅದು ಅವಳಿಗೆ ಯಾವುದೇ ಕ್ಷೇತ್ರದಲ್ಲಿ ಉನ್ನತ ಮಟ್ಟದ ಸಾಧನೆಯನ್ನು ಮಾಡುವಲ್ಲಿ ಪ್ರೋತ್ಸಾಹಿಸುತ್ತಿಲ್ಲಾ ಪರಂತು ಮಾರಕವಾಗುತ್ತಿದೆ ಎಂದೇ ಹೇಳಬಹುದು.

ಮಹಿಳೆಯು ಮಾಡುವ ಕೆಲಸದ ವೇಳೆಯು ಪುರುಷರ ಕೆಲಸದ ವೇಳೆಗಿಂತ ಅಧಿಕವಾಗಿರುತ್ತದೆ. ಆದರೆ ಅವರು ತಮ್ಮದೇ ಕೆಲಸದ ಅವಧಿ ಹೆಚ್ಚು ಹಾಗೂ ಅದು ಬಹಳ ಕಷ್ಟಕರವಾಗಿಕರುತ್ತದೆ ಎನ್ನುವ ರೀತಿಯಲ್ಲಿ ಮೇಲು ದನಿಯಲ್ಲಿ ಹೇಳಿಕೊಳ್ಳುತ್ತಾರೆ. ಜೊತೆಗೆ ಈ ಸಾಮಾಜಿಕ ವ್ಯವಸ್ಥೆ ಪುರುಷರ್ನೇ ಹೆಚ್ಚಾಗಿ ಪ್ರತಿಬಿಂಬಿಸುತ್ತದೆ. ಹಾಗಾಗಿ ಮಹಿಳೆಯರು ಮನೆಯಲ್ಲಿ ಬೆಳಗಿನ ಮುಂಜಾವಿನಿಂದ ಹಿಡಿದು ರಾತ್ರಿ ಊಟ ಮಾಡಿ ಮಲಗುವ ತನಕ ಗಾಣದ ಎತ್ತಿನಂತೆ ದುಡಿದರೂ ಸಹ ಆ ದುಡಿಮೆ ದುಡಿಮೆ ಎನಿಸಿಕೊಳ್ಳದೇ ಮಹಿಳೆಯ ಜವಾಬ್ದಾರಿಯೆನ್ನುವ ಮಾತಿನಲ್ಲಿಯೇ ಮುಗಿಸಿ ಬಿಡುತ್ತಾರೆ. ಒಂದು ವೇಳೆ ಅವಳು ಹಠ ಮಾಡಿ ದುಡಿಯಬೇಕು ಎನ್ನುವುದಾದರೆ ಮನೆಯ ಕೆಲಸದ ಜೊತೆಗೆ ಶ್ರಮ ಪಡಲು ಸಿದ್ದವಾಗು ಎಂದು ಹೇಳುತ್ತಾರೆ. ಒಂದು ವೇಳೆ ಅವಳು ಕೆಲಸ ಮಾಡುವುದು ಮನೆಯವರಿಗೆ ಇಷ್ಟ ಇರದೇ ಇದ್ದರೆ ಅವಳನ್ನು ಬೇಕು ಬೇಕಂತ ಕೆಲಸಕ್ಕೆಂದು ತಳ್ಳಿ ಹೆಚ್ಚಿನ ರೀತಿಯಲ್ಲಿ ಮನೆಗೆಲಸಗಳಿಗೆ ತೊಡಗಿಸಿ ನಂತರ ಹೊರಗಿನ ಉದ್ಯೋಗಕ್ಕೆ ಹೋಗಲು ಅನುಮತಿ ನೀಡುತ್ತಾರೆ.

ಮಹಿಳೆಯು ಮನೆಯ ಹೊರಗೆ ಆಚೆ ಕಸ-ಮುಸುರೆ ತೊಳೆಯಲಿಕ್ಕೆ ಹೋದರೂ ಸದರಿ ಅಥವಾ ಅವಳು ಮುನಿಸಿಪಾಲಿಟಿ ಕಸ ಗುಡಿಸಲಿಕ್ಕೆ ಸೇರಿದರೂ ಸರಿ ಅವಳ ಕೆಲಸ ಪುರುಷ ಮಾಡುವಷ್ಟು ಕೆಲಸದಷ್ಟು ಮಹತ್ವ ಪಡೆದುಕೊಳ್ಳುವುದಿಲ್ಲ. ಏಕೆಂದರೆ ಆ ಕೆಲಸಗಳಿಗೆ ಮಹಿಳೆ ಪಡುವ ಶ್ರಮ ಗಣನೆಗೆ ಬರುವುದಿಲ್ಲ. ಆದರೆ ಅದೇ ಕೆಲಸ ಪುರುಷ ಏನಾದರೂ ಮಾಡಿದರೆ ಅಂದರೆ ಉದಾಃ ಬೀದಿ ಕಸ ಗುಡಿಸುವ ಕೆಲಸಕ್ಕೆ ಸೇರಿದರೆ ಅಲ್ಲಿನ ಶ್ರಮ ಮಹಿಳೆಯಷ್ಟೇ ಪುರುಷನಾದವನು ಶ್ರಮ ವಹಿಸಿದರೂ ಸಹ ಮಹಿಳೆಗಿಂತ ಪುರುಷ ಶ್ರಮವೇ ಮೇಲು ಎನ್ನುವ ರೀತಿಯಲ್ಲಿ ಸೊಸೈಟಿ ಗೋಚರಿಸುತ್ತದೆ. ಮಹಿಳೆಯು ಇಂದು ಎಷ್ಟೇ ಉನ್ನತ ಸ್ಥಾನ ಪಡೆದುಕೊಳ್ಳಲು ಸಮರ್ಥತೇಯನ್ನು ಪಡೆದರೂ ಸಹ ಅವಳಿಗೆ ಲೋಕಸಭೆ ಮತ್ತು ವಿಧಾನಸಭೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ನೀಡುವುದು ಇನ್ನು ಸಾಧ್ಯವಾಗಿಲ್ಲ. ಏನೇ ಇದ್ದರೂ ಮಹಿಳೆಯರ ಕಾರ್ಯ ವ್ಯಾಪ್ತಿಯು ಕುಟುಂಬಕ್ಕೆ ಮಾತ್ರ ಎಂಬ ನಂಬಿಕೆ ಪೂರ್ವಗ್ರಹ ಇನ್ನೂ ಸಮಾಜದಲ್ಲಿ ಗಟ್ಟಿಯಾಗಿದೆ. ಇಲ್ಲಿ ಪುರುಷ ಮತ್ತು ಮಹಿಳೆಯರು ಒಂದು ಕೆಲಸಕ್ಕೆ

ನಿರ್ವಹಿಸುವ ಶ್ರಮ ಒಂದೇ ಆಗಿದ್ದರೂ ಕೂಡ ಪುರುಷ ನಿರ್ವಹಿಸುವ ಕೆಲಸಕ್ಕೆ ಮಾತ್ರ ಹೆಚ್ಚಿನ ಪ್ರಾಧಾನ್ಯತೆ ಸಿಗುತ್ತಿದ್ದು, ಹೆಣ್ಣಿನ ಕೆಲಸಕ್ಕೆ ಮಾತ್ರ ಅಷ್ಟೊಂದು ಮಹತ್ವ ಸಿಗುತ್ತಿಲ್ಲಾ ಕಾರಣವೇನು? ಎಂಬ ಪ್ರಶ್ನೆ ನಮ್ಮ ಮುಂದೆ ಕಂಡು ಬರುತ್ತದೆ. ಹೀಗೆ ನಾವು ಶ್ರಮವನ್ನು ಸ್ತ್ರೀ ಹಿನ್ನೆಲೆಯಲ್ಲಿ ನೋಡಿದಾಗ ಇಲ್ಲಿ ಸ್ತ್ರೀ ಪುರುಷರಿಬ್ಬರೂ ಮಾಡುವ ಕೆಲಸಕ್ಕೆ ಹಾಕುವ ಶ್ರಮ ಒಂದೇ ಆಗಿದ್ದರೂ ಸಹ ಮಹಿಳೆಗೆ ಅನ್ಯಾಯವಾಗುತ್ತಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ.

**ವೇತನಃ** ಸ್ವಾತಂತ್ರ್ಯ ನಂತರ ನಮ್ಮ ದೇಶದಲ್ಲಿ ನೌಕರಿ-ಉದ್ಯೋಗಗಳಲ್ಲಿ ದುಡಿಯುವ ಮಹಿಳೆಯರ ಸಂಖ್ಯೆ ಅಗಾಧವಾಗಿ ಬೆಳೆದಿದೆ. ಕರ್ನಾಟಕವನ್ನೇ ತೆಗೆದುಕೊಂಡರೆ ಸರ್ಕಾರಿ ಸೇವೆಯಲ್ಲಿಲರುವ ಒಟ್ಟು ನೌಕರರ ಸಂಖ್ಯೆ 1991 ರಲ್ಲಿ 4.11 ಲಕ್ಷವಿದ್ದದ್ದು, 1995 ರಲ್ಲಿ 4.24 ಲಕ್ಷಕ್ಕೆ ಏರಿಕೆಯಾಗಿದೆ. ಇದರಲ್ಲಿ 1991 ರಲ್ಲಿ ಮಹಿಳಾ ನೌಕರರ ಪ್ರಮಾಶ ಶೇ. 17.87 (0.73 ಲಕ್ಷ) ರಷ್ಟಿದ್ದುದ್ದು, 1995 ರಲ್ಲಿ ಶೇ. 21.38 (0.91 ಲಕ್ಷ) ಏರಿಕೆಯಾಗಿದೆ. ಅಖಿಲ ಭಾರತದ ಮಟ್ಟದಲ್ಲೂ ಇದೇ ಬಗೆಯ ಬದಲಾವಣೆ ಕಂಡು ಬಂದಿದೆ. ಒಂದು ಕಾಲಕ್ಕೆ ಮನೆಯ ಹೊರಗೆ ದುಡಿಯದಿರುವುದು ಪ್ರತಿಷ್ಟೆಯ ಸಂಗತಿಯಾಗಿತ್ತು. ಆದರೆ ಇಂದು ಪರಿಸ್ಥಿತಿ ಬದಲಾಗಿದೆ. ಮಹಿಳೆಯರು ಮನೆಯ ಹೊರಗೆ ನೌಕರಿ ಮಾಡುವುದು ಪ್ರತಿಷ್ಟೆಗೆ ಗರಿ ಮೂಡಿಸುವ ಸಂಗತಿಯಾಗಿಬಿಟ್ಟಿದೆ. ಇಂದು ದುಡಿಯುವ ಮಹಿಳೆಯರಿಗೆ ಹೆಚ್ಚಿನ ಆದ್ಯತೆ ಇದ್ದರೂ ಅದರ ಹಿಂದಿರುವ ರಾಜಕೀಯತೆ ಅವಳನ್ನು ತುಳಿಯುವ ಮಟ್ಟದಲ್ಲಿದೆ. ಉದ್ಯೋಗ, ಹುದ್ದೆಗಳಿಗೆ ಸಂಬಂಧಿಸಿದಂತೆ ಮಹಿಳೆಯರು ತಾರತಮ್ಯವನ್ನು ಎದುರಿಸುತ್ತಿದ್ದಾರೆ. ವೇತನದಲ್ಲಿಯ ಲಿಂಗ ಸ0ಬಂಧಿ ತಾರತಮ್ಯವು ಅತ್ಯಂತ ಸ್ಪಷ್ಟವಾಗಿ ಕಂಡುಬರುತ್ತದೆ. ಒಂದೇ ಬಗೆಯ ಕೆಲಸದಲ್ಲಿ ನಿರತರಾಗಿದ್ದರೂ ಮಹಿಳೆಯರು ಮತ್ತು ಪುರುಷರ ಕೂಲಿಯಲ್ಲಿ ವ್ಯತ್ಯಾಸಗಳು ಯಾಕೆ ಉಂಟಾಗುತ್ತಿವೆ? ಎಂಬುದನ್ನು ತಿಳಿದುಕೊಳ್ಳುವುದು ಅವಶ್ಯಕ.

ಗ್ರಾಮೀಣ ಪ್ರದೇಶದಲ್ಲಿ, ಕೃಷಿ ಚಟುವಟಿಕೆಗಳಲ್ಲಿ ಮಹಿಳೆ-ಪುರುಷರ ನಡುವೆ ಕೂಲಿಯಲ್ಲಿನ ವ್ಯತ್ಯಾಸಗಳು ಸ್ಪಷ್ಟವಾಗಿ ಕಂಡು ಬರುತ್ತಿವೆ. ನಗರ ಪ್ರದೇಶಗಳಲ್ಲಿ, ಕೈಗಾರಿಕೆಗಳಲ್ಲಿ ಒಂದೇ ಬಗೆಯ ಕೆಲಸಕ್ಕೆ ಸ0ಬಂಧಿಸಿದಂತೆ ಕೂಲಿಯಲ್ಲಿ ವ್ಯತ್ಯಾಸಗಳಿರುವುದಿಲ್ಲಾ. ಆದರೆ ಇಲ್ಲಿ ಮಹಿಳೆಯರು ಕೇವಲ ಕೆಳಮಟ್ಟದ ಹುದ್ದೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಿದೆ. ಸೇವಾ ಕ್ಷೇತ್ರದಲ್ಲಿಯೂ ಮಹಿಳೆಯರು ಕೆಳಮಟ್ಟದ ಹುದ್ದೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಉನ್ನತ ಮಟ್ಟದ ಹುದ್ದೆಗಳಲ್ಲಿ ಮಹಿಳೆಯರ ಪ್ರಮಾಣ ತುಂಬಾ ಕಡಿಮೆ. ಇದರಿದಾಗಿ, ಮಹಿಳೆಯರು ಮತ್ತು ಪುರುಷರ

ನಡುವೆ ವರಮಾನಕ್ಕೆ ಸಂಬಂಧಿಸಿದಂತೆ ವ್ಯತ್ಯಾಸಗಳು ಕಂಡು ಬರುತ್ತವೆ" ಹೀಗಾಗಿ ನಮ್ಮಲ್ಲಿ ಮಹಿಳೆಗೆ ಸಂಬಂಧಿಸಿದಂತೆ ಈ ರೀತಿಯ ತಾರತಮ್ಯತೆಗಳು ನಡೆಯುತ್ತಿವೆ ಇಂತಹ ವ್ಯತ್ಯಾಸಗಳನ್ನು ಪ್ರಮುಖವಾಗಿ ನಾವು ಅಸಂಘಟಿತ/ಅನೌಪಚಾರಿಕ ವಲಯದಲ್ಲೂ ಮಹಿಳೆಯರು ಮತ್ತು ಪುರುಷರ ಕೂಲಿ ವರಮಾನದಲ್ಲಿ ತೀವ್ರ ವ್ಯತ್ಯಯಗಳು ಕಂಡು ಬರುತ್ತವೆ[6]. ಇಲ್ಲಿ ಪ್ರಮುಖವಾಗಿ ಕೂಲಿ ಎಂಬುದರ ಅರ್ಥವನ್ನು ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಏಕೆಂದರೆ ಇಲ್ಲಿ ಕೂಲಿ, ವೇತನ, ಸಂಬಳ, ಮಜೂರಿ ಹೀಗೆ ಬೇರೆ ಬೇರೆ ಹೆಸರಿನಿಂದ ಕರೆಯಲಾಗುತ್ತಿದ್ದು ಆಡಳಿತಾಧಿಕಾರಿಗಳಿಗೆ, ಗುಮಾಸ್ತರಿಗೆ, ವೈದ್ಯರಿಗೆ ಮೊದಲಾದವರಿಗೆ ಕೊಡುವ ಕೂಲಿಗೆ "ಸಂಬಳ" ಎಂದೂ, ಕಾರ್ಮಿಕರಿಗೆ ಕೊಡುವ ಕೂಲಿಗೆ "ಮಜೂರಿ" ಇಲ್ಲವೆ "ಕೂಲಿ" ಎಂದೂ, ವಕೀಲರಿಗೆ, ವೈದ್ಯರಿಗೆ, ತೆರಿಗೆ ಸಲಹೆಗಾರರಿಗೆ ಮೊದಲಾದವರಿಗೆ ಕೊಡುವ ಕೂಲಿಗೆ "ಶುಲ್ಕ" ಎಂದೂ, ವ್ಯಾಪಾರಿ ಮಧ್ಯಸ್ಥಗಾರರಿಗೆ ಕೊಡುವ ಕೂಲಿಗೆ "ದಲಾಲಿ" ಎಂದೂ ಮತ್ತು ವಿಶೇಷ ಕಾರಣಗಳಿಗಾಗಿ ಕೊಡುವ ಹಣಕ್ಕೆ "ಭತ್ಯೆ" ಎಂದೂ, ಕರೆಯುತ್ತಾರೆ. ತುಟ್ಟಿಭತ್ಯೆ, ಮನೆಯ ಬಾಡಿಗೆ ಭತ್ಯೆ, ಪ್ರಯಾಣದ ಭತ್ಯೆ, ಮೊದಲಾಲದವು ಭತ್ಯೆಯ ಉದಾಹರಣೆಗಳಾಗಿವೆ. ಹಾಗಾದರೆ ವೇತನ ಅಥವಾ ಕೂಲಿ ಎಂದರೆ, ಶ್ರಮಕ್ಕೆ ಪ್ರತಿಫಲವಾಗಿ ಕೊಡುವ ಹಣಕ್ಕೆ "ವೇತನ" ಎಂದೂ ಕರೆಯುತ್ತಾರೆ. ಇಂತಹ ಶ್ರಮವು ಮಾನಸಿಕವಾಗಿರಬಹುದು ಇಲ್ಲವೇ ದೈಹಿಕವಾಗಿರಬಹುದು.

ಇಂತಹ ವೇತನವನ್ನು ಕೈಗಾರಿಕೆಗಳಲ್ಲಿ ಮತ್ತು ಕೃಷಿಯಲ್ಲಿ ತೊಡಗಿದ ಕಾರ್ಮಿಕರು ತಮ್ಮ ಶ್ರಮಕ್ಕೆ ಪಡೆಯುವ ಪ್ರತಿಫಲವನ್ನು "ಕೂಲಿ" ಎಂತಲೂ ಕರೆಯಿಸಿಕೊಳ್ಳುತ್ತದೆ. ಈ ರೀತಿಯ ಕೂಲಿ/ವೇತನವು ಹಣದ ರೂಪದಲ್ಲಿ ಕೊಡಬಹುದು ಇಲ್ಲವೆ ವಸ್ತುಗಳ ರೂಪದಲ್ಲಿ ಕೊಡಬಹುದು. ಹೆಚ್ಚಾಗಿ ಉದ್ಯೋಗದಲ್ಲಿರುವವರು ಹಣದ ರೂದಲ್ಲಿಯೇ ಪಡೆದುಕೊಳ್ಳುವುದು ಸರ್ವೇ ಸಾಮಾನ್ಯ. ಇದನ್ನು ತಿಂಗಳಿಗೆ ಅಥವಾ ವಾರದಂತೆ ಅಥವಾ ಹದಿನೈದು ದಿವಸಕ್ಕೆ ಹೀಗೆ ವೇತನ ಪಡೆದುಕೊಳ್ಳುವ ಲೆಕ್ಕಾಚಾರ ಆಯಾ ಕೆಲಸಕ್ಕೆ ಅನುಗುಣವಾಗಿ ಭಿನ್ನ ರೀತಿಯಲ್ಲಿ ಪಡೆದುಕೊಳ್ಳಲಾಗುತ್ತದೆ.

"ವೇತನವನ್ನು ಹಣದ ರೂಪದಲ್ಲಿ ಕೊಟ್ಟಾಗ ಅದು ಹಣದ ರೂಪದ ಕೂಲಿಯಾಗುತ್ತದೆ. ಆದರೆ ಹಣದ ರೂದ ಕೂಲಿಯು ಕಾರ್ಮಿಕನ ಜೀವನ ಮಟ್ಟವನ್ನು ತಿಳಿಸುವುದಿಲ್ಲಾ. ಆದರೆ ವಾಸ್ತವ ಕೂಲಿಯು ಇದನ್ನು ವ್ಯಕ್ತಪಡಿಸುತ್ತಿದೆ. "ವಾಸ್ತವ ಕೂಲಿ" ಎಂದರೆ ಹಣದ ರೂಪದ ಕೂಲಿಯಿಂದ ಕೊಳ್ಳಬಹುದಾದ ವಸ್ತುಗಳ ಮತ್ತು ಸೇವೆಗಳ ಪ್ರಮಾಣವಾಗಿದೆ. ಉದಾಹರಣೆಗೆಃ ಒಬ್ಬ ಕಾರ್ಮಿಕರಿಗೆ ತಿಂಗಳಿಗೆ ೧೫೦೦ ರೂ. ಕೂಲಿ ಸಿಕ್ಕರೆ ಅದು ಇವನ ಹಣದ ರೂಪದ ಕೂಲಿಯಾಗಿರುತ್ತದೆ. ಈ ೧೫೦೦ ರೂಗಳಿಂದ ಅವನು ಎಷ್ಟು ವಸ್ತುಗಳನ್ನು ಮತ್ತು ಸೇವೆಗಳನ್ನು ಕೊಂಡು ಕೊಳ್ಳುತ್ತಾನೆಂಬುದನ್ನು ವಾಸ್ತವ ಕೂಲಿಯು ತಿಳಿಸುತ್ತದೆ. ಹಣದ ರೂದ ಕೂಲಿಗಿಂತಲೂ ವಾಸ್ತವ ಕೂಲಿಯೇ ಹೆಚ್ಚು ಮಹತ್ವದ್ದು. ಏಕೆಂದರೆ ಹಣವು ಕೇವಲ ಒಂದು ಸಾಧನ ಮಾತ್ರ. ಆದ್ದರಿಂದ ಕಾರ್ಮಿಕನು ತನ್ನ ಉಪ ಜೀವನಕ್ಕೆ ಬೇಕಾಗುವ ಸರಕುಗಳನ್ನು ಮತ್ತು ಸೇವೆಗಳನ್ನು ಕೊಂಡುಕೊಳ್ಳಬೇಕಾಗುತ್ತದೆ. ಇವುಗಳನ್ನು ಅವನು ಎಷ್ಟು ಕೊಂಡುಕೊಳ್ಳಬೇಕೆಂಬುದೇ ಮುಖ್ಯ.

ವಾಸ್ತವ ಕೂಲಿ ಮತ್ತು ಹಣದ ರೂಪದ ಕೂಲಿಗಳು ಯಾವಾಗಲೂ ಒಏದೇಯಾಗಿರುವುದಿಲ್ಲ. ಉದಾಹರಣೆಗೆ ಹತ್ತು ವರ್ಷಗಳ ಹಿಂದೆ ಒಬ್ಬ ಕಾರ್ಮಿಕನ ಕೂಲಿಯು ೧೦೦೦ ರೂ. ಇದ್ದದ್ದು ಈಗ ೨೦೦೦ ರೂಗಳಿರಬಹುದು. ಇಲ್ಲಿ ಅವನ ಹಣದ ರೂಪದ ಕೂಲಿಯು ದ್ವಿಗುಣವಾಗಿದೆ. ಆದರೆ ಅವ ವಾಸ್ತವ ಕೂಲಿಯು ದ್ವಿಗುಣವಾಗಿದೆಯೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಅದು ಬೆಲೆಯ ಮಟ್ಟವನ್ನವಲಂಬಿಸಿದ್ದು ಬೆಲೆಗಳೂ ದ್ವಿಗುಣವಾಗಿದ್ದರೂ ಅವ ವಾಸ್ತವ ಕೂಲಿಯಲ್ಲಿ ಯಾವ ಹೆಚ್ಚಳವೂ ಕಂಡು ಬರುವುದಿಲ್ಲ. ಉದಾಹರಣೆಗೆ : ಒಬ್ಬ ಕಾರ್ಮಿಕನ ದಿನಗೂಲಿ ಹತ್ತು ವರ್ಷಗಳ ಹಿಂದೆ ರೂ. ೫೦ ಇದ್ದು ಈಗ ೧೦೦ ರೂ. ಆಗಿದೆಯೆಂದು ಭಾವಿಸೋಣ. ಆದರೆ ಆತ್ಮೀಯ ಬೆಲೆ ಆಗ ರೂ. ೫ ಗೆ ಒಂದು ಕಿಲೋ ಇದ್ದದ್ದು ಈಗ ಅದು ೧೦ ರೂ. ಆಗಿದ್ದರೆ ಅವನ ಹಣದ ೂಪದ ಕೂಲಿ ದ್ವಿಗುಣವಾಗಿದ್ದರೂ ಅವನ ವಾಸ್ತವ ಕೂಲಿ ಮೊದಲಿನಷ್ಟೇ ಇರುತ್ತದೆ[7]. ಈ ರೀತಿಯಲ್ಲಿ ವೇತನ/ಕೂಲಿ ಇದ್ದಾಗ ಅಲ್ಲಿ ಜೀವನ ಮಟ್ಟವನ್ನು ಗುರುತಿಸುವುದು ತುಂಬಾ ಕಷ್ಟಕರವಾಗುತ್ತದೆ. ಏಕೆಂದರೆ ಬಡ ಕುಟುಂಬಗಳಿಗೆ ಸಂಬಂಧಿಸಿದಂತೆ, ಬಡ ಕೂಲಿಗಾರರಿಗೆ ಸಂಬಂಧಿಸಿದಂತೆ ಅವರು ಪುರುಷರಿರಲಿ ಅಥವಾ ಮಹಿಳೆಯರಿರಲಿ, ಕೂಲಿಯು ತುಂಬಾ ಕೆಳಮಟ್ಟದಲ್ಲಿರುವುದನ್ನು ಗುರುತಿಸಬಹುದು. ಇದು ಸಮಸ್ಯೆಯ ಒಂದು ಮುಖವಾಗಿದೆ. ಇಂತಹ ಸಮಸ್ಯೆಗಳಲ್ಲಿ ತೀವ್ರ ಆಘಾತ ಅನುಭವಿಸುವವರು ಮಹಿಳಾ ದುಡಿಮೆಗಾರರಾಗಿದ್ದಾರೆ.

ಅದೇ ರೀತಿಯಾಗಿ ಹಳ್ಳಿಗಳಲ್ಲಿ "ಕೃಷಿ ಕ್ಷೇತ್ರದಲ್ಲಿ ಕೆಲವು ಬಗೆಯ ಕೆಲಸಗಳನ್ನು ಮಹಿಳೆಯರಿಗೆ ಮಾತ್ರ ಮೀಸಲಿಡಲಾಗಿದೆ. ಉದಾಹರಣೆಗೆ ಸಸಿ ನೆಡುವುದು, ಕಳೆ ತೆಗೆಯುವುದು, ಪೈರು ಕಟಾವು ಮಾಡುವುದು, ನೀರು ಹಾಕುವುದು ಇತ್ಯಾದಿ ಕೆಲಸಗಳು ಮಹಿಳೆಯರಿಗೆ ನಿರ್ಧಿಷ್ಟಪಡಿಸಿದ ಕೆಲಸಗಳಾಗಿವೆ. ಇಲ್ಲಿ ಸಂಪನ್ಮೂಲಗಳ ನಿರ್ವಹಣೆ, ನಿರ್ಣಹ ತೆಗೆದುಕೊಳ್ಳುವ ಕಾರ್ಯ, ಮಾರುಕಟ್ಟೆ ಸಂಬಂಧಿ ಕೆಲಸಗಳು ಮಾತ್ರ ಪುರುಷರಿಗೆ ಮೀಸಲಿಡಲಾಗಿದೆ. ಉದ್ಯೋಗಕ್ಕೆ ಸ0ಬಂಧಿಸಿದಂತೆ ತಾರತಮ್ಯವಿರುವುದರಿಂದ ಸ್ತ್ರೀ-ಪುರುಷರ ನಡುವೆ ವರಮಾನ ಹಾಗೂ ವೇತನದಲ್ಲಿ ತಾರತಮ್ಯವಿರುವುದನ್ನು ಕಾಣಬಹುದಾಗಿದೆ[8]

"ಕೈಗಾರಿಕೆ-ಕಛೇರಿಗಳಿಗೆ ಸಂಬಂಧಿಸಿದಂತೆಯೂ ಲಿಂಗ ಸಂಬಂಧಿ ಪ್ರತ್ಯೇಕೀಕರಣ ಹಾಗೂ ತಾರತಮ್ಯಗಳು ಆಚರಣೆಯಲ್ಲಿರುವುದನ್ನು ನೋಡಬಹುದಾಗಿದೆ. ಕಾನೂನಿನಲ್ಲಿ ಸಮಾನ ಕೆಲಸಕ್ಕೆ ಸಮಾನ ವೇತನ ಎಂಬ ನಿಮಯವಿದ್ದರೂ ವಾಸ್ತವದಲ್ಲಿ ಇದು ಆಚರಣೆಯಲ್ಲಿಲ್ಲ. ಕೈಗಾರಿಕೆ ಮತ್ತು ಕಛೇರಿಗಳಲ್ಲಿ ಕೆಳಸ್ತರದ ಹುದ್ದೆಗಳಲ್ಲಿ ಮಾತ್ರ ಮಹಿಳೆಯರನ್ನು ನೇಮಿಸಿಕೊಳ್ಳಲಾಗುತ್ತದೆ. ಮೇನೇಜ್‌ಮೆಂಟ್ ಮಟ್ಟದಲ್ಲಿ ನಮಗೆ ಮಹಿಳೆಯರು ದುಡಿಯುವುದು ಕಂಡು ಬರುವುದಿಲ್ಲ.[9] ಗ್ರಾಮೀಣ ಪ್ರದೇಶದಲ್ಲಿ ಕೃಷಿ ಕ್ಷೇತ್ರದಲ್ಲಿ ಕೆಲಸ ಮಾಡುವ ಮಹಿಳೆಯರಿಗೆ ವೇತನದಲ್ಲಿ ತುಂಬಾ ತಾರತಮ್ಯತೆ ಇಂದಿಗೂ ಸಹ ಕಂಡು ಬರುತ್ತಿದೆ. ಅದಕ್ಕೆ ಮುಖ್ಯ ಕಾರಣಗಳೇನು? ಎಂಬ ಪ್ರಶ್ನೆಗೆ ಕಾರಣಗಳನ್ನು ಹುಡುಕಿದಾಗ ನಮಗೆ ಈ ಕೆಳಗಿನ ಅಂಶಗಳು ಕಂಡು ಬರುತ್ತಿವೆ.

(1) ವೇತನದಲ್ಲಿನ ಲಿಂಗ ಸಂಬಂಧಿ ತಾರತಮ್ಯಕ್ಕೆ ಮುಖ್ಯ ಕಾರಣಗಳೆಂದರೆ ಮಹಿಳಾ ದುಡಿಮೆಗಾರರ ಅಸಂಘಟಿತ ಸ್ವರೂಪ.

(2) ಕೃಷಿಯಲ್ಲಿ ದುಡಿಮೆಯು ಋತುಮಾನಕ್ಕನುಗುಣವಾಗಿ ಬದಲಾಗುತ್ತಿರುತ್ತದೆ.

(3) ಕೃಷಿಯಲ್ಲಿ ಕೂಲಿಕಾರ ಮಹಿಳೆಯರು ಮಾಡುವ ಕೆಲಸವನ್ನು ಮನೆಯ ಮಹಿಳೆಯರೇ ಮಾಡಿಬಿಡಬಹುದು.

(4) ಮಹಿಳಾ ನಿರ್ಧಿಷ್ಟ ಕೆಲಸಗಳಿಗೆ ಸಾಮಾನ್ಯವಾಗಿ ಕೂಲಿ ಕಡಿಮೆ ಇರುತ್ತದೆ. ಉದಾಃ ಬಟ್ಟೆ ಹೊಲಿಯುವುದು, ಕಳೆ ತೆಗೆಯುವುದು, ಸಸಿ ನೆಡುವುದು, ಕಾಳು ಒಕ್ಕಣೆ ಮಾಡುವುದು ಇತ್ಯಾದಿ.

(5) ಮನೆವಾರ್ತೆ ಮತ್ತು ಸಂಗೋಪನಾ ಚಟುವಟಿಕೆಗಳನ್ನು ಮಹಿಳೆಯರು ನಿರ್ವಹಿಸಬೇಕಾಗಿರುವುದರಿಂದ ಮನೆಯ ಹೊರಗಿನ ಕೆಲಸಗಳಿಗೆ ಸಮಯಕ್ಕೆ ಸರಿಯಾಗಿ ಹಾಜರಾಗಲು ಸಾಧ್ಯವಿಲ್ಲ. ಇದರಿಂದಾಗಿ ತಡವಾಗಿ ಕೆಲಸಕ್ಕೆ ಹಾಜರಾಗುವ ಮಹಿಳಾ ದುಡಿಮೆಗಾರರಿಗೆ ಕೂಲಿ ಕಡಿಮೆ ಇರುತ್ತದೆ.

(6) ಗ್ರಾಮೀಣ ಪ್ರದೇಶದಲ್ಲಿರುವ ಭೂರಹಿತ ಕೃಷಿ ಕಾರ್ಮಿಕರಿಗೆ ದುಡಿಮೆಯ ಅವಕಾಶಗಳು ಬಹಳ ಸೀಮಿತವಾಗಿರುತ್ತವೆ. ಇದರಿಂದಾಗಿ ಮಹಿಳೆಯರು ಕಡಿಮೆ ಕೂಲಿಗಾಗಿ ದುಡಿಯಬೇಕಾಗುತ್ತಿದೆ. ಅದನ್ನು ಮಾಡದಿದ್ದರೆ ಅವರು ಉಪವಾಸದಿಂದ ಇರಬೇಕಾಗುತ್ತದೆ.

(7) ಸಾಂಪ್ರದಾಯಿಕ ಕಸುಬುಗಳ, ಕರಕುಶಲ ಕಲೆಗಳು ನಾಶವಾಗಿ ಹೋಗಿರುವುದರಿಂದ ಗ್ರಾಮೀಣವಾಸಿ ಮಹಿಳೆಯರು ಆಕುಶಲ ಕೆಲಸಗಾರರಾಗಿದ್ದಾರೆ. ಸಹಜವಾಗಿ ಅಕುಶಲ ಕೆಲಸಗಾರರಿಗೆ ಕೂಲಿ ಕಡಿಮೆ.

(8) ಗ್ರಾಮೀಣವಾಸಿ ಮಹಿಳೆಯರು ತಮ್ಮ ಸ್ವಸ್ಥಾನವನ್ನು ಸ್ವಗ್ರಾಮವನ್ನು ಬಿಡಲು ಸಿದ್ದವಿರುವುದಿಲ್ಲ. ಅವರಿಗೆ ಸಂಚಲನೆ, ಸಂಚಾರದ ನಿರ್ಭಂಧನೆಗಳಿರುತ್ತವೆ. ಇದರಿಂದಾಗಿ ಕೂಲಿ ಕೆಲಸದ ಅವಕಾಶಗಳು ಪರಿಮಿತವಾಗಿರುತ್ತವೆ.

(9) ಗ್ರಾಮೀಣ ಪ್ರದೇಶಗಳಲ್ಲಿ ಜಮೀನ್ದಾರರು ಭೂರಹಿತ ಕೃಷಿ ಕಾರ್ಮಿಕರನ್ನು ಜೀತದಾಳುಗಳನ್ನಾಗಿ ಇಟ್ಟುಕೊಳ್ಳುವುದು ಸಾಮಾನ್ಯ. ಕುಟುಂಬದ ಪುರುಷ ಸದಸ್ಯರು ಜೀತದಾಳಾಗಿ ಜಮೀನ್ದಾರರ ಮನೆಗಳಲ್ಲಿ ದುಡಿಯುವ ಸಂಧರ್ಭಗಳಲ್ಲಿ ಮಹಿಳೆಯರು ಕೆಲಸ ಹುಡುಕಿಕೊಂಡು ವಲಸೆ ಹೋಗುವುದು ಸಾಧ್ಯವಿಲ್ಲ. ಇಂತಹ ಪರಿಸ್ಥಿತಿಯಲಲಿ ಮಹಿಳೆಯರ ಕೂಲಿ ಕನಿಷ್ಟವಿರುತ್ತದೆ. ವೇತನ ತಾರತಮ್ಯಕ್ಕೆ ಜೀತ ಸಾಲವು ಕಾರಣವಾಗಿರುತ್ತದೆ.

(10) ಗ್ರಾಮೀಣ ಪ್ರದೇಶದಲ್ಲಿರುವ ಮಹಿಳಾ ದುಡಿಮೆಗಾರರು ಮುಕ್ತ ದುಡಿಮೆಗಾರರಲ್ಲ. ಮಾರ್ಕ್ಸ್ ಹೇಳುವ ಫ್ರೀ ಲೇಬರ್ಸ್ ಎನ್ನುವ ವರ್ಗಕ್ಕೆ ಮಹಿಳಾ ದುಡಿಮೆಗಾರರು ಸೇರುವುದಿಲ್ಲ. ಅವರ ದೇಹ ಬದುಕು ಕುಟುಂಬಕ್ಕೆ ಒತ್ತೆಯಾಗಿರುತ್ತದೆ. ಗಂಡನಿಗೆ ಒತ್ತೆಯಾಗಿರುತ್ತದೆ. ಗಂಡನ ಬದುಕು ಸಾಲಕ್ಕೆ,

ಜೀತಕ್ಕೆ ಒತ್ತೆಯಿದ್ದಾಗ ಆತನ ಹೆಂಡತಿಯ ಬದುಕೂ ಒತ್ತೆಯಾಗಿರುತ್ತದೆ. ಇಲ್ಲಿ ಅವರ ಕೂಲಿಯು ಹೊಟ್ಟೆ ಬಟ್ಟೆಗೆ ಮಾತ್ರ ಸಮವಾಗಿರುತ್ತದೆ.

ಆದರೆ ಇವುಗಳ ಜೊತೆಗೆ ಸಾಮಾನ್ಯವಾಗಿ ಗುರುತಿಸುವಂತಹ ಕಾರಣಗಳನ್ನು ನಾವು ನೋಡಬಹುದು.

- ಮಹಿಳೆಯರನ್ನು ಸಮಾಜದಲ್ಲಿ ಗೃಹಿಣಿಯರೆಂದು ಪರಿಗಣಿಸಲಾಲಗುತ್ತದೇ ವಿನಾ ದುಡಿಮೆಗಾರರೆಂದಲ್ಲ. ಮಹಿಳೆಯರ ದುಡಿಮೆಯು ಕೇವಲ ಅನುಷಂಗಿಕವಾದುದು. ದುಡಿಮೆಯು ಅವರ ಬದುಕಿನ ಅವಿಭಾಜ್ಯ ಅಂಗವಲ್ಲ. ಈ ಕಾರಣದಿಂದಾಗಿ ಮಹಿಳೆಯರಿಗೆ ಕಡಿಮೆ ಕೂಲಿ ನಿಗದಿಯಾಗುವುದನ್ನು ಕಾಣಬಹುದು.
- ಮಹಿಳೆಯರು ಕೂಲಿವೇತನದ ರೂಪದಲ್ಲಿ ಗಳಿಸುವುದು ಕುಟುಬದ ದೃಷ್ಟಿಯಿಂದ ಪೂರಕ ಗಳಿಕೆಯೇ ವಿನಃಪ್ರಧಾನ ಗಳಿಕೆಯಲ್ಲ. ಮಹಿಳೆಯರನ್ನು ಬ್ರೆಡ್ ವಿನ್ನರ್ಸ್ ಎಂದು ಸಮಾಜ ಪರಿಗಣಿಸುವುದಿಲ್ಲ. ಇದರಿಂದಾಗಿ ಮಹಿಳಾ ಕೂಲಿಕಾರರಿಗೆ ಎಷ್ಟು ಕೊಟ್ಟರೂ ನಡೆಯುತ್ತದೆ ಎಂಬ ದೋರಣೆ ಸಮಾಜದಲ್ಲಿ ನೆಲೆಗೊಂಡಿದೆ.
- ಮಾನವ ಬಂಡವಾಳದ ದೃಷ್ಟಿಯಿಂದ ಮಹಿಳಾ ದುಡಿಮೆಗಾರರಿಗೂ ಮತ್ತು ಪುರುಷ ದುಡಿಮೆಗಾರರಿಗೂ ನಡುವೆ ಅನೇಕ ವ್ಯತ್ಯಾಸಗಳನ್ನು ಗುರುತಿಸಬಹುದು. ಸಾಕ್ಷರತೆ, ಉನ್ನತ ಶಿಕ್ಷಣ, ವೃತ್ತಿ ಸಂಬಂಧಿ ತರಬೇತಿ ಮುಂತಾದ ಸಂಗತಿಗಳಲ್ಲಿ ಮಹಿಳೆಯರ ಸ್ಥಾನಮಾನವು ಪುರುಷರ ಸ್ಥಾನಮಾನಕ್ಕಿಂತ ಕಡಿಮೆ. ಇದರಿಂದಾಗಿ ಅವರ ಕೂಲಿ ಪ್ರಮಾಣ ಕಡಿಮೆಯಿದೆ.
- ಇಬ್ಬಗೆಯ ಹೊಣೆಗಾರಿಕೆಯಿಂದಾಗಿ ವೃತ್ತಿ ಸಂಬಂಧಿ ಕ್ಷೇತ್ರಗಳಲ್ಲಿ ಮಹಿಳೆಯರು ಉನ್ನತ ಹುದ್ದೆಗಳಿಗೆ ಬಡ್ತಿ ಪಡೆಯುವ ಸಾಧ್ಯತೆ ಕಡಿಮೆ. ತಾವು ಆರಂಭದಲ್ಲಿ ಯಾವ ಹುದ್ದೆಗೆ ಸೇರಿಕೊಂಡಿರುತ್ತಾರೋ ಅದೇ ಹುದ್ದೆಯಲ್ಲಿ ಜೀವನಪೂರ್ತಿ ದುಡಿಯುವುದನ್ನು ಕಾಣಬಹುದು. ಇದರಿಂದಾಗಿ ಮಹಿಳೆಯರು ಮತ್ತು ಪುರುಷರು ವರಮಾನದಲ್ಲಿ ವ್ಯತ್ಯಾಸವನ್ನು ಕಾಣಬಹುದಾಗಿದೆ"[53].

ಈ ಎಲ್ಲಾ ಮೇಲಿನ ಕಾರಣಗಳಿಂದಾಗಿ ಮಹಿಳೆಯು ಕಡಿಮೆ ಕೂಲಿ ತೆಗೆದುಕೊಳ್ಳುವಂತಾಗಿದ್ದು ಅವಳ ದುಡಿಮೆಯನ್ನು ಪುರುಷನ ದುಡಿಮೆಗೆ ಸರಿಸಮನಾಗಿ ಪರಿಗಣಿಸುತ್ತಿಲ್ಲಾ. ಈ ರೀತಿಯ ವ್ಯತ್ಯಯಗಳಿಂದಾಗಿ ಅವಳ ಸಂಪಾದನೆ ಕೇವಲ ಕುಟುಂಬ ನಿರ್ವಹಣೆಗೆಂದೇ ಪರಿಗಣಿಸಲಾಗುತ್ತಿದೆಯೇ ವಿನ್ನ ಆರ್ಥಿಕಾಭಿವೃದ್ಧಿ ದೃಷ್ಟಿಯಿಂದ

ಅಲ್ಲ ಎಂದೇ ಹೇಳಬಹುದು. ಅಂದರೆ ಅವಳ ದುಡಿಮೆಯನ್ನು ಆರ್ಥಿಕವಾಗಿ ಲೆಕ್ಕಾಚಾರಕ್ಕೆ ತೆಗೆದುಕೊಳ್ಳದೆ ಇರುವುದೂ ಸಹ ಅವಳ ವೇತನದ ಮೇಲೆ ಅಗಾಧ ಪರಿಣಾಮ ಬೀರಿದೆ ಎಂದು ಹೇಳಬಹುದು.

ಮಹಿಳೆಯುರ ದುಡಿಮೆಗೆ ಸ0ಬಂಧಿಸಿದಂತೆ ತುಂಬಾ ಸಂಕೀರ್ಣವಾದ ಸಂಗಾತಿಯೆಂದರೆ ಮಹಿಳೆಯರು ಮಾಡುವ ಅನೇಕ ಕೆಲಸಗಳಿಗೆ ಸಂಭಾವನೆ ಇರುವುದಿಲ್ಲ. ಅವರ ಅನೇಕ ದುಡಿಮೆಗೆ ಯಾರೂ ಕೂಲಿ ನೀಡುವುದಿಲ್ಲ. ಈ ಕಾರಣಕ್ಕೆ ಅವರನ್ನು ದುಡಿಮೆಗಾರರೆಂದು ಪರಿಗಣಿಸಲು ಜ್ಞಾನಶಿಸ್ತುಗಳು ಸಿದ್ದವಿಲ್ಲ. ಪುರುಷರು ಮಾಡುವ ಕೆಲವು ಕೆಲಸಗಳಿಗೆ ಸಂಭಾವನೆ ಇರುವುದಿಲ್ಲ. ಆದರೆ ಮಹಿಳೆಯರಿಗೆ ಸಂಬಂಧಿಸಿದಂತೆ ಕೂಲ ರಹಿತ ಅಥವಾ ಸಂಭಾವನೆ ರಹಿತ ದುಡಿಮೆ ಪ್ರಮಾಣವು ಪುರುಷರ ದುಡಿಮೆಗೆ ಹೋಲಿಸಿದರೆ ಅಧಿಕವಾಗಿದೆ. ಮಹಿಳೆಯರ ಗೃಹವಾರ್ತೆ ದುಡಿಮೆಯ ಆರ್ಥಿಕ ಸಾಮಾಜಿಕ ಮಹತ್ವವನ್ನು ಜ್ಞಾನಶಿಸ್ತುಗಳು ಗುರುತಿಸುವುದರಲ್ಲಿ ಸೋತಿವೆ. ಮನೆಗೆಲಸದಲ್ಲಿ ಕೂಲಿಯಾಳುಗಳಾಗಿ ದುಡಿಯುವ ಮಹಿಳೆಯರಿಗೆ ಕೂಲಿಯನ್ನು ಅನೇಕ ಸಂಧರ್ಭಗಳಲ್ಲಿ ವಸ್ತುರೂಪದಲ್ಲಿ ನೀಡಲಾಲಗುತ್ತಿದೆ. ಇದರಿಂದಾಗಿ ಅವರು ಶೋಷಣೆಗೆ ಒಳಗಾಗಿದ್ದಾರೆ. ದುಡಿಮೆಯನ್ನು ಮಾರ್ಕೆಟ್ ಕೇಂದ್ರಿತವಾಗಿ ನಿರ್ವಹಿಸುವುದರಿಂದ ಮಹಿಳಾ ದುಡಿಮೆಗಾರರಿಗೆ ಅನ್ಯಾಯವಾಗುತ್ತಿದೆ. ಮಾರ್ಕೆಟ್ಟೇತರ ದುಡಿಮೆ, ಅಂದರೆ ಗೃಹವಾರ್ತೆ ಮತತು ಮನೆಗೆಲಸದಾಳುಗಳ ದುಡಿಮೆಯು ದುಡಿಮೆಯ ವ್ಯಾಖ್ಯೆಗೆ ಒಳಪಡುವುದಿಲ್ಲ. ಮನೆಯಲ್ಲಿ ಅಡುಗೆ ಮಡಲು ಕೂಲಿಯವರನ್ನು ನೇಮಿಸಿಕೊಂಡು ಅವನು ಪುರುಷನಾಗಿದ್ದಲ್ಲಿ ಅವನಿಗೆ ಹೆಚ್ಚಿನ ಸಂಬಳ ಕೊಟ್ಟು ದುಡಿಮೆಯೆಂದು ಪರಿಗಣಿಸುವುದು. ಆದರೆ ಅದೇ ಕೆಲಸವನ್ನು ಒಬ್ಬ ಗೃಹಿಣಿ ಮನೆಯಲ್ಲಿ ಮಾಡಿದರೆ ಅದು ದುಡಿಮೆಯಲ್ಲಾ. ಜೊತೆಗೆ ಅದಕ್ಕೆ ನಿಗದಿತ ವೇತನವು ಇಲ್ಲಾ. ಇದು ಅಲ್ಲದೆ ಅವಳು ಮನೆಗೆ ಸೇವೆಯ ರೂಪದಲ್ಲಿ ಕೆಲಸವನ್ನು ಮಾಡುತ್ತಾಳೆ. ಅಂದರೆ ದನ ಮೇಯಿಸುವುದು, ಹುಲ್ಲು ತರುವುದು, ಅಡುಗೆ ಕೆಲಸ ಇತ್ಯಾದಿ. ಇವುಗಳಿಗೆಲ್ಲಾ ಸಂಭಾವನೆ ಇಲ್ಲ. ಈ ರೀತಿ ಎ್ಲಾ ಕೆಲಸಗಳು ಸೇವೆ ಎಂದು ಪರಿಗಣಿಸಲಾಗುತ್ತದೆ. ಆದರೆ ಅದೇ ಕೆಲಸಕ್ಕೆ ಆಳುಗಳನ್ನು ಇಟ್ಟುಕೊಂಡರೆ ಅದಕ್ಕೆ ಕೂಲಿ ಕೊಡುತ್ತಾರೆ. ಆದರೆ ಅದೇ ಮಹಿಳೆಯರು ಮಾಡಿದರೆ ಕೂಲಿ ಕೊಡಲಾಗುವುದಿಲ್ಲ. ಇದು ಕೇವಲ ಗ್ರಾಮೀಣ ಪ್ರದೇಶಗಳಲ್ಲಿ ಅಷ್ಟೇ ಅಲ್ಲ. ಇಂದು ನಗರಗಳಲ್ಲಿ ಜಾಗತೀಕರಣದಿಂದಾಗಿ ಉದ್ಯೋಗ ಮತತು ಉದ್ಯಮಗಳಲ್ಲಿ ಹಲವು ಪಲ್ಲವಗಳುಂಟಾಗುತ್ತಿದೆ. ಬಂಡವಾಳದ ಮುಕ್ತಿ ಚಲನೆ ಎಂಬುದು. ಬಂಡವಾಳ

ಕೇಂದ್ರೀಕರಣವೇ ಆಗಿದ್ದು, ಅದು ಉದಮದ ಬಹುತ್ವವನ್ನು ಇಲ್ಲವಾಗಿಸುತ್ತಿದೆ. ಬೃಹತ್ ಬಂಡವಾಳದ ಉದ್ದಿಮೆಗಳು ಸಣ್ಣ ಬಂಡವಾಳ, ಸಹಕಾರಿ ಕ್ಷೇತ್ರ, ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳು ಇತ್ಯಾದಿ ಎಲ್ಲಾ ಬಂಡವಾಳದ ವೈವಿಧ್ಯವನ್ನು ನಾಶ ಮಾಡುತ್ತಿದೆ. ಬೃಹತ್ ಯಂತ್ರೋಪಕರಣಗಳಿಂದ ಹಿಡಿದು ಸಣ್ಣ ಸಣ್ಣ ಗೃಹೋತ್ಪನ್ನಗಳು ಬಹುರಾಷ್ಟ್ರೀಯ ಕಂಪನಿಗಳು, ನಿಯಮಾನುಸಾರ ಉತ್ಪಾದಿತವಾಗಲಾರಂಭಿಸಿದೆ. ಇದರಿಂದ ಸಣ್ಣ ಉದ್ದಿಮೆದಾರರ ಅಸ್ತಿತ್ವ ಸಂಕಟಕ್ಕೊಳಕ್ಕಾಗದಂತೆ ಅಲ್ಲಿನ ಉದ್ಯೋಗಗಳ ಸ್ಥಿತಿ ಅತಂತ್ರಗೊಳ್ಳತೊಡಗಿದೆ. ಬೃಹತ್ ಬಂಡವಾಳದಿಂದ ಉಂಟಾಗುತ್ತಿರುವ ಯಾಂತ್ರೀಕರಣ ಉತ್ಪಾದನಾ ಸರಕಿನ ಪ್ರಮಾಣವನ್ನು ಹೆಚ್ಚಿಸುತ್ತಿದ್ದರೂ ಸಣ್ಣ ಉದ್ದಿಮೆಗಳಲ್ಲಿ ಕಳೆದುಹೋದ ಉದ್ಯೋಗಗಳನ್ನು ಸೃಷ್ಟಿಸುವುದರಲ್ಲಿ ವಿಫಲವಾಗುತ್ತಿದೆ. ಇದರ ಪರಿಣಾಮವಾಗಿ ಮಹಿಳಾ ಉದ್ಯೋಗಿಗಳು ಕೆಲಸದ ಸ್ಥಳದಿಂದ ಕಾಣೆಯಾಗುತ್ತಿದ್ದಾರೆ[11]. ಉದ್ಯಮವು ಮಹಿಳಾ ಉದ್ಯೋಗಿಗಳಿಗೆ ಸರಿಯಾಗಿ ಕೆಲಸ ನೀಡದೇ ಇರುವುದರಿಂದ ಅವರಿಗೆ ವೇತನ ಬರದೇ ಜೀವನ ನಡೆಸಲಿಕ್ಕೆ ಹಾಗೂ ದೈನಂದಿನ ಬದುಕಿಗೆ ತುಂಬಾ ಶ್ರಮಿಸಬೇಕಾದ ಸಂಧರ್ಭ ಎದುರಾಗುತ್ತದೆ.

ಮಹಿಳೆಗೆ ಯಾವ ಕೆಲಸ ಕೊಡುವುದರ ಮೂಲಕ ಹೆಚ್ಚಿನ ರೀತಿಯಲ್ಲಿ ಕೆಲಸ ಮಾಡಿಸಬಹುದು ಎಂಬುದರ ಬಗ್ಗೆ ಯೋಚಿಸಿ ಉದ್ಯಮಗಳಲ್ಲಿ ಮಹಿಳಾ ಉದ್ಯೋಗಿಗಳಿಗೆ ಕೆಲಸಗಳನ್ನು ಕೊಟ್ಟು ಹೆಚ್ಚಿನ ಕೆಲಸ ಮಾಡಿಸಿಕೊಳ್ಳುವುದರ ಮೂಲಕ ಕಡಿಮೆ ವೇತನ ನೀಡಲಾಗುತ್ತದೆ. ಅಲ್ಲಿ ಅವಳು ಕಡಿಮೆ ವತನ ಪಡೆದುಕೊಂಡು ಪುರುಷನಿಗಿಂತಲೂ ಹೆಚ್ಚಿನ ವೇಳೆಯಲ್ಲಿ ಕೆಲಸವನ್ನು ಮಾಡುವುದು ಗಮನಕ್ಕೆ ಬರುತ್ತದೆ. ಈ ರೀತಿಯಿಂದಾಗಿ ಮಹಿಳೆಯು ಪುರುಷನಿಂದ ಅನ್ಯಾಯಕ್ಕೆ ಒಳಗಾದರೂ ಸಹ ಅನಿವಾರ್ಯವಾಗಿ ಅವಳ ಬದುಕು ನಿರ್ವಹಣೆಗೋಸ್ಕರ ಅತ್ಯಂತ ಕಡಿಮೆ ಮಟ್ಟದಲ್ಲಿನ ಸಣ್ಣ ಪುಟ್ಟ ಕೆಲಸಗಳಲ್ಲಿ ಹೆಚ್ಚಾಗಿ ತೊಡಗುವುದರ ಮೂಲಕ ಪುರುಷನು ಬಿಟ್ಟು ಹೋದ ಕೆಲಸಗಳನ್ನು ಎತ್ತಿಕೊಂಡು ಕಾರ್ಯ ನಿರ್ವಹಿಸುವುದು. ಅಲ್ಲದೆ ಚಿಕ್ಕಪುಟ ಅಂಗನವಾಡಿ, ಶಿಕ್ಷಕಿಯ ಕೆಲಸ, ಶಿಶುಪಾಲನಾ ಕೇಂದ್ರಗಳ ನಿರ್ವಹಣೆ, ಟೈಪಿಸ್ಟ್, ಹೀಗೆ ಸಣ್ಣಪುಟ್ಟ ದಿನವಿಡೀ ನಿರ್ವಹಿಸುವ ಕೆಲಸಗಳನ್ನು ಮಾಡಲು ಮುಂದಾಗುವಂತಹುದು ಸರ್ವೇ ಸಾಮಾನ್ಯವಾಗಿದೆ.

ಇಲ್ಲಿ ಮಹಿಳೆಯರಿಗೆ ಪರೋಕ್ಷವಾಗಿ ಕೆಲಸ ಮಾಡುವುದು ಜಾಸ್ತಿಯಾಗಿ ಕಂಡು ಬರುತ್ತದೆ. ಹಾಗಾಗಿ ಅವರಿಗೆ ನಿರ್ಧಿಷ್ಟ ವೇತನ ಪಡೆದುಕೊಳ್ಳುವಲ್ಲಿ ತಾರತಮ್ಯಕ್ಕೆ ಒಳಗಾಗುತ್ತಾರೆ. ಉದಾಃ ಸೇವೆ ಸಲ್ಲಿಸುವಂತಹ ಕೆಲಸಗಳು ಜೊತೆಗೆ ಪುರುಷ ಮಾಡಲಾರದಂತಹ ಕೆಲಸಗಳನ್ನು ಮಾತ್ರ ಮಹಿಳೆಯರು ಮಾಡುವುದರಿಂದ ಅವರಿಗೆ ವೇತನದಲ್ಲಿ ತಾರತಮ್ಯತೆ ಉಂಟಾಗುತ್ತದೆ ಎಂದು ಹೇಳಬಹುದು. ಉದಾಃ ಹೆರಿಗೆ, ಅಡಿಗೆ ಕೆಲಸ ಮಹಿಳಾ ನಿರ್ಧಿಷ್ಟ ಕೆಲಸಗಳೆಂದು ಪರಿಗಣಿಸಲ್ಪಟ್ಟಂತಹ ಕೆಲಸಗಳು.

ಒಟ್ಟಿನಲ್ಲಿ ಮಹಿಳೆಯರು ಪುರುಷನ ಹಾಗೆ ಭಾರ ಕೆಲಸಗಳನ್ನು ಮಾಡಲಿಕ್ಕೆ ಸಬಲಳಲ್ಲಾ ಎಂದು ತೀರ್ಮಾನಿಸಿ ಅವಳಿಗೆ ಚಿಕ್ಕಪುಟ್ಟ ಉದ್ಯೋಗಗಳಲ್ಲಿ ತೊಡಗುವಂತೆ ಮಾಡಿ ದಿನವಿಡೀ ದುಡಿದರೂ ಸಹ ಅವಳು ಹೆಚ್ಚಿನ ವೇತನ ಪಡೆದುಕೊಳ್ಳಲು ಸಾಧ್ಯವಿಲ್ಲ ಎನ್ನುವಂತಹ ಕೆಲಸಗಳನ್ನು ಮಾತ್ರ ಅವಳಿಗೆ ಬಿಟ್ಟುಕೊಡಲಾಗುತ್ತಿದೆ. ಇದರಿಂದಾಗಿ ಪರೋಕ್ಷವಾಗಿ ಕೆಲಸಗಳನ್ನು ಹಂಚಿಕೆ ಮಾಡುವಲ್ಲಿನಿಂದ ಹಿಡಿದು ಅವಳು ಮುಂದೆ ವೇತನ ತೆಗೆದುಕೊಳ್ಳುವವರೆಗೂ ಸಹ ಅವಳನ್ನು ಪುರುಷ ಪ್ರಧಾನ ವ್ಯವಸ್ಥೆ ತಾರತಮ್ಯತೆ ತೋರುತ್ತಿದೆ.

**ಸಮಯಃ**

ಪುರುಷ ಪ್ರಧಾನ ಸಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಸಮಯದ ಬಿಡುವು ಇರಲಿಕ್ಕಿಲ್ಲವೆಂದೇ ಹೇಳಬಹುದು. ಏಕೆಂದರೆ ಅವಳು ತನ್ನ ಮನೆಯ ಏಳ್ಗೆಗೋಸ್ಕರವಾಗಿ ಸಂಪೂರ್ಣವಾಗಿ ದಿನವಿಡೀ ದುಡಿಯುವುದರಲ್ಲಿಯೇ ನಿರತಳಾಗಿರುತ್ತಾಳೆ. ಅವಳು ಮನೆಯ ಕೆಲಸದಿಂದ ಹಿಡಿದು ಆಫೀಸ್-ಕಛೇರಿಗಳಲ್ಲಿ ಸಲ್ಲಿಸುವ ಸೇವೆಯನ್ನು ಪರಿಗಣನೆಗೆ ತೆಗೆದುಕೊಂಡರೆ ಅವಳಿಗೆ ಸಮಯ ಎನ್ನುವುದು ಸ್ವಲ್ಪವೂ ಸಿಕ್ಕುವುದಿಲ್ಲ. ವೈಯಕ್ತಿಕವಾಗಿ ವಿಶ್ರಾ0ತಿ ತೆಗೆದುಕೊಳ್ಳಲಿಕ್ಕೆ ಅವಳಿಗೆ ವೇಳೆಯ ಅಭಾವ ಕಂಡು ಬರುತ್ತದೆ. ಏಕೆಂದರೆ ದುಡಿಯದೇ ಇರುವ ಮಹಿಳೆ ಪ್ರಾಯಶಃ ಇರಲಾರಳು. ಮಹಿಳೆ ಮತ್ತು ದುಡಿಮೆ ಪರ್ಯಾಯ ಪದಗಳೇನೋ ಅನ್ನುವಷ್ಟು ಮಟ್ಟಿಗೆ ಹೆಣ್ಣಿನ ಜೀವನದಲ್ಲಿ ಕೆಲಸ ಬೆಸೆದುಕೊಂಡಿದೆ.

ಸಮಾಜದಲ್ಲಿ ಗಂಡು-ಹೆಣ್ಣು ಇಬ್ಬರೂ ಅನೇಕ ರೀತಿಯಲ್ಲಿ ಕರ್ಾ ನಿರ್ವಹಿಸುತ್ತಾರೆ. ಸಾಧಾರಣವಾಗಿ ಕೆಲಸಗಳನ್ನು ಉತ್ಪಾದನೆ, ಪುನರುತ್ಪಾದನೆ ಮತ್ತು ಸಾಮೂಹಿಕ ಕಾರ್ಯ ಎಂದು ವಿಂಗಡಿಸಲಾಗುತ್ತದೆ. ಲಿಂಗಾಧಾರಿತ ಶ್ರಮ ವಿಭಜನೆಯಿಂದಾಗಿ ಸ್ತ್ರೀ-ಪುರುಷರು ಮಾಡುವ ಕೆಲಸಗಳ ವ್ಯಾಖ್ಯೆಯೂ ಬದಲಾಗುತ್ತದೆ. ಉತ್ಪಾದನೆ ಎಂದರೆ ಆದಾಯ ಹುಟ್ಟಿಸುವ, ಶ್ರಮಕ್ಕೆ ನಿಗದಿಪಡಿಸಿದ ಪ್ರತಿಫಲ ದೊರೆಯುವಂತಹ ದುಡಿಮೆ. ಆಹಾರ ತಯಾರಿಕೆ, ಸಂಗ್ರಹಣೆ, ಕುಟುಂಬದ ರಕ್ಷಣೆ, ಪಾಲನೆ, ಪೋಷಣೆ, ಮುಂತಾದ ಕೆಲಸಗಳು ಸಮೂಹ ಪುನರುತ್ಪಾದನಾ ಕಾರ್ಯ. ಸಂತಾನೋತ್ಪತ್ತಿ ಮತ್ತು ಶಿಶುಪಾಲನೆ ಕೂಡ ಪುನರುತ್ಪಾದನೆಯಲ್ಲಿ ಸೇರಿರುತ್ತದೆ. ಸಮುದಾಯದಲ್ಲಿ ಸಾಮಾಜಿಕ, ಸಾಂಪ್ರದಾಯಿಕ ಆಚರಣೆ, ಗುಂಪಿನಲ್ಲಿ ಸಂಘಟಿತ ಕಾರ್ಯಗಳು ಆರ್ಥಿಕವಾಗಿ ಮಹತ್ವಪೂರ್ಣವೆನಿಸಿದ್ದರೂ, ಸಾಮಾಜಿಕ ಮೌಲ್ಯವುಳ್ಳ ಸಮುದಾಯದ ಕೆಲಸ, ಮಹಿಳೆಯರು ಇ0ತಹ ಮೂರು ರೀತಿಯ ಕಾರ್ಯ ಕ್ಷೇತ್ರಗಳಲ್ಲೂ ಭಾಗವಹಿಸುತ್ತಾರೆ. ಆದರೆ ಉತ್ಪಾದನಾ ಕ್ಷೇತ್ರದಲ್ಲಿ ಅವರ ಪಾತ್ರ ಅಗೋಚರ. ಹೆಣ್ಣಿನ ದೈನಂದಿನ ಬಿಡುವಿಲ್ಲದ ದುಡಿತ ಅವಳ ಸಾಮಾಜಿಕ ಪಾತ್ರಗಳಲ್ಲಿ, ಲಿಂಗಾಧಾರಿತ ನಿರೀಕ್ಷೆಗಳಲ್ಲಿ ಅಡಗಿ ಹೋಗಿರುತ್ತದೆ. ಸ್ವಯಂ ಉದ್ಯೋಗಸ್ಥರು ಮಹಿಳಾ ರಾಷ್ಟ್ರೀಯ ಆಯೋಗದ ಅಂದಾಜಿನಂತೆ ಮಹಿಳಾ ಶ್ರಮಿಕರು ಪ್ರತಿಶತ .೯೪ ಭಾಗ ಗ್ರಾಮೀಣ ಮತ್ತು ನಗರಗಳ ಅಸಂಘಟಿತ ವಿಭಾಗಗಳಲ್ಲಿ ದುಡಿಯುತ್ತಾರೆ. ಅದರಲ್ಲೂ ಬಡ ಮಹಿಳೆಯರು ಅದೃಶ್ಯ ಕೆಲಸಗಾರರು. ಮನೆಗೆಲಸ, ಕೂಲಿ ಕೆಲಸ, ಮುಂತಾದವುಗಳಲ್ಲಿ ಶ್ರಮಿಸುವ ಅವರಿಗೆ ಸಿಗುವ ಪ್ರತಿಫಲ ಬಹಳ ಅಲ್ಪ. ಆದರೆ ಈ ರೀತಿಯ ದುಡಿಮೆಗಳಲ್ಲಿ ಸಮಯವನ್ನು ಸಂರಚಿಸುವಲ್ಲಿ ಲಿಂಗತ್ವದ ಪಭಾವವನ್ನು ಸಹ ನಾವು ನೋಡಬಹುದು.

ಎಲ್ಲಾ ವಯಸ್ಸಿನಲ್ಲೂ ಹೆಣ್ಣು ದುಡಿಯುತ್ತಾಳೆ. ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ಬಡ ಕುಟುಂಬಗಳಲ್ಲಿ ನಾಲ್ಕೈದು ವಯಸ್ಸಿನ ಹೆಣ್ಣು ಮಗು ತಾಯಿಗೆ ಮನೆಗೆಲಸದಲ್ಲಿ ಸಹಾಯ ಮಾಡುತ್ತಾಳೆ. ಹನ್ನೆರಡು-ಹದಿಮೂರು ವಯಸ್ಸಿನ ಹುಡುಗಿ ಹೊಲದಲ್ಲಿ ದುಡಿಯುವುದು, ದನಕರು ನೋಡಿಕೊಳ್ಳುವುದು, ಅಡಿಗೆ ಮಾಡುವುದು ಮುಂತಾದ ಕೆಲಸಗಳನ್ನು ನಿರ್ವಹಿಸುತ್ತಾಳೆ.

ಸಂಶೋಧಕರ ಪ್ರಕಾರ ಗ್ರಾಮೀಣ ಕುಟುಂಬಗಳಲ್ಲಿ ಸೊಸೆಯೊಬ್ಬಳು ದಿನಕ್ಕೆ ೧೪ ರಿಂದ ೧೬ ಗಂಟೆಗಳ ಕಾಲ ದುಡಿಯುತ್ತಾಳೆ. ಹಿಮಾಲಯ ತಪ್ಪಲಿನ ಪ್ರದೇಶಗಳಲ್ಲಿ ಪಶುಪಾಲನೆಗೆ ಸಂಬಂಧಿಸಿದಂತೆ ಹಾಲು ಕರೆಯುವುದು, ಮೇವು ಸಂಗ್ರಹಣೆ, ಕೊಟ್ಟಿಗೆ ಸ್ವಚ್ಚತೆ, ಮುಂತಾದ ಹನ್ನೊಂದು ವಿವಿಧ ರೀತಿಯ ಕೆಲಸಗಳಿವೆಯಂತೆ. ಇವುಗಳಲ್ಲಿ ಮುಕ್ಕಾಲು ಭಾಗವನ್ನು ಮನೆಗೆಲಸದ ಜೊತೆಯಲ್ಲಿ ಹೆಂಗಸರೇ ಮಾಡುತ್ತಾರಂತೆ. ಆರ್ಥಿಕವಾಗಿ ಬಹಳ ಸಬಲವಾದ ಮತ್ತು ಕೆಲವು ಮೇಲ್ವರ್ಗದ ಕುಟುಂಬಗಳಲ್ಲಿ ದೈಹಿಕ ಶ್ರಮದ ಕೆಲಸದಲ್ಲಿ ಮನೆಯ ಹೆಂಗಸರನ್ನು ತೊಡಗಿಸುವುದು, ಕುಟುಂಬದ ಘನತೆಗೆ ಕಡಿಮೆ ಎಂಬ ಭಾವನೆ ಇರುತ್ತದೆ. ಆದರೆ ಈ ರೀತಿಯ ಭಾವನೆಗಳು ಏನೇ ಇರಲಿ ಅವಳು ದುಡಿಮೆಯಲ್ಲಿ ಹೆಚ್ಚಾಗಿ ತೊಡಗಿ ಅವಳು ವಿರಾಮ ಕುರಿತು ಹೆಚ್ಚಿನ ಆಸಕ್ತಿ ತೋರಿಸದಂ ಸತತವಾಗಿ ದುಡಿಯಲು ಮುಂದಾಗುತ್ತಾಳೆ. ಸಮಯವನ್ನು ದುಡಿಮೆಗೆಂದೇ ಚೆನ್ನಾಗಿ ಉಪಯೋಗಿಸಿಕೊಳ್ಳುವಳು ಮಹಿಳೆ ಎಂದರೆ ತಪ್ಪಾಗಲಾರದು. ಏಕೆಂದರೆ ದಿನದ ಮುಂಜಾವಿನಿಂದ ಹಿಡಿದು ರಾತ್ರಿ ಊಟ ಮಾಡಿ ಮಲಗುವ ತನಕವೂ ಸಹ ಅವಳು ದುಡಿಯುವುದರಲ್ಲೇ ಕಳೆಯುತ್ತಾಳೆ. ಆದರೆ ಅದನ್ನು ಪುರುಷನಿಗೆ ಹೋಲಿಸಿ ನೋಡಿದಾಗ ಅಲ್ಲಿ ಅವನು ದಿನದಲ್ಲಿ ಸರಿಯಾಗಿ ೪-೫ ತಾಸು ಮಾಡುವುದು ಸಂಶಯವೆಂದೇ ಹೇಳಬಹುದು. ಹೇಗೆಂದರೆ ಈಗ ಪ್ರಾಥಮಿಕ ಶಾಲೆಯಲ್ಲಿ ದುಡಿಯುವ ಪುರುಷನು ಮುಂಜಾನೆ ಶಾಲಾ ತರಗತಿಗಳು ೧೦ ಘಂಟೆಗೆ ಪ್ರಾರಂಭವಾಗುತ್ತವೆ ಎಂದಾಗ ಬೆಳಿಗ್ಗೆ ೮.೩೦ ರಿಂದ ೯ ಘಂಟೆಗೆ ಲೇಟಾಗಿ ಎದ್ದು ಸ್ನಾನ ಮುಗಿಸಿಕೊಂಡು ತನ್ನ ದಿನಚರ್ಯೆ ಕೆಲಸ ಮುಗಿಸುವಷ್ಟರಲ್ಲಿ ಹೆಂಡತಿಯಾದವಳು ತಿಂಡಿ ತಯಾರಿಸಿದ್ದನ್ನು ತಿಂದು ಶಾಲೆಗೆ ಬಂದು ಅಲ್ಲಿ ಒಂದು ತಾಸು ಎರಡು ತಾಸು ಪಾಠ ಮಾಡಿ ಇನ್ನೇನೋ ಆಫೀಸ್ ಕೆಲಸದ ಮೇರೆಗೆಂದೋ ಅಥವಾ ಟೀ ಕುಡಿಯುವ ವೇಳೆಗೆಂದೋ ಹೊರಗೆ ಹೋಗುವುದು. ಅಲ್ಲಿಂದ ಮತ್ತೆ ಮಧ್ಯಾಹ್ನ ಹಿಂತಿರುಗಿ ಊಟ ಮಾಡಿಕೊಂಡು ಬಂದು ಒಂದೆರಡು ತಾಸು ತರಗತಿಗಳಿಗೆ ಹಾಜರಾಗಿ ಪುನಃ ಮನೆಗೆ ಬಂದರೆ ದಿನದ ಕೆಲಸಕ್ಕೆ ಪೂರ್ಣ ವಿರಾಮ ನೀಡುವುದು ಪುರುಷನ ಸ್ವಭಾವವಾದರೆ ಮಹಿಳೆಯಾದವಳು ತನ್ನ ಕೆಲಸಗಳ ಜೊತೆಗೆ ಗಂಡ ಮನೆ ಮಕ್ಕಳು ಹೀಗೆ ಎಲ್ಲರ ಕೆಲಸಗಳನ್ನು ಮಾಡಿ ಮುಗಿಸಿ ಜೊತೆಗೆ ದುಡಿಮೆಯಲ್ಲಿ ತೆಡಗುವುದು ಅವಳ ಸ್ವಭಾವವಾಗಿರುವುದರಿಂದ ಇಲ್ಲಿ ಪುರುಷರಿಗೆ ಸಿಗುವ ಸಮಯವು ಮಹಿಳಾ ಉದ್ಯೋಗಿಗಳಿಗೆ ಸಿಗದೇ ಹೋಗುವುದು ಕಂಡು ಬರುತ್ತದೆ. ಸ್ತ್ರೀಯಾದವಳು ತನಗೋಸ್ಕರವೆಂದು ಸಮಯವನ್ನು ಕಳೆಯುವುದು ತೀರಾ ಕಡಿಮೆ ಎಂದೇ ಹೇಳಬಹುದು.

ಸಮಯ, ವಿರಾಮ, ಲೀಷರ್ ಎಂಬ ಶಬ್ದಗಳು ಮಹಿಳೆಗೆ ತೀರಾ ಹತ್ತಿರವಾದಂತಹ ಶಬ್ದಗಳೆಂದೇ ಹೇಳಬಹುದು. "ವಿರಾಮ, ಲೀಷರ್ ಎಂದರೆ ವ್ಯಕ್ತಿಗೆ ಲಭ್ಯವಿರುವ, ನಿರ್ಬಂಧನೆಗೆ ಒಳಪಡದೆ ಇರುವಂತಹ ಸಮಯವಾಗಿದೆ. ಈ ಸಮಯವನ್ನು ರೂಢಿಸಿಕೊಳ್ಳುವ, ಬೇಕಾದ ರೀತಿಯಲ್ಲಿ ವ್ಯಯಿಸುವ ಆಯ್ಕೆಯ ಸ್ವಾತಂತ್ರ್ಯ ವ್ಯಕ್ತಿರುತ್ತದೆ. ಅಲ್ಲದೆ ಮಾನಸಿಕವಾಗಿ, ವಿರಾಮದಲ್ಲಿ ಕಳೆದ ವೇಳೆ ಹಿತಕೊಡುವಂತಹದ್ದು. ಈ ಸಮಯವನ್ನು ಆರ್ಥಿಕವಾಗಿ ಉಪಯುಕ್ತವಾಗಿರಬೇಕೆಂದು ಬಲವಂತವಿರಬಾರದು. ಇಂತಹ ಸಮಯದಲ್ಲಿ ವ್ಯಕ್ತಿತ್ವ ಬೆಳವಣಿಗೆಗೆ, ಮನರಂಜನೆಗೆ ಸಂಬಂಧಿಸಿದಂತೆ ಉಪಯೋಗಗಳು ವ್ಯಕ್ತಿಗೆ ಲಭ್ಯವಾಗುವುದು. ಇದು ನಿಜವಾದ ಸಮಯದ ವಿರಾಮ ಅಥವಾ ಲೀಷರ್. ಆದರೆ ಈ ರೀತಿಯಲ್ಲಿ ಮಹಿಳೆಯ ದೈನಂದಿನ ಬದುಕಿನ ಚರಿತ್ರೆಯ ಪುಟಗಳಲ್ಲಿ ನೋಡಿದರೆ ಸಿಗಲಾರದು. ಏಕೆಂದರೆ ಮಹಿಳೆ ಎಂದರೆ ಸಾಕು ಈ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಕೇವಲ ಗಾಣದ ಎತ್ತಿನಂತೇ ದುಡಿಯುವ ಪಾತ್ರ ಮಾತ್ರ. ಅವಳಿಗೆಂದೇ ವೈಯಕ್ತಿಕವಾದಂತಹ ಆಸೆ-ಆಕಾಂಕ್ಷೆಗಳು, ಸಮಯಗಳೆಂದೂ ಇಲ್ಲ. ಆದರೆ ಅವಳು ಯಾವಾಗಲು ಕೆಲಸ ಮಾಡುತ್ತಾ ಇರಲಿಕ್ಕೆ ಮಾತ್ರ ಸಮಯ ಉಂಟು.

ಪುರುಷರಿಗೆ ಮಾತ್ರ ಹೊರಗಿನ ವಿಚಾರಗಳ ಜೊತೆಗೆ ಸಮಯಕ್ಕೆ ತಕ್ಕಂತೆ ಊಟ, ಫಲಹಾರ, ಟೀ-ಕಾಫಿ ಹೀಗೆ ಸರಬರಾಜು ಮಾಡುವುದು ಹೆಚ್ಚು. ಆದರೆ ಅವಳಿಗೆ ಮಾತ್ರ ಪುರುಷನ ಎಲ್ಲಾ ಬೇಡಿಕೆಗಳು ಈಡೇರಿದಾಗ ಮಾತ್ರ ನಂತರದ ಸ್ಥಾನ ಮಹಿಳೆಗೆ. ಇದು ತುಂಬಾ ತಾರತಮ್ಯತೆಯಾಗುತ್ತದೆ ಎಂಬುದು ಅವಳಿಗೆ ಅನಿಸಿದರೂ ಸಹ ಅದನ್ನು ಬಾಯಿ ಬಿಟ್ಟು ಹೇಳಿಕೊಳ್ಳುವ ಸ್ವಾತಂತ್ರ್ಯ ಇಲ್ಲ. ಒಂದು ವೇಳೆ ಸ್ವತಂತ್ರ ಎನ್ನುವುದು ಅಲ್ಪ ಸ್ವಲ್ಪ ಸಿಕ್ಕರೂ ಸಹ ಅದು ಸೇವೆ ಮಾಡುವುದರಲ್ಲಿಯೇ ಹೋಗುತ್ತದೆ. ಅಲ್ಲದೆ "ಗೃಹಕೃತ್ಯ ಮತ್ತು ಮಕ್ಕಳ ಲಾಲನೆ-ಪಾಲನೆ ಗೃಹಿಣಿಗೆ ಸಿಗುವ ವೈಯಕ್ತಿಕ ಸಮಯವನ್ನು ಮೊಟಕುಗೊಳಿಸುತ್ತವೆ. ಹಾಗಿದ್ದಲ್ಲಿ ಮಧ್ಯ ಹಾಗೂ ಅವರ ವಯಸ್ಸಿನ ಮಹಿಳೆಯ ವಿರಾಮ ಹೆಚ್ಚುವುದೇ? ಮ್ಯಾಸರ್ಸ್ ಹೇಳುವಂತೆ, ಅನಾರೋಗ್ಯ ಅಥವಾ ನಿವೃತ್ತಿಯಿಂದ ಪತಿ ಮನೆಯಲ್ಲೇ ಕಾಲ ಕಳೆದಾಗ ಪತ್ನಿಯ ಸಮಯ ಸ್ವಾತಂತ್ರ್ಯ ಇನ್ನೂ ಮೊಟಕಾಗುತ್ತದೆ. ಅಲ್ಲದೆ ಒಂದು ನಿರ್ದಿಷ್ಟ ಕೆಲಸವಿಲ್ಲದೆ ಮನೆ ಹೊರಗೆ ಸುತ್ತಾಡುವುದು ಮಹಿಳೆಗೆ ಸುಲಭವಲ್ಲ. ಇಂತಹ ಸಾಮಾಜಿಕ ಬಾಧಕವಲ್ಲದೆ, ದನೆಯಲ್ಲಿ ಪತಿಯನ್ನು ಬಿಟ್ಟು ಹೊರಗೆ ಹೋಗಲೂ ಅವರ ಮನಸಾಕ್ಷಿ ಒಪ್ಪುವುದಿಲ್ಲ. ಹೀಗಾಗಿ ಮತ್ತೆ ತಮ್ಮ ವೈಯಕ್ತಿಕ ಸಮಯವನ್ನು ಇತರರಿಗೇ ಮೀಸಲಾಗಿಡಬೇಕಾಗುತ್ತದೆ". ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹಿತ

ಮಹಿಳೆಯ ಸಮಯದ ಮೇಲೆ ಅವಳ ಪತಿಯ ಅಧಿಕಾರವಿರುತ್ತದೆ. ಸಿಗುವ ಸಮಯವನ್ನು ಕೌಟುಂಬಿಕ ಅಭಿವೃದ್ಧಿಯೆಡೆಗೆ, ಕೌಟುಂಬಿಕ ವಿಷಯಗಳಿಗೆ ಮಾತ್ರ ಮೀಸಲಿಡಬೇಕಾಗುತ್ತದೆ. ಆದರೆ ಈ ರೀತಿಯ ನಿಯಮಗಳು, ಕರ್ತವ್ಯಗಳು ಪುರುಷರಿಗೆ ಏಕೆ ಇಲ್ಲಾ? ಎಂಬುದು ಪ್ರಮುಖವಾಗಿ ಕಂಡು ಬರುವ ಪ್ರಶ್ನೆಯಾಗಿದೆ. ಕೇವಲ ಸಮಯವನ್ನು ಸದ್ವಿನಿಯೋಗ ಮಾಡಿಕೊಳ್ಳಲೂ ಸಹ ಪುರುಷಾಧಿಕಾರದ ಪ್ರಭಾವ ಕೆಲಸ ಮಾಡುತ್ತದೆ ಎಂದಾಗ ಮಹಿಳೆಯರಿಗೆ ಸಮಯವನ್ನು ವೈಯಕ್ತಿಕವಾಗಿ ಪುರುಷನ ಹಾಗೆ ಬಳಸಿಕೊಳ್ಳಲು ಸ್ವಾತಂತ್ರ್ಯ ಏಕೆ ಇಲ್ಲಾ? ಅದು ಕೇವಲ ಪುರುಷನ ಸ್ವತ್ತಾಗಿರುವುದು ಯಾಕೆ? ಅವಳು ಪುರುಷನಿಗಿಂತಲೂ ಅಧಿಕ ವೇಳೆ ದುಡಿಯುವುದರ ಜೊತೆಗೆ ಮನೆ ಗಂಡ ಎನ್ನುವ ಸಂಬಂಧಗಳಿಗೆ ಪ್ರಾಮುಖ್ಯತೆ ವಹಿಸುತ್ತಾಳೆ ಎಂದಾಗ ಅವಳಿಗೂ ಸ್ವತಂತ್ರವಾಗಿ ಪುರುಷನ ಹಾಗೆ ಸಮಯವನ್ನು ಬಳಸಿಕೊಳ್ಳುವ ಸ್ವಾತಂತ್ರ್ಯವಿಲ್ಲಾ. ಜೊತೆಗೆ ಮಹಿಳೆಯರು ಹೆಚ್ಚು ಸಮಯ ದುಡಿದಷ್ಟು ಪುರುಷರು ಏಕೆ ಕೆಲಸ ಮಾಡುವುದಿಲ್ಲ? ಮಹಿಳೆಯರಿಗೆ ಏಕೆ ಹೆಚ್ಚಾಗಿ ಸಮಯದ ಪರಿಪಾಲನೆ ಬೇಕು. ಅದು ಪುರುಷರಿಗೆ ಏಕೆ ಇಲ್ಲಾ? ಹೀಗೆ ಹತ್ತು ಹಲವು ಪ್ರಶ್ನೆಗಳು ನಮ್ಮ ಮುಂದೆ ಬರುತ್ತವೆ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಗೆ ಸಮಯವನ್ನು ಬಳಸಿಕೊಳ್ಳುವುದರಲ್ಲಾಗಲೀ ಅಥವಾ ಕೆಲಸ ಮಾಡುವ ವಿಷಯದಲ್ಲಾಗಲೀ ಪುರುಷನಿಗಿರುವಷ್ಟು ಅವಕಾಶಗಳು, ಸವಲತ್ತುಗಳು ಮಹಿಳೆಯರಿಗೆ ಇಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಒಟ್ಟಿನಲ್ಲಿ ಸಮಯ ಎನ್ನುವ ಪರಿಕಲ್ಪನೆ ಎತ್ತಿಕೊಂಡಾಗ ಮಹಿಳೆಯರಿಗೆ ಇಲ್ಲೂ ಕೂಡ ತಾರತಮ್ಯತೆ ಬಿಟ್ಟಿಲ್ಲಾ. ಪುರುಷ ಮಾತ್ರ ಸಮಯವನ್ನು ತನ್ನ ಅನುಕೂಲತೆಗೆ ತಕ್ಕಂತೆ ಬಳಸಿಕೊಂಡು ತನ್ನ ವೈಯಕ್ತಿಕ ಆಸೆ-ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುತ್ತಾನೆ. ಆದರೆ ಮಹಿಳೆಯ ವಿಚಾರಕ್ಕೆ ಬಂದಾಗ ಮಾತ್ರ ಅವನಿಗಿರುವ ಅವಕಾಶಗಳು, ಸಮಯವನ್ನು ಬಳಸಿಕೊಳ್ಳುವ ಅನುಕೂಲತೆಗಳು ಅವಳಿಗಿಲ್ಲ. ಕೇವಲ ಪರರ ಹಿತಕ್ಕೆ ಸಮಯವನ್ನು ಬಳಸಿಕೊಳ್ಳಬೇಕೇ ವಿನಹ ತನ್ನ ಸ್ವಂತಕ್ಕೆಂದು ಸಮಯವನ್ನು ಬಳಸಿಕೊಂಡಿರುವ ವಿಚಾರಗಳು ಹಿಂದೆಯೂ ಕಂಡು ಬಂದಿಲ್ಲ. ಈಗಲೂ ಇಲ್ಲಾ ಎಂದೇ ಹೇಳಬಹುದು. ಆದರೆ ಇಂದು ಮಹಿಳೆ ಉದ್ಯೋಗಸ್ಥಳಾಗಿದ್ದರೂ ಕೂಡ ಆ ಸಮಯವನ್ನು ದಿನವಿಡೀ ಉದ್ಯೋಗ ಮಾಡುವುದರಲ್ಲಿಯೇ ಕಳೆಯುತ್ತಾಳೆ. ಜೊತೆಗೆ ಇನ್ನುಳಿದ ಸಮಯವನ್ನು ಮನೆಯಲ್ಲಿ ಕುಟುಂಬದ ಹಿತಕ್ಕಾಗಿ ವ್ಯಯ ಮಾಡುವುದರಿಂದ ಅವಳಿಗೆ ಸಮಯ

ಎನ್ನುವುದು ಕೇವಲ ದುಡಿಮೆಗೋಸ್ಕರ, ಸಲ್ಲಿಸುವ ಸೇವೆಗೋಸ್ಕರ ಮೀಸಲಾಗಿಡಬೇಕಾಗಿದೇ ವಿನಹಾ ಅವಳ ವೈಯಕ್ತಿಕ ನೆಮ್ಮದಿ, ಸಂತೋಷಕ್ಕೆಂದು ಪುರುಷನ ಹಾಗೆ ಕಳೆಯುವ ಹಾಗಿಲ್ಲ ಎಂದು ಸ್ಪಷ್ಟವಾಗಿ ಹೇಳಬಹುದು.

**ಕೌಶಲ್ಯತೆಃ**

ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಲಸಗಳನ್ನು ಸಾಮಾನ್ಯವಾಗಿ ಮಹಿಳೆಯರಿಗೆ ಮತ್ತು ಕೆಲವು ಕೆಲಸಗಳನ್ನು ಪುರುಷರಿಗೆ ಎಂದು ನೀಡಲಾಗುತ್ತಿದೆ. ಮಹಿಳೆಯರು ಮಾಡುವ ಕೆಲಸಗಳು ಮನೆಯ ಒಳಗಡೆ ಮಾಡುವ ಕೆಲಸಗಳೊಂದಿಗೆ ಅವುಗಳಿಗೆ ಯಾವುದೇ ಶಿಕ್ಷಣ, ಕೌಶಲ್ಯಗಳ ಅವಶ್ಯಕತೆ ಇಲ್ಲ. ಲಿಂಗಾಧಾರಿತ ಶ್ರಮ ವಿಭಜನೆಯ ಕಾರಣದಿಂದಲೇ ಮಹಿಳೆಯರಿಗೆ ಶಿಕ್ಷಣವನ್ನು ನಿರಾಕರಿಸುತ್ತಾರೆ. ಮಹಿಳೆಯರು ಕೆಲವು ಕೆಲಸಕ್ಕೆ ಮಾತ್ರ ಸೀಮಿತರಾಗಿರುತ್ತಾರೆ. ಅವಳಿಗೆ ಮನೆಯ ಒಳಗಿನ ಜಗತ್ತೇ ಸೀಮಿತವಾಗಿರುತ್ತದೆ. ಮನೆಯ ಹೊರಗಿನ ಜಗತ್ತಿನ ಬಗ್ಗೆ ಅವಳಿಗೆ ಅರಿವೇ ಇರುವುದಿಲ್ಲಾ. ಇದೇ ಅಂಶವೇ ಶೋಷಣೆಗೆ ಕಾರಣವಾಗುತ್ತದೆ.

ಮಹಿಳೆಯರಿಗೆ ಶಿಕ್ಷಣ ಇಲ್ಲದಿರುವುದರಿಂದ ವ್ಯಕ್ತಿತ್ವ ಬೆಳವಳಣಿಗೆ ಕುಂಠಿತವಾಗುತ್ತದೆ. ಅಲ್ಲದೆ ಅವರು ಯಾವುದೇ ಕೌಶಲ್ಯ ಪಡೆಯದೇ ಹೋಗುತ್ತಿದ್ದಾರೆ. ಇದರಿಂದಾಗಿ ಆರ್ಥಿಕ ಸ್ವಾವಲಂಬನೆ ಇಲ್ಲದಂತಾಗುತ್ತದೆ. ಆರ್ಥಿಕ ಸ್ವಾವಲಂಬನೆಯನ್ನು ಅವಳು ಪಡೆದುಕೊಳ್ಳಬೇಕೆಂದರೆ ಮುಖ್ಯವಾಗಿ ಅವಳಿಗೆ ಒಂದು ಕೌಶಲ್ಯ, ಶಿಕ್ಷಣ ಇರಬೇಕಾಗುತ್ತದೆ. ಮಹಿಳೆ ಶಿಕ್ಷಣ ಪಡೆಯಲು ಕೂಡ ಪುರುಷರ ಅನುಮತಿ ಪಡೆಯಲೇ ಬೇಕಾಗುತ್ತದೆ. ಆದರೂ ಸಹ ಈವತ್ತಿನ ದಿನಗಳಲ್ಲಿ ಎಷ್ಟೇ ಶಿಕ್ಷಣವನ್ನು ಪಡೆದುಕೊಳ್ಳಲು ಮುದಾಗುತ್ತಿದ್ದರೂ ಸಹ ಅವಳಿಗೆ ಪರಿಪೂರ್ಣವಾಗಿ ಶಿಕ್ಷಣ ಸಿಗುತ್ತಿಲ್ಲ. ಇದರಿಂದಾಗಿ ಅವಳಿಗೆ ಹೆಚ್ಚಿನ ಕೌಶಲ್ಯತೆಯ ಕೊರತೆ ಉಂಟಾಗಿ ಅಸಂಘಟಿತ ಕ್ಷೇತ್ರದಲ್ಲಿ ಹೆಚ್ಚಾಗಿ ದುಡಿಯಲು ಪ್ರಾರಂಭಿಸುತ್ತಿರುವುದು ದುಸ್ತಿತಿಯಾಗಿದೆ. ಅಲ್ಲದೇ ಕಳೆ ಕೀಳುವುದು, ನೂಲುವುದು, ನೇಯುವುದು, ಅಡಿಗೆ ಕೆಲಸ ಮಾಡುವುದು ಇಂತಹ ಕೆಲಸಗಳಲ್ಲಿ ಅಗಾಧವಾದ ಕೌಶಲ್ಯತೆಯನ್ನು ಹೊಂದಿದ್ದರೂ ಸಹ ಅವಳು ತನ್ನ ಕೌಶಲ್ಯತೆಯನ್ನು ಸರಿಯಾಗಿ ಬಳಸಿಕೊಳ್ಳಲು ಸಾಧ್ಯವಾಗುತ್ತಿಲ್ಲಾ. ಕಾರಣ ಈ ರೀತಿಯ ಅಸಂಘಟಿತ ವಲಯಗಳಲ್ಲಿ ದುಡಿಯುವ ಮಹಿಳೆಯರು ತಮ್ಮ ಕೌಶಲ್ಯತೆಗಳಿಗೆ ಪೂರಕವಾದ ಉದ್ಯೋಗವನ್ನು ಪಡೆಯಲು ಪುರುಷನ ಮೊರೆ ಹೋಗಬೇಕಾದ ಸಂಧರ್ಭ ಬಂದಾಗ ಅಲ್ಲಿ ಅಷ್ಟು-ಇಷ್ಟು ಕಡಿಮೆ ವೇತನಗಳಿಗೆ ಅವಳನ್ನು ದುಡಿಯಲು ಹಚ್ಚಿ

ಅದರಿಂದ ಬಂದ ಲಾಭವನ್ನು ಪುರುಷನು ತನ್ನ ಕೈವಶಮಾಡಿಕೊಳ್ಳುತ್ತಾನೆ. ಅದರೆ ಸ್ವಂತ ಉದ್ದಿಮೆಗಳನ್ನು ಪ್ರಾರಂಭಿಸಿದರೂ ಸರಿಯಲ್ಲ.

ದುಡಿಯುವುದು ಮಾತ್ರ ಹೆಣ್ಣಾಗಿದ್ದು ಲಾಭಾಂಶವನ್ನು ಪುರುಷ ತೆಗೆದುಕೊಳ್ಳುವುದರಿಂದ ಅಲ್ಲಿ ಮಹಿಳಾ ಪಾಲು ಆಗುವುದು. ಇದರಿಂದಾಗಿ ಅವಳಲ್ಲಿ ಎಂತಹ ಕೌಶಲ್ಯ ಇದ್ದರೂ ಸಹ ಅದರಿಂದ ಸಂಪೂರ್ಣ ಸದ್ಬಳಕೆ ಪುರುಷನಾಗುತ್ತದೆಯೇ ಹೊರತು ಅದನ್ನು ಬಳಸಿಕೊಂಡು ತನ್ನ ಕೌಶಲ್ಯತೆಯನ್ನು ಸದ್ವಿನಿಯೋಗ ಮಾಡಿಕೊಳ್ಳುವುದು ಬಹಳ ಅಪರೂಪವೆಂದೇ ಹೇಳಬಹುದು. ಆದರೂ ಇಂತಹ ಪರಿಸ್ಥಿತಿಯಲ್ಲಿ ಇತ್ತೀಚೆಗೆ "ಶಿಕ್ಷಣವೂ ಮುಕ್ತವಾಗಿ ದೊರೆಯುತ್ತಿರುವುದರಿಂದ ಅವರಿಗೆ ಹಿಂದಿನ ಕಾಲದ, ಪೀಳಿಗೆಯ ಮಹಿಳೆಯರಂತೆ ಪುರುಷನು ಯೋಚಿಸಿ ಜೀವನ ಮಾರ್ಗವನ್ನು ಪಡೆಯಬಕಾಗಿಲ್ಲ. ಅವರ ಜೀವನದಲ್ಲಿ ಕಥೆಗಳ ಪಾತ್ರ ಹಿಂದು ಮಹಿಳೆಗೆ ಸಹಜವಾದ ಕೋಮಲತೆ, ಮಧುರತೆ ಹಾಗೂ ಉತ್ಸಾಹ ಪ್ರವೃತ್ತಿಗಳಿಂದ ಸಂಗೀತ, ಗೃಹಕಲೆ, ನೃತ್ಯಕಲೆಗಳನ್ನು ಅವರಿಗೆಂದೇ ಸೃಷ್ಟಿಸಿದ0ತಿದೆ. ಚಿತ್ರಕಾರನಿಗೆ, ಶಿಲ್ಪಿಗೆ ರೂಪದರ್ಶಿಯಾಗುತ್ತಿದ್ದ ಮಹಿಳೆ ಈಗ ದಿನಬಳಕೆಯ ವಸ್ತುಗಳಿಗೆ ಕೂಡ ರೂಪದರ್ಶಿಯಾಗುತ್ತಿದ್ದಾಳೆ. ಲಲಿತಕಲೆಗಳನ್ನು ಮಾಸದಂತೆ ಜೀವಂತವಾಗಿರಿಸಿರುವ ಮಹಿಳೆ ಚಲನಚಿತ್ರ ದೂರದರ್ಶನಗಳ ಮೂಲಕ ಪುರುಷರನ್ನು ಮೀರಿಸಿ ಜಗತ್ಪ್ರಸಿದ್ಧಿ ಹಾಗೂ ಹಣದ ಹೊಳೆಯನ್ನು ಕಾಣುತ್ತಿದ್ದಾಳೆ. ಜೊತೆಗೆ ನೈತಿಕ ಪ್ರಶ್ನೆಯೂ ಎದ್ದಿದೆ.[12] ಮಹಿಳಾ ಪ್ರಗತಿಗೆ ಮುಖ್ಯವಾದ ಅವಳ ಕೌಶಲ್ಯತೆಯನ್ನು ಬಳಸಿಕೊಳ್ಳುವ ಮುಕ್ತತೆಯ ಜೊತೆಗೆ "ಅವಳು ನಿರ್ಮಿಸಿ ಮಾರಾಟ ಮಾಡುವ ಕರಕುಶಲ ವಸ್ತುಗಳಿಗೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಅಧಿಕ ಲಾಭವಿದೆ. ಆಹಾರ ವಸ್ತುಗಳು, ಸಿದ್ದ ಉಡುಪುಗಳು, ಉಪ್ಪಿನಕಾಯಿ, ಸಾಂಬಾರು ಪುಡಿಯಿಂದ, ಸೀರೆ, ವಿದ್ಯುನ್ಮಾನ ಉಪಕರಣಗಳವರೆಗೆ ಸಕಲ ವಸ್ತುಗಳನ್ನು ತಯಾರಿಕೆ, ವಿತರಣೆ ಈಗ ಮಹಿಳೆಯರ ಕೈಯಲ್ಲಿದ್ದು, ಮಹಿಳಾ ವಾಣಿಜ್ಯ ಉದ್ಯಮಿಗಳ ಸಂಖ್ಯೆ ದಿನೇ ದಿನೇ ಇಮ್ಮಡಿಯಾಗುತ್ತಿದೆ. ಮುದ್ರಣಕಲೆ, ಪತ್ರಿಕೋದ್ಯಮ, ಚಲನಚಿತ್ರ, ದೂರದರ್ಶನ, ಆಕಾಶವಾಣಿ ಮುಂತಾದ ಮಾಧ್ಯಮಗಳ ಮೂಲಕ ಮಹಿಳೆಯರು ನಾಟಕ, ಸಂಗೀತ, ನೃತ್ಯ, ಸಾಹಿತ್ಯ, ಪಾಕಶಾಲೆ, ರೂಪದರ್ಶತ್ವ ಇವೆಲ್ಲದರ ಮೂಲಕ ಪ್ರಗತಿ ಶಿಖರದತ್ತ ದಾಪುಗಾಲು ಹಾಕಿದ್ದಾರೆ. ಮಹಿಳೆಯರಿಗೆ ಇಂತಹ ಕಲೆಗಳಿದ ಆಗುವ ಉಪಕಾರ ಅಷ್ಟಿಷ್ಟಲ್ಲ. ಆದರೆ ಆಸರೆ ತಪ್ಪಿದ, ಕುಟುಂಬದ ಜವಾಬ್ದಾರಿ ಹೊತ್ತಿರುವ ಎಷ್ಟೇ ಮಹಿಳೆಯರು ತಮ್ಮ ಜೀವನವನ್ನು

ರೂಪಿಸಿಕೊಳ್ಳಲು ಈ ಕಲೆಗಳಿಂದ ಹಾಗೂ ಕೌಶಲ್ಯತೆಗಳಿಂದ ಸಾಧ್ಯ. ಆದರೆ ಇಂತಹ ಸಾಧ್ಯತೆಗಳನ್ನು ಹೆಚ್ಚಾಗಿ ಮಹಿಳೆಯರಿಗೆ ದಕ್ಕುವುದಿಲ್ಲಾ. ಯಾಕೆಂದರೆ ನಾಟಕ, ದೂರದರ್ಶನ, ಆಕಾಶವಾಣಿ ಮುಂತಾದ ಮಾಧ್ಯಮಗಳಲ್ಲಿ ನಾಟಕ, ಸಂಗೀತ, ನೃತ್ಯ, ಕಲೆ ಇತ್ಯಾದಿಗಳನ್ನು ಮಾಡಲು ಮುಖ್ಯವಾಗಿ ಪುರುಷ ಒಪ್ಪಿದಾಗ ಸಾಧ್ಯತೆಗಳು ಹೆಚ್ಚು. ಒಂದು ವೇಳೆ ಸಮ್ಮತಿಸಿದರೂ ಅದರಿಂದ ಬರುವ ಲಾಭ, ಹಣದ ಗಳಿಕೆ, ಇತ್ಯಾದಿಯೆಲ್ಲವೂ ಪುರುಷನ ಕೈವಶವಾಗುತ್ತಿದೆಯೇ ವಿನಃ ಮಹಿಳೆಗೆ ದಕ್ಕುವುದಿಲ್ಲ.

ಇದರಿಂದಾಗಿಯೇ ಅವಳು ಕೇವಲ ತೊಗಲುಬೊಂಬೆ ತರಹದಲ್ಲಿ ನಾಟಕ, ಸಿನಿಮಾಗಳಲ್ಲಿ ನಟಿಸಬೇಕೇ ವಿನಹ ಅವಳು ಸ್ವತಂತ್ರ್ಯವಾಗಿ ತನ್ನ ಕೌಶಲ್ಯ ವೃತ್ತಿಯಲ್ಲಿ ಮುಂದುವರಿಯಲು ಸಾಧ್ಯವಿಲ್ಲಾ. ಒಂದು ವೇಳೆ ಮುಂದುವರಿದರೂ ಅದಕ್ಕೆ ಹತ್ತಾರು ನಿರ್ಭಂಧ ಕಟ್ಟಳೆಗಳೇ ಹೆಚ್ಚು. ಹೀಗಿರುವಾಗ ಮಹಿಳೆಯರ ಕೌಶಲ್ಯತೆಯು ಅಪಮೌಲ್ಯಗೊಳ್ಳುತ್ತಿದೆ. ಅವಳನ್ನು ಹೆಚ್ಚಾಗಿ ಕೌಶಲ್ಯ ರಹಿತ ಕೆಲಸಗಳಲ್ಲಿ ತೊಡಗುವಂತೆ ಪ್ರೇರೇಪಿಸಲಾಗುತ್ತದೆ.

ಆಧುನಿಕ ಯುಗದಲ್ಲಿ ಮಹಿಳೆಯರು ಉನ್ನತ ಶಿಕ್ಷಣವನ್ನು ಪಡೆದುಕೊಂಡು ಅದರಲ್ಲಿ ವೃತ್ತಿ ಕೌಶಲ್ಯವಿರುವ ಶಿಕ್ಷಣವನ್ನು ಪಡೆದುಕೊಂಡರೂ ಸಹ ಮಹಿಳೆಯರು ಉದ್ಯೋಗಕ್ಕೆ ಸ್ಪರ್ಧಿಸಿದಾಗ ಪುರುಷ ಮಹಿಳೆಯರ ವೃತ್ತಿ ಕೌಶಲ್ಯ ಶಿಕ್ಷಣದಲ್ಲಿ ಯಾವುದೇ ವ್ಯತ್ಯಾಸ ಇರದಿದ್ದರೂ ಸಹ ಪುರುಷರಿಗೆ ಹೆಚ್ಚಿನ ಉದ್ಯೋಗ ನೀಡುವುದರ ಮೂಲಕ ಅಥವಾ ಮೇಲ್ದರ್ಜೆಯ ಹುದ್ದೆ ನೀಡಿ ಕೆಳದರ್ಜೆಗೆ, ಮಹಿಳೆಯರನ್ನು ಆಯ್ಕೆ ಮಾಡುವುದರ ಮೂಲಕ ಪುರುಷ ಪ್ರಧಾನ ವ್ಯವಸ್ಥೆಯು ಮಹಿಳೆಯರ ಕೌಶಲ್ಯತೆಯಲ್ಲಿ ತಾರತಮ್ಯತೆಯನ್ನು ತೋರುತ್ತದೆ. ಇಲ್ಲಿ ಮಹಿಳೆಯು ಅದೇ ಕೆಲಸ ಮಾಡುತ್ತಾಳೆ. ಜೊತೆಗೆ ಪುರುಷನೂ ಅದೇ ಕೌಶಲ್ಯತೆ ಪಡೆದುಕೊಂಡು ಬಂದು ಅವಳಿಗಿಂತ ಮೇಲ್ದರ್ಜೆಯ ಕೆಲಸಕ್ಕೆ ಸೇರುವುದು ಎಷ್ಟು ಸಮಂಜಸ? ಎಂಬ ಪ್ರಶ್ನೆ ಏಳುತ್ತದೆ. ಈ ರೀತಿಯಾಗಿ ಮಹಿಳೆಯ ವೃತ್ತಿಯಲ್ಲಿನ ಪಾರಿಕಲ್ಪನೆಗಳಾದ ಶ್ರಮ, ವೇತನ, ಸಮಯ ಮತ್ತು ಕೌಶಲ್ಯತೆಗಳನ್ನು ವಿಮರ್ಶಾತ್ಮಕವಾಗಿ ನೋಡಿದಾಗ ಅಲ್ಲಿ ಮನಗೆ ಪ್ರಮುಖವಾಗಿ ಕಂಡು ಬರುವುದು ಪುರುಷರು ಹಾಕುವ ಶ್ರಮದಷ್ಟೇ ಮಹಿಳೆಯು ಒಂದು ಉದ್ಯೋಗಕ್ಕೆ ಕಷ್ಟಪಟ್ಟರೂ ಸಹ ಮಹಿಳೆಯರಿಗಿಂತ ಪುರುಷರ ಶ್ರಮವೇ ಅಧಿಕ ಹಾಗೂ ಮೌಲ್ಯಯುತವಾದ ಭಾವನೆಯ ಆಧಾರದ ಮೇಲೆ ಅವಳಿಗೆ ಬರುವ ಸಂಬಳದಲ್ಲಿಯೂ ಸಹ ತಾರತಮ್ಯತೆಯನ್ನು ಕಾಣಬಹುದಾಹುದಾಗಿದೆ. ಒಂದೇ ರೀತಿಯ ಕೆಲಸಗಳಿದ್ದರೂ ಅಲ್ಲಿ ಜಾಸ್ತಿ ವೇತನವನ್ನು ಪಡೆದುಕೊಳ್ಳಲು

ಪುರುಷನೇ ಮೊದಲಾಗುತ್ತಾನೆ. ಆದರೆ ಮಹಿಳೆಯು ಇರುವ ಕೆಲಸದ ಪರಿಮಿತ ಮೀರಿ ಹೆಚ್ಚಿನ ವೇಳೆಯಲ್ಲೂ ದುಡಿದರೂ ಸಹ ಅವಳಿಗೆ ಸಿಗುವ ಸಂಬಳ ಅಷ್ಟೇ.

' Over Time Duty ' ಗೆ ಹೆಚ್ಚಾಗಿ ಆಯ್ಕೆ ಆಗುವುದು ಪುರುಷರಿಗಿಂತ ಹೆಚ್ಚಾಗಿ ಮಹಿಳೆಯರೆಂದೇ ಹೇಳಬಹುದು. ಆದರೆ ಇಲ್ಲಿ Over Time Duty ಮಾಡುವುದರ ಜೊತೆಗೆ ಮಹಿಳೆಯಾದವಳು ಕುಟುಂಬ, ಮಕ್ಕಳು, ಗಂಡ, ಸಂಸಾರ ಎಂಬ ಸುಳಿಗಳಿಗೆ ಸಿಲುಕಿ. ಜರ್ಜರಿತಳಾದರೂ ಸಹ ಅವಳು ಉದ್ಯೋಗಕ್ಕೆ ನೀಡುವ ಪ್ರಾಶಸ್ತ್ಯ ಕಡಿಮೆಯಾಗುವುದಿಲ್ಲ. ಆದರೆ ಪುರುಷನಾದವನು ಕೇವಲ ಉದ್ಯೋಗ ಮುಗಿಸಿಕೊಂಡು ಬಂದರೆ ಸಾಕಷ್ಟು ಏನೋ? ಮಹಾ ಕೆಲಸ ಮಾಡಿ ದಣಿದು ಬಂದಿದರುವ ಹಾಗೆ ಮನೆಗೆ ಬಂದು ವಿಶ್ರಾಂತಿ ಪಡೆದುಕೊಳ್ಳಲು ಪ್ರಾರ0ಭಿಸಿದರೆ ಮಹಿಳೆಯಾದವಳು ಸಂಜೆಯಾದ ಕೂಡಲೆ ಉದ್ಯೋಗ ಮುಗಿಸಿ ಮನೆಗೆ ಬಂದ ಮೇಲೆ ಕೌಟುಂಬಿಕ ಕೆಲಸಗಳಿಗೆ ಹಾಜರಾಗಿ ಮನೆಯವರ ಎಲಲಾ ಬೇಕು ಬೇಡಿಕೆಗಳನ್ನು ಈಡೇರಿಸಿ ನಂತರ ಊಟ ಮುಗಿಸಿ ಮಲಗಿದ ಮೇಲೆ ಗಂಡನನ್ನು ತೃಪ್ತಿಪಡಿಸುವ ಹೊಣೆ ಬೇರೆ ಹೊತ್ತುಕೊಂಡು ಅದಕ್ಕೆ ಅಣಿಯಾಗಿ ಮರು ದಿವಸ ಯಥಾ ಸ್ಥಿತಿ ಮತ್ತೆ ಬೆಳಗಿನ ಜಾವ ಬೇಗ ಎದ್ದು ಉದ್ಯೋಗಕ್ಕೆ ಸಿದ್ಧಳಾಗುವುದು ಅವಳಿಗಿರುವ ದಿನಚರಿಯ ಕೆಲಸವೆಂದೇ ಹೇಳಬಹುದು.

ಎಷ್ಟೇ ಕೌಶಲ್ಯತೆ ಹೊಂದಿದ್ದರೂ ಸಹ ಅವಳು ತನಗೋಸ್ಕರವಾಗಿ ಐದು ನಿಮಿಷ ಕಾಲವೂ ಸಹ ಸ್ವತಂತ್ರಕ್ಕೆಂದು ಸಮಯವನ್ನು ಬಳಸಿಕೊಳ್ಳದೇ ಯಾವಾಗಲೂ ಪರರ ಹಿತಕ್ಕಾಗಿ ದುಡಿಯುವುದು ಹೆಣ್ಣಿನ ಗುಣವೆಂದು ಪುರುಷ ಪ್ರಧಾನ ವ್ಯವಸ್ಥೆ ತಿಳಿಸಿಕೊಟ್ಟಿದೆ. ಈ ರೀತಿಯಾಗದೇ ಕೇವಲ ಪುರುಷರೇ ಮಹಿಳೆಯ ಎಲ್ಲಾ ಕೆಲಸ ಮಾಡಬೇಕು.

ಅವನು ಮಹಿಳೆಯ ಅಧೀನದಲ್ಲಿರಬೇಕೆಂದು ಹೇಳುವುದಿಲ್ಲ. ಆದರೆ ಪರಸ್ಪರ ಹೊಂದಾಣಿಕೆಯಿಂದ ಮಹಿಳೆಯರ ಪ್ರತಿ ಜೀವನದಲ್ಲು ಹಾಗೂ ಕೌಟುಂಬಿಕ ವಿಷಯಗಳಲ್ಲೂ ಸಮಾನತೆಯಿಂದ ಪುರುಷನಾದವನು ಅವಳನ್ನು ಕಾಣಬೇಕೆಂದು ಪರಿಕಲ್ಪನೆಗಳ ಹಿನ್ನೆಲೆಯಾಗಿದೆ.

## ೨.೨ ವೃತ್ತಿಗೆ ಪೂರಕ ಸಂಗತಿಗಳು

**ಮಹಿಳಾ ಶಿಕ್ಷಣ:**

ಯಾವುದೇ ಒಬ್ಬ ಪುರುಷ ಅಥವಾ ಸ್ತ್ರೀಗೆ ವೃತ್ತಿಗೆ ಪೂರಕ ಸಂಗತಿಗಳು ಅಧಿಕೃತವಾಗಿ ಇದ್ದೇ ಇರುತ್ತವೆ. ಅವುಗಳಲ್ಲಿ ಪ್ರಮುಖವಾಗಿ ಶಿಕ್ಷಣ ಆಗಿರಬಹುದು ಅಥವಾ ತರಬೇತಿಯಾಗಿರಬಹುದು ಇವುಗಳಲ್ಲದೇ ಸಾಮಾಜಿಕ ಒತ್ತಾಸೆ ಆಗಿರಬಹುದು ಅವುಗಳಲ್ಲಿ ಪ್ರಮುಖವಾಗಿ ನಾವು ಮೊದಲು ಶಿಕ್ಷಣ ನೋಡಿದಾಗ ಶಿಕ್ಷಣ ಎನ್ನುವ ಸಾಮಾಜಿಕ ಸಂಸ್ಥೆಗೆ ಎಲ್ಲ ಸಮಾಜಗಳಲ್ಲೂ ಎರಡು ಪ್ರಮುಖ ಜವಾಬ್ದಾರಿಗಳಿವೆ. ಒಂದು, ಆ ಸಮಾಜದ ಸಂಸ್ಕೃತಿ ಪರಂಪರೆಯನ್ನು ಒಂದು ತಲೆಮಾರಿನ ಬದಲಾವಣೆಯನ್ನು ತರುವುದಕ್ಕೆ ಪೂರಕವಾದ ವಾತಾವರಣವನ್ನು ಸೃಷ್ಟಿಸುವುದು. ಈ ಎರಡು ಕಾರ್ಯಗಳು ಮಹಿಳೆಯರ ಬದುಕಿನ ಮೇಲೆ ವಿಶೇಷವಾದ ಪ್ರಭಾವವನ್ನು ಬೀರುವಂಥವು. ಆದರೆ ಭಾರತೀಯ ಸಮಾಜದಲ್ಲಿ ಶತಮಾನಗಳಿಂದಲೂ ಮಹಿಳೆಯರಿಗೆ ಲಭ್ಯವಿರುವ ಶಿಕ್ಷಣಾವಕಾಶಗಳು ಪುರುಷನಿಗೆ ಹೋಲಿಸಿದಾಗ ಕಡಿಮೆ ಹಿಂದೆಂದಿಗಿಂತ ಇಂದು ಸಂಖ್ಯಾತ್ಮಕ, ದೃಷ್ಟಿಯಿಂದ ಮಹಿಳೆಯರಿಗೆ ಶಿಕ್ಷಣದ ಅವಕಾಶಗಳಲ್ಲಿ ಹೆಚ್ಚಳ ಉಂಟಾಗಿರುವುದು ನಿಜವಾದರೂ, ಈ ಹೆಚ್ಚಿರುವ ಅವಕಾಶಗಳ ಹಂಚಿಕೆಯಲ್ಲಿ ಸಮಾನತೆ ಕಂಡು ಬರುತ್ತಿಲ್ಲ. ಇಂದಿಗೂ ಭಾರತದ ಒಟ್ಟು ಮಹಿಳಾ ಜನಸಂಖ್ಯೆಯಲ್ಲಿ ಶೇಕಡ ೫೯.೪೭ ರಷ್ಟು ಮಾತ್ರ ಸಾಕ್ಷರರಾಗಿದ್ದು, ಇನ್ನುಳಿದ ಮಹಿಳೆಯರ ಪಾಲಿಗೆ ಶಿಕ್ಷಣವನ್ನು ಪಡೆಯುವ ಅವಕಾಶ ದೊರೆಯದಿರುವುದು, ಆಹಾರದಷ್ಟೇ ಮೂಲಭೂತ ಅವಶ್ಯಕತೆಯಾದ ಶಿಕ್ಷಣವನ್ನು ಪಡೆಯುವುದರಲ್ಲಿ ಎಷ್ಟು ಮಟ್ಟಿನ ಲಿಂಗತಾರಮ್ಯ ಅಡಕವಾಗಿದೆ ಒಂಬುದು ತಿಳಿದು ಬರುತ್ತದೆ. ಅಂದರೆ ಇಲ್ಲಿ ಪ್ರಮುಖವಾಗಿ ಗಮನಿಸಬೇಕಾದ ಅಂಶ ಏನೆಂದರೆ, ೧೯೯೧ರ ಜನಗಣತಿಯ ಪ್ರಕಾರ ಒಟ್ಟು ಸಾಕ್ಷರತಾ ಪ್ರಮಾಣ ಇರುವುದು ೫೨.೧ ಅದರಲ್ಲಿ ಪ್ರಮುಖವಾಗಿ ಪುರುಷ ಸಾಕ್ಷರತಾ ಪ್ರಮಾಣ ೬೫.೯ ಇದ್ದರೇ ಮಹಿಳೆಯರ ಪ್ರಮಾಣದಲ್ಲಿ ಗಣನೀಯವಾಗಿ ಅಂದರೆ ೫೯.೪೭ ಇರುವುದು ಕಂಡು ಬರುತ್ತದೆ. ಅಂದರೆ ಇಲ್ಲಿ ಪುರುಷ ಮತ್ತು ಮಹಿಳಾ ಸಾಕ್ಷರತಾ ಪ್ರಮಾಣದಲ್ಲಿ ಅಜಗಜಾಂತರ ವ್ಯತ್ಯಾಸವನ್ನು ಕಾಣಬಹುದು.

ಪ್ರಾಚೀನ ಕಾಲದಲ್ಲಿ ಮಹಿಳೆಯರ ಸ್ಥಿತಿ ಉತ್ತಮವಾಗಿತ್ತು. ಅವರು ಯಾವುದೇ ಬಗೆಯ ತಾರತಮ್ಯಕ್ಕೆ ಒಳಗಾಗಿರಲಿಲ್ಲ; ಗಾರ್ಗಿ, ಮೈತ್ರೇಯಿಯರಂಥ ಮಹಿಳೆಯರುಉದ್ದಾಮ ಪಂಡಿತರಾಗಿದ್ದ ಕಾಲದಲ್ಲಿ ಸ್ತ್ರೀ ಎಂಬೆಲ್ಲಾ ವಾದಗಲನ್ನು ನಾವು ಆಗಾಗ್ಗೆ ಕೇಳುತ್ತಾ ಬಂದಿದ್ದೇವೆ. ಆದರೆ ಯಾವುದೇ ಕಾಲದಲ್ಲಿ ಸ್ತ್ರೀ ಪುರುಷನಿಗೆ ಸಮಾನ ಶೈಕ್ಷಣಿಕ ಅವಕಾಶಗಳು ಇರಲಿಲ್ಲವೆಂಬುದು ನೈಜವಾಗಿ ಇದ್ದಂಥ ಪರಿಸ್ಥಿತಿ. ಶತಮಾನಗಳಿಂದ ಹೆಣ್ಣಿನ ಬದುಕನ್ನು ವಿವಾಹ ಮತ್ತು ತಾಯ್ತನಗಳೆಂಬ ಎರಡು ಸಂಕೋಲೆಗಲಲ್ಲಿ ಬಂಧಿಸಿ, ಆಕೆಗೆ ಶಿಕ್ಷಣವನ್ನು ಪಡೆಯುವ ಹಕ್ಕನ್ನು ನಿರಾಕರಿಸುತಾ ಬಂದಿರುವ ಸಾಮಾಜಿಕ ಮೌಲ್ಯಗಳು ಆಕೆಯನ್ನು ಅಜ್ಞಾನ ದ ಕೂಪದಲ್ಲಿ ಕೆಡವಲು ಬಹು ಆಸಕ್ತಿಯನ್ನು ತೋರಿವೆ. ಹೆಣ್ಣಿನ ಶಿಕ್ಷಣ ವರ್ಜ್ಯ ಎಂಬ ಮಿಥ್ಯೆಯನ್ನು ಸೃಷ್ಟಿಸಿ, ಆ ಮಿಥ್ಯೆಗೆ ಧಾರ್ಮಿಕ ಬೆಂಬಲವೂ ಇದೆಯೆಂಬ ಪ್ರಚಾರವನ್ನು ನೀಡಿ, ಪುರುಷ ಪ್ರಧಾನ ವ್ಯಕ್ತಿಗಳು ಹೆಣ್ಣನ್ನು ಬಹುಕಾಲ ಜ್ಞಾನಾರ್ಜನೆಯ ಪ್ರಕ್ರಿಯೆಯಿಂದಲೇ ದೂರವಿಟ್ಟಿದ್ದರು. ಹೆಣ್ಣಾದವಳು ಬಾಲ್ಯದಲ್ಲಿ ತಂದೆಯ ಪೋಷಣೆಯಲ್ಲೂ ವಯಸ್ಕಳಾದಾಗ ಪತಿಯ ಆಸರೆಯಲ್ಲೂ ವೃದ್ದಾಪ್ಯದಲ್ಲಿ ಮಗನ ಪೋಷಣೆಯಲ್ಲೂ ಇರಬೇಕೆಂದು ಪ್ರತಿಪಾದಿಸಿ ಜನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ ಎಂದ ಮನಿವಿನ ಸ್ತ್ರೀ ಸ್ವಾತಂತ್ರ್ಯ ವಿರೋಧಿಗಳು ಮೌಲ್ಯಗಳು ಇಂದಿಗೂ ಸಂಪೂರ್ಣವಾಗಿ ನಶಿಸಿಹೋಗಿಲ್ಲವೆಂಬುದು ಸಮಕಾಲೀನ ಸಮಾಜದ ವಿಪರ್ಯಾಸಗಳಲ್ಲಿ ಒಂದು.

ಹೆಣ್ಣು ಶಿಶುವಿನ ಜನನವನ್ನೇ ಒಂದು ಶಾಪವೆಂದು ತಿಳಿದಿದ್ದ ಪೋಷಕರು ಅವಳಿಗೆ ಜ್ಞಾನವನ್ನು ಒದಗಿಸಲು ಯಾವ ಆಸಕ್ತಿಯನ್ನು ತೋರಿರಲಿಲ್ಲ. ಸಣ್ಣ ವಯಸ್ಸಿನಲ್ಲೇ ಹೆಣ್ಣು ಮಕ್ಕಳನ್ನು ವಿವಾಹವೆಂಬ ನೊಗಕ್ಕೆ ಕಟ್ಟಿ, ಅವರನ್ನು ಸಾಂಸರಿಕ ಬಂಧನಗಳಲ್ಲಿ ಕಟ್ಟಿ ಹಾಕುತ್ತಿದ್ದರು. ಹೆಣ್ಣು ಮಕ್ಕಳಿಗೆ ಶಿಕ್ಷಣವನ್ನು ನೀಡಿದರೂ ಅದು ಅವರು ಮನೆಚುಲ್ಲಿ ನೆರವೇರಿಸುವಂಥಹ ಕೆಲಸಗಳಿಗೆ ಸಂಬಂದಿಸಿದ್ದಾಗಿತ್ತೇ ಹೊರತು ಅವರಿಗೆ ಪ್ರಾಪಂಚಿಕ ಜ್ಞಾನ ವನುಲು ನೀಡಲಾಗಲಿ, ಅವರ ಬದುಕಿನ ಮೇಲೆ ಅವರು ನಿಯಂತ್ರಣವನ್ನು ಸಾಧಿಸಲಾಗಲಿ ಅವರಿಗೆ ಆ ಶಿಕ್ಷಣ ನೆರವಾಗುತಿರಲಿಲ್ಲ. ಹೆಣ್ಣಿನ ಪ್ರಪಂಚ ಮನೆಗೆ ಮೀಸಲು ಅವಳ ಜೀವನದ ಪ್ರಮುಖ ಗುರಿಗಳೆಂದರೆ ಹೆಂಡತಿಯಾಗಿ, ತಾಯಿಚಿಯಾಗಿ ತನ್ನ ಕರ್ತವ್ಯಗಳನ್ನು ನೆರವೇರಿಸುವುದು ಎಂಬ ನಂಬಿಕೆ ಇಂದಿಗೂ ಜೀವಂತವಾಗಿರುವಾಗ ಶತಮಾನಗಳ ಹಿಂದೆ ಇನ್ನೆಷ್ಟು ಪ್ರಬಲವಾಗಿತ್ತು ಎಂಬುದನ್ನು ನಾವು ಊಹಿಸಬಹುದು.[16]

೧೯ನೇಶತಮಾನದ ಆದಿಭಾಗದಲ್ಲಿ ಜೀವನದ ನೆನಪುಗಳನ್ನು ಬರೆದಿಟ್ಟ ಬಹುಮಟ್ಟೀನ ಹೆಂಗಸರು ಓದುಕಲಿಯಲು ತಮಗಿದ್ದ ತೀವ್ರ ಆಸೆಯ ಬಗ್ಗೆ ಹೇಳಿಕೊಂಡಿದ್ದಾರೆ. ೧೮೦೯ರಲ್ಲಿ ಜನಿಸಿದ ರಸ್ಸುಂದರಿ ದೇವಿ ಕೊನೆಯಿಲ್ಲದ ಮನೆಗೆಲಸಗಳು, ಹನ್ನೆರಡು ಮಕ್ಕಳನ್ನು ಸುಧಾರಿಸುವ ಅವಿರತ ಹೊಣೆಗಳ ನಡುವೆಯೂ ತನ್ನ ಓದಿನ ಆಸೆಗೆ ಹೇಗೋ ಮಾಡಿ ಸ್ವಲ್ಪ ಸಮಯವನ್ನು ಹೊಂದಿಸಿಕುಳ್ಳುತ್ತಿದ್ದು ಸಾಗರದಲ್ಲಿ ನಾನು ಮುಳುಗಿ ಹಗಲು ರಾತ್ರಿಗಳ ಪರಿವೆ ಇಲ್ಲದೆ ದುಡಿಯಿತಿದ್ದೆ. ಸ್ವಲ್ಪ ದಿನಗಳ ನಂತರ ಒಂದಿಷ್ಟು ಸರಿಯಾಗಿ ಸರಿಯಾಗಿ ಓದುವುದನ್ನು ಕಲಿಯಬೇಕೆಂಬ ಆಸೆ ನನ್ನೊಳಗೆ ತೀವ್ರವಾಯಿತು. ಅಸಹಾಯಕತೆಯಲ್ಲಿದ್ದಾಗ ಈ ಓದುವ ಹುಚ್ಚು ನನಗೆ ಅಂಟಿತಾದರೂ ಏಕೆ ಎಂದು ನನ್ನ ಮೇಲೆ ನನಗೇ ಕೋಪವೂ ಬರುತ್ತಿತು ಹಾಗೇ ಹುಡಿಗಿಯರೆನೂ ಆಗ ಓದುತ್ತಿರಲಿಲ್ಲ. ಆ ಕಾಲದಲ್ಲಿ ಹುಡುಗಿಯರು ಓದುವುದು ಕೆಟ್ಟದ್ದೆಂಬ ಅಭಿಪ್ರಾಯವೇ ಇದ್ದದ್ದು. ಹೆಂಗಸರ ಕೈಲಿ ಕಾಗದದ ಚೂರೊಂದು ಕಾಣಿಸಿತೆಂದರೆ ಉರಿದುಬೀಳುತ್ತಿದ್ದರು. ಆದರೆ ಅದೇಕೋ ಇದು ನನಗೆ ಇಷ್ಟವಾಗುತ್ತಿರಲಿಲ್ಲ ಎಂದು ರಾಸ್ಸುಂದರಿಗೆ ಕಲಿಯುವುದ್ದೇನೋ ಸುಲಭದ ಸಂಗತಿಯಾಗಿರಲಿಲ್ಲ. ಆದರೆ ನಿಧಾನವಾಗಿಯಾಗಿಯಾದರೂ ಆಕೆ ಚಲದಿಂದ ಓದಲು ಕಲಿತಳು, ಬರೆಯಲೂ ಕಲಿತಳು. ಕೊನೆಗೊಮ್ಮೆ ತನ್ನ ಅನುಭವಗಳಿಗೆ ಅಭಿವ್ಯಕ್ತಿ ನೀಡಲೂ ಕೂಡ ಸಮರ್ಥಳಾದಳು. ಇದು ಆಕಾಲದಲ್ಲಿ ಮಹಿಳೆಯ ಶಿಕ್ಷಣದ ಮಟ್ಟ ಎತ್ತಿ ತೋರಿಸುತ್ತದೆ. ಇದರ ಜೊತೆಗೆ ಒಂದೇ ಒಂದು ಅವಕಾಶ ಸಿಕ್ಕರೂ ಸಹ ಮಹಿಳೆ ಅದನ್ನು ಉಪಯೋಗಿಸಿಕೊಂಡು ಶಿಕ್ಷಣ ಪಡೆದುಕೊಳ್ಳುವ ತುಡಿತ ಅವಲಲ್ಲಿ ಹೆಚ್ಚಾಗಿ ಕಾಣುತ್ತಿರುವುದು ನಮಗೆಲ್ಲಾ ಒಬ್ಬ ಮಹಿಳೆಗೆ ಶಿಕ್ಷಣ ಎನ್ನುವುದು ಎಷ್ಟು ಅವಶ್ಯಕವಾಗಿತ್ತು ಎಂಬುದನ್ನು ಮನಗಾಣಿಸುತ್ತದೆ.

ಅಂದಿನ ಕಾಲದಲ್ಲಿನ ಮಹಿಳೆಯ ಪರಿಸ್ಥಿತಿಗಳನ್ನು ಅವಲೋಕಿಸಿದಾಗ ಶಿಕ್ಷಣ ಪಡೆದುಕೊಳ್ಳುವಲ್ಲಿ ಅವಳೆಷ್ಟು ಕಷ್ಟಪಡುತ್ತಿದ್ದಳೆಂಬುದು ಕಂಡು ಬರುತ್ತದೆ. ಅದರಲ್ಲೂ ಹೈಯವತಿಸೆನ್ (೧೮೬೬-೧೯೩೨) ಇನ್ನೂ ೫೦ ವರ್ಷಗಳಾದ ಮೇಲೆ ಬಂದಾಕೆ. ಪೂರ್ವ ಬಂಗಾಲದ ಬುಲ್ಕಾ ಜಿಲ್ಲೆಯಲ್ಲಿ ಕಳೆದ ತನ್ನ ಬಾಲ್ಯದ ನೆನಪುಗಳನ್ನು ಆಕೆ ಬರೆದಿಟ್ಟಿದ್ದಾಳೆ. ನಾನು ಸದಾ ಸರ್ವದಾ ಶಾಲೆಯ ಆವರಣದಲ್ಲೇ ಬೀಡು ಬಿಟ್ಟಿರುತ್ತಿದ್ದೆ. ಆಫೀಸು ಆರಂಭವಾದರೆ ಸಾಕು

ಶಾಲೆಯ ಕೋಣೆಗಳಿಗೆ ಹೋಗಿ ಕೂರುತ್ತಿದ್ದೆ. ಗುರುಗಳಿಗೇನೋ ನನ್ನಯ್ ಕಂಡರೆ ತುಂಬಾ ಪ್ರೀತಿ ಇತ್ತು ಪಾಠಗಳನ್ನು ಕೇಳುತ್ತಾ ಕೂರುವುದೆಂದರೆ ನನಗೆ ತುಂಬಾ ಆನಂದವೆನಿಸುತ್ತಿತ್ತು.

ಆದರೆ ಶಿಕ್ಷಣ ಪಡೆಯುವ ಹಕ್ಕು ಮಾತ್ರ ನನಗಿರಲಿಲ್ಲ. ಎಲ್ಲಾ ವಿಷಯಗಳಲ್ಲೂ ನಾನು ಓರಗೆಯ ಹುಡುಗರಂತೆಯೇ ಇದ್ದೆನಾದರೂ, ಶಿಕ್ಷಣದ ಮಾತಿಗೆ ಎಷ್ಟೇ ಆದರೂ ಹೆಂಗಸು ಎನಿಸಿಕೊಂಡೆ. ಓದಿದ ಹೆಂಗಸು ವಿಧವೆಯಾಗುವಿದು ಖಂಡಿತ ಎಂಬ ಮೂಢನಂಬಿಕೆ ತಮ್ಮಲ್ಲಿ ಅದು ಹೇಗೋ ಬೇರುಬಿಟ್ಟಿತ್ತು. ನನ್ನಂತಹ ಹೆಣ್ಣು ಮಕ್ಕಳೆಲ್ಲರ ಪಾಲಿಗೂ ಶಿಕ್ಷಣದ ಬಾಗಿಲು ಮುಚ್ಚಿ ಹೋದದ್ದು ಸಹಜವೇ. ಆದರೆ ಅದು ಹೇಗೋ ಆ ದೇವರು ನನ್ನೊಳಗೆ ಬಿತ್ತಿದ್ದ ಈ ಓದಿನ ಹಂಬಲವಂತೂ ನನ್ನಲ್ಲಿ ಸ್ಫೂರ್ತಿಯನ್ನು ತುಂಬುತ್ತಲೇ ಇತ್ತು.

ಆಕೆಯ ಅದೃಷ್ಟಕ್ಕೆ ಶಾಲೆಯ ಇನ್ಸ್‌ಪೆಕ್ಟರ್ ಭೇಟಿ ಕೊಟ್ಟು ಒಂದು ಸಂದರ್ಭದಲ್ಲಿ ಹುಡುಗರೆಲ್ಲರೂ ಉತ್ತರಿಸಲಿ ಸೋತ ಪ್ರಶ್ನೆಗಳಿಗೆಲ್ಲಾ ಹೈಮವತಿ ಚಕಚಕನೆ ಉತ್ತರಿಸುತ್ತಿದ್ದು ಆತನ ಗಮನ ಸೆಳೆಯಿತು. ಆ ಇನ್ಸ್ ಪೆಕ್ಟರು ಹೈಮವತಿಯ ತಂದೆಯನ್ನು ಕಂಡು ಮಾತನಾಡಿದರು. ಹೈಮವತಿ ಅಧಿಕೃತವಾಗಿ ಶಾಲೆಯಲ್ಲಿ ವಿಧ್ಯಾರ್ಥಿನಿಯಾಗಿ ದಾಖಲಾದಳು.

ಈ ಮೇಲಿನ ಹೈಮವತಿ ಸನ್ ಅವರ ಮನದಾಳದ ಮಾತುಗಳನ್ನು ನೋಡಿದಾಗ ಅಂದು ಮಹಿಳೆ ಶಿಕ್ಷಣ ಪಡೆದುಕೊಳ್ಳಲು ಆಸಕ್ತಿಯಿದ್ದರೂ ಸಹ ಅವಳಿಗೆ ಸಂಪೂರ್ಣವಾಗಿ, ಮುಕ್ತವಾಗಿ ಶಿಕ್ಷಣವನ್ನು ಪಡೆದುಕೊಳ್ಳಲು ಎಷ್ಟೊಂದು ಕಷ್ಟಪಡಬೇಗಾಗುತ್ತಿತ್ತು ಮತ್ತು ಅಂದಿನ ಮಹಿಳಾ ಶಿಕ್ಷಣದ ಸ್ಥಿತಿಗತಿಯ ಬಗ್ಗೆ ಸ್ಪಷ್ಟವಾದ ಚಿತ್ರಣ ಸಿಗುತ್ತದೆ. ಆದರೆ ಇಂತಹ ಕ್ಲಿಷ್ಟಕರವಾದ ಅಂದಿನ ದಿನಗಳಲ್ಲಿ ಮಹಿಳೆಯರುಶಿಕ್ಷಣದ ಕಡೆಗೆ ತೋರುತ್ತಿದ್ದ ಮೂಢನಂಬಿಕೆಗಳು, ಸಾಂಪ್ರದಾಯಿಕ ರೂಡಿಗಳು, ಅವಳನ್ನು ಶಿಕ್ಷಣ ಕಲಿಯಲಿಕ್ಕೆ ಆಸ್ಪದ ನೀಡುತ್ತಿರಲಿಲ್ಲ. ಬಾಲ್ಯ ವಿವಾಹ, ಪರದಾ ಪಧ್ಧತಿ, ಸತಿ ಪದ್ಧತಿಗಳಂತಹ ಕ್ರೂರ ಪಧ್ಧತಿಗಳಿಂದಾಗಿ ಸ್ತ್ರೀಯರಿಗೆ ಅಕ್ಷರ ಜಾಞನ ಪಾಪ ಕಾರ್ಯವಾಯಿತು. ಸ್ತ್ರೀಯರು ಹೊರಗೆ ಓಡಾಡುವುದನ್ನು ಅನಿಷ್ಟವೆಂದು ಪರಿಗಣಿಸಲಾಯಿತು. ಶಿಕ್ಷಣದ ರಹದಾರಿಯಾಗಿದ್ದ ಉಪನಯನವನ್ನು ರದ್ದುಗೊಳಿಸಲಾಯಿತು. ವಿಧವಾ ವಿವಾಹಕ್ಕೆ ಮನ್ನಣೆಯಿಲ್ಲದ್ದರಿಂದ ಸತಿ ಪಧ್ಧತಿ, ಜೋಹರ್, ದೇವದಾಸಿ ಮುಂತದುವು ಸ್ತ್ರೀಯರನ್ನು

ಅಂಧಕಾರದಲ್ಲಿರಿಸಿತ್ತು. ಕೊನೆಗೆ ಆಕೆ ಪುರುಷನ ಕೈಗೊಂಬೆಯಾಗಿ, ಆಶ್ರಿತಳಾಗಿ ದಾಸಿಯಂತೆ ಇರುವ ಸ್ಥಿತಿಯುಂಟಾಯಿತು.[19]

ಭಾರತದಲ್ಲಿ ಅಂದಿನ ಮಹಿಳೆ ಮತ್ತು ಪುರುಷರ ಮಧ್ಯೆ ಸಾಕಷ್ಟು ಅಸಮಾನತೆ ಇತ್ತು ಎಂಬುದರ ಜೊತೆಗೆ ಇಲ್ಲಿ ಪ್ರಮುಖವಾಗಿ ಗಮನಿಸಬೇಕಾದ ವಿಷಯುವೆಂದರೆ ಮಹಿಳೆತ್ಯರನ್ನು ಆದಷ್ಟು ಶಿಕ್ಷಣ ವಂಚಿತರನ್ನಾಗಿ ಮಾಡಿ ಅವಳನ್ನು ಮನೆಗೆ ಮಾತ್ರ ಮೀಸಲು ಎಂಬ ದೃಷ್ಟಿಯಿಂದ ನೋಡಲಾಗುತ್ತಿತ್ತು. ಇಂತಹ ಸಮಸ್ಯೆಗಳಿಗೆ ಮಹಿಳೆಯು ಸ್ವತಹ ಜವಾಬಾ ರಿಗಳಾಗುತ್ತಾಳೆ. ಕಾರನವೆಂದರೆ, ನಮ್ಮ ಸಮಾಜದಲ್ಲಿರುವ ಲಿಂಗ ವ್ಯವಸ್ಥೆಯ ಭೇದಭಾವದ ಲೋಕ; ಕೆಲಸ ಕಾರ್ಯಗಳು ಸ್ತ್ರೀಯರಿಗೆ, ಪುರುಷರಿಗೆ ಎಂದು ಎಂದು ಪ್ರತ್ಯೇಕವಾಗಿ ನಿಗದಿಯಾಗಿದೆ. ಇಬ್ಬರ ಲೋಕಗಳನ್ನು ಪ್ರತ್ಯೇಕವಾಗಿ ಗುರುತಿಸಲಾಗಿದೆ. ಹೆಂಗಸರು ಹೆಂಗಸರ ಮಧ್ಯೆ ಹೆಚ್ಚಿನ ದಿನನಿತ್ಯದ ಸಂಬಂಧಗಳು ನಿರ್ವಹಣೆಯಾಗುತ್ತವೆ. ಹಾಗಾಗಿ ಸ್ತ್ರೀ ಶಿಕ್ಷಣದ ವಿರುದ್ದವಾಗಿ ನಿಂತವರೂ ಹೆಂಗಸರೇ. ೧೯೭೦ಕ್ಕೂ ಮುಂಚಿನ ಕಾಲದಲ್ಲಿ ಆಕಸ್ಮಾತ್ ಓದುಬರಗಳಿಗೆ ಯತ್ನಿಸಿದ ಪ್ರತಿಯೊಬ್ಬ ಮಹಿಳೆಯು ತಾನು ಮನೆಯ ಇತರ ಹೆಂಗಸರ ಗಮನಕ್ಕೆ ಬಾರದಂತೆ ಜಾಗ್ರತವಹಿಸಿ ಓದು ಬರಹಗಳನ್ನು ಸಾಧಿಸಿದ್ದರೂ ಅಲ್ಲಿ ಕೆಲವೊಮ್ಮೆ ತಾಯಂದಿರು ಸ್ವಲ್ಪ ಉದಾರತೆಯನ್ನು ತೋರಿರಬಹುದೇ ಹೊರತು ಅತ್ತೆಯ ಮನೆಯ ಹೆಂಗಸರು ತೀರಾ ನಿರ್ದಾಕ್ಷಿಣ್ಯವಾಗಿ ಸ್ತ್ರೀ ಶಿಕ್ಷಣವನ್ನು ವಿರೋಧಿಸುತ್ತಿದ್ದ ಸಂಗತಿಯ ಹಿನ್ನತಿಗೆ ಕೆಲಸ ಮಾಡಿದ ಮುಖ್ಯ ಆಶಯಗಳಾವವು ಎಂದು ಕಲ್ಪಿಸುವುದು ಕಷ್ಟವೇ. ಅದ್ದರೂ ಪುರುಷ ಪ್ರಧಾನವಾಗಿರುವ ಈ ಸಾಮಾಜಿಕ ವ್ಯವಸ್ಥೆಯೊಂದರ ಸದಸ್ಯರಾಗಿರುವ ಮಹಿಳೆಯರುಹಿಂದಿನಿಂದ ಬಂದಿರುವ ರೂಢಿಗತ ನಿಯಮಗಳನ್ನು ವಿರೋಧ ಮಾಡಿ ಜೀವಿಸುವ ಸ್ಥಿತಿ ಅಂದು ಕಂಡುಬರುತ್ತಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

**ಸ್ವಾತಂತ್ಯ ನಂತರದಲ್ಲಿ ಮಹಿಳಾ ಶಿಕ್ಷಣ**

ಸಮಾನತೆಯ ಸ್ವಾತಂತ್ರ್ಯ ಬಂದಾಗ ಭಾರತೀಯ ಮಹಿಳೆಯರಲ್ಲಿ ಸ್ವಲ್ಪ ಶಕ್ತಿ ಬಂದಂತಾಯಿತು. ಕಾರಣವೇನೆಂದರೆ ಸಂವಿಧಾನಾತ್ಮಕವಾಗಿ ಸಮಾನತೆಯ ಹಕ್ಕನ್ನು ಪಡೆದುಕೊಂಡಿರುವುದೇ ಕಾರಣ ಎಂದರೆ ತಪ್ಪಾಗಲಾರದು. ಅಂತಹ ಸಂಧರ್ಭದಲ್ಲಿ ನಾವು ಕಂಡ

ಕನಸುಗಳಲ್ಲಿ ಸಾರ್ವತ್ರಿಕ ಶಿಕ್ಷಣದ ಕನಸು ಒಂದು ಎಂದೇನೂ ಪ್ರತ್ಯೇಕವಾಗಿ ಹೇಳಬೇಕಿಲ್ಲ. ಸಂವಿಧಾನ ಇಲ್ಲರಿಗೂ ಸಮಾನತೆಯನ್ನು ನೀಡಿ ಲಿಂಗ ಬೇಧವನ್ನು ನಿಷೇಧಿಸಿತಾದರೂ ವಾಸ್ತವ್ಯದಲ್ಲಿ ಸ್ತ್ರೀ ಶಿಕ್ಷಣ ನಾವೆಣಿಸಿದಷ್ಟು ಪ್ರಗತಿಯನ್ನು ಸಾಧಿಸಲಿಲ್ಲ. ೧೯೫೧ ರಲ್ಲಿ ಶೇ. ೮.೮೬ ರಷ್ಟಿದ್ದ ಸಾಕ್ಷರತೆಯ ಪ್ರಮಾಣ, ೨೦೦೧ರಲ್ಲಿ ಶೇ. ೫೪ ರಷ್ಟಿದ್ದದ್ದು, ಈ ಸಮಾಜದಲ್ಲಿ ಶಿಕ್ಷಣ ಅವಕಾಶಗಳ ಬಳಕೆಯಲ್ಲಿ ಲಿಂಗ ತಾರತಮ್ಯ ಎಷ್ಟರ ಮಟ್ಟಿಗೆ ಕಾರ್ಯ ಪ್ರವೃತ್ತವಾಗಿದೆ ಎಂಬುದಕ್ಕೆ ಸಾಕ್ಷಿನಾಗಿದೆ. ಹಿಂದಿಗಿಂತ ಇಂದು ಶಿಕ್ಷಣದ ಎಲ್ಲ ಮಟ್ಟಗಳಲ್ಲೂ ಮಹಿಳೆಚುರ ದಾಖಲಾತಿಯ ಪ್ರಮಾಣದಲ್ಲಿ ಹೆಚ್ಚಳ ಉಂಟಾಗಿದೆಯಾದರೂ ದೇಶದ ಅನೇಕ ಭಾಗಗಳಲ್ಲಿ ಮಹಿಳಾ ಅನಕ್ಷರತೆಯ ಪ್ರಮಾಣ ಧಿಗ್ಭ್ರಮೆ ಹುಟ್ಟಿಸುವಷ್ಟು ಕೆಳಮಟ್ಟದಲ್ಲಿದೆ.[20]

ಕಡ್ಡಾಯ ಹಾಗೂ ಉಚಿತ ಪ್ರಾಥಮಿಕ ಶಿಕ್ಷಣವೆನ್ನುವುದು ಅನೇಕ ಸಂದರ್ಭಗಳಲ್ಲಿ ಘೋಷಣೆಯ ಮಟ್ಟದಲ್ಲೇ ಉಳಿದಿರುವುದು ಶೋಚನೀಯ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ ಗುರಿಯನ್ನು೧೯೬೦ರ ದಶಕದಲ್ಲೇ ಸಾಧಿಸುವ ಮಹದಾಸೆಯನ್ನು ಹೊಂದಿದ್ದರೂ ಕೂಡ, ಹೊಸದೊಂದು ಶತಮಾನವೇ ಅಂಕುರಿಸಿದ್ದರೂ, ಆ ಗುರಿ ಇನ್ನೂ ಕೈಗೆಟುಕದ ಮರೀಚಿಕೆಯಾಗಿ ಉಳಿದಿರುವುದಾದರು ಏತಕ್ಕೆ? ಒಂದೆಡೆ, ಸಮಾಜದ ಸರ್ವ ರಂಗಗಳಲ್ಲೂ ಮಹಿಳೆಯರ ಸಾಧನೆ ಹೆಚ್ಚುತ್ತಾ ಹೋಗುತ್ತಿದ್ದರೆ, ಮತ್ತೊಂದೆಡೆ, ಶಿಕ್ಷಣವೇನೆಂಬುದನ್ನೇ ಅರಿಯದ ಮಹಿಳೆಯರ ಸಂಖ್ಯೆಯೂ ಹೆಚ್ಚಾಗಿಯೇ ಉಳಿದಿರುವುದನ್ನು ನೋಡಿದಾಗ. ಸ್ತ್ರೀ ಶಿಕ್ಷಣ ವು ಸಾಫಲ್ಯ ಕಾಣುತ್ತಿರುವ ಸಂಗತಿ ಮರೆಮಾಚುತ್ತದೆ.

ನಮ್ಮ ದೇಶದಲ್ಲಿ ಸಾಕ್ಷರತೆ ಹಾಗೂ ಶಾಲಾ ದಾಖಲಾತಿಗಳ ಪ್ರಮಾಣದಲ್ಲಿ ಹೆಚ್ಚಳ ಉಂಟಾಗಿರುವುದೇನೋ ನಿಜ ಆದರೆ ಈ ರೀತಿಯ ಹೆಚ್ಚಳ ದೇಶದ ಅತಿ ಹೆಚ್ಚಿನ (೮೬.೯೩) ಮಹಿಳಾ ಸಾಕ್ಷರತೆಯಿದ್ದರೆ, ರಾಜಸ್ಥಾನದಲ್ಲಿ ಅತ್ಯಂತ ಕಡಿಮೆ (೨೦.೮೪) ಮಟ್ಟದ ಸ್ತ್ರೀ ಸಾಕ್ಷರತೆಯನ್ನು ಕಾಣಬಹುದು. ಅದೇ ರೀತಿಯಾಗಿ ನಮ್ಮ ಕರ್ನಾಟಕದಲ್ಲಿ ಕೂಡಾ ೨೦೦೧ರ ಜನಗಣತಿಯ ಪ್ರಕಾರ ಒಟ್ಟು ಕರ್ನಾಟಕದ ಜನರು ೬೬.೬ ರಷ್ಟು ಸಾಕ್ಷರರಾಗಿದ್ದು ಅದರಲ್ಲಿ ಪುರುಷ ೭೬.೧ ರಷ್ಟು ಇದ್ದರೆ, ಮಹಿಳೆಯರು೫೬.೯ ರಷ್ಟು ಇದೆ ಎಂದು ತಿಳಿದು ಬರುತ್ತದೆ.

ಅದೇ ರೀತಿಯಾಗಿ ನಮ್ಮಲ್ಲಿ ಕರ್ನಾಟಕದಲ್ಲಿ ಮಹಿಳಾ ಸಾಕ್ಷರತೆಯು ಶೇಕಡ ೨೫ಕ್ಕಿಂತ ಕಡಿಮೆ ಇರುವ ೪ ಜಿಲ್ಲೆಗಳ ಪೈಕಿ ಕೊಪ್ಪಳವೂ ಒಂದು ಜಿಲ್ಲಿಯಾಗಿದೆ. ೧೯೯೧ ರಲಿ ಕೊಪ್ಪಳ ಜಿಲ್ಲೆಯ ಮಹಿಳಾ ಸಾಕ್ಷರತಾ ಪ್ರಮಾಣ ಕೇವಲ ಶೇಕಡ ೨೨.೭೮ ಇದರೆ ಪುರುಷರು ೫೩.೪೬ ರಷ್ಟಿದೆ ಎಂದಾಗ ಇಲ್ಲಿನ ಲಿಂಗಾನು ಪಾತ್ರದಲ್ಲಿ ಸಾಕ್ಷರತಾ ಪ್ರಮಾಣದಲ್ಲಿನ ವ್ಯತ್ಯಾಸ ಕಾಣಬಹುದು. ಅಂದರೆ ಪುರುಷರಿಗೆ ನೀಡಿರುವ ಪ್ರಾಶಸ್ತ್ಯ ಮಹಿಳೆಯರಿಗೆ ಸಿಕ್ಕಿಲ್ಲಾ ಎಂಬುದು ಸ್ಪಷ್ಟವಾಗುತ್ತದೆ. ಒಟ್ಟಿನಲ್ಲಿ ನಮ್ಮ ದೇಶದೆಲ್ಲೆಡೆ ಮಹಿಳಾ ಸಾಕ್ಷರತಾ ಪ್ರಮಾಣ ಪುರುಷ ಸಾಕ್ಷರತೆಗೆ ಸಮಾನಾಗಿಲ್ಲ ಎಂಬುದು ಗಮನಾರ್ಹವಾದ ವಿಷಯುವಾಗಿದ್ದು ಅದನ್ನು ನಾವು ಈ ಕೆಳಗಿನ ಕೋಷ್ಟಕದ ಮೂಲಕ ನೋಡಬಹುದು

**ಸಾಕ್ಷರತಾ ಪ್ರಮಾಣ**

| ವರ್ಷ | ಪ್ರತಿ ಶತ ಸಾಕ್ಷರರು | ಪ್ರತಿಶತ ಪುರುಷ ಸಾಕ್ಷರರು | ಪ್ರತಿ ಶತ ಮಹಿಳಾ ಸಾಕ್ಷರರು |
|---|---|---|---|
| ೧೯೧೧ | ೫.೯ | ೧೦.೬ | ೧.೩ |
| ೧೯೨೧ | ೭.೨ | ೧೨.೨ | ೧.೮ |
| ೧೯೩೧ | ೯.೫ | ೧೫.೬ | ೨.೬ |
| ೧೯೪೧ | ೧೬.೧ | ೨೪.೯ | ೭.೩ |
| ೧೯೫೧ | ೧೬.೭ | ೨೫.೦ | ೭.೯ |
| ೧೯೬೧ | ೨೪.೦ | ೩೪.೪ | ೧೩.೦ |
| ೧೬೭೧ | ೨೯.೫ | ೩೯.೪ | ೧೮.೭ |
| ೧೯೮೧ | ೩೬.೨ | ೪೬.೯ | ೨೮.೮ |
| ೧೯೯೧ | ೫೨.೨ | ೬೪.೧ | ೩೯.೩ |
| ೨೦೦೧ | ೬೫.೩೮ | ೭೫.೮೫ | ೫೪.೧೬ |

ಈ ಪಟ್ಟಿಯಲ್ಲಿ ಮಹಿಳಾ ಸಾಕ್ಷರತಾ ಪ್ರಮಾಣ ತುಂಬಾ ಕಡಿಮೆ ಇರುವುದು ಸ್ಪಷ್ಟವಾಗಿರುತ್ತದೆ. ಇಡೀ ದೇಶದ ಒಂದು ಪರಿಸ್ಥಿತಿ ಹೀಗಿರುವಾಗ ಗ್ರಾಮಗಳಲ್ಲಿನ ಮಹಿಳಾ ಸಾಕ್ಷರತೆಯ ಬಗ್ಗೆ ಆಲೋಚಿಸುವುದು ತುಂಬಾ ಕಷ್ಟಕರವಾಗಿರುತ್ತದೆ ಏಕೆಂದರೆ ನಮ್ಮ ದೇಶವು ಗ್ರಾಮಗಳಿಂದ ಕೂಡಿದ ದೇಶವಾಗಿರುವುದರಿಂದ ಅಲ್ಲಿನ ಮಹಿಳಾ ಸಾಕ್ಷರತೆಯು ಇನ್ನು ಕಡಿಮೆ

ಮಟ್ಟದಲ್ಲಿರುವುದು ನಮಗೆಲ್ಲಾ ತಿಳಿದಿರುವ ವಿಚಾರವಾಗಿದೆ. ಇದಕ್ಕೆಲ್ಲಾ ಪ್ರಮುಖ ಕಾರನ ಎಂದರೆ ಬಡತನ, ಅಜ್ಞಾನ ಹೆಣ್ಣು ಮಕ್ಕಳ ಜೀವನದಲ್ಲಿ ಈ ೪ ಅಂಶಗಳೂ ಒಟ್ಟಾಗಿ ಕಲೆತು ಮಹಿಳಾ ಶೈಕ್ಷಣಿಕ ಪ್ರಗತಿಗೆ ಬಲವಾದ ಕಾರಣಗಳಾಗುತ್ತವೆ.

ಈ ರೀತಿಯ ಹಿಂದುಳಿದ ಶಿಕ್ಷಣಕ್ಕೆ ಕಾರಣಗಳೇನು? ಎಂಬುದರ ಬಗ್ಗೆ ಪತ್ತೆ ಹಚ್ಚಿದಾಗ ಮೊದಲು ನಮಗೆ ಕಂಡುಬರುವುದು.

೧. ಸಾಂಪ್ರದಾಯಿಕ ಶಿಕ್ಷಣವನ್ನು ಸಾಮಾಜಿಕ ಸ್ಥಿತ್ಯಂತರದ ಒಂದು ಘಟ್ಟದಲ್ಲಿ ನಿಲ್ಲಿಸಲಾಯಿತು. ಗಂಡು ಮಕ್ಕಳನ್ನು ಪಡೆಯುವ ಹಂಬಲದೊಂದಿಗೆ ಹೆಣ್ಣು ಮಕ್ಕಳನ್ನು ಮೂಲೆಗೊತ್ತರಿಸುವ, ಹತ್ತಿಕ್ಕುವ ಕಾರ್ಯ ನಡೆಯಿತು. ಹೀಗಾಗಿ ಶಿಕ್ಷಣದ ಹಕ್ಕನ್ನು ಕಳೆದುಕೊಂಡ ಸ್ತ್ರೀಯರಿಗೆ ಗಂಡಸರ ಶೈಕ್ಷಣಿಕ ಉನ್ನತಿಯಷ್ಟೇ ಮುಖ್ಯವಾಗಿ ತಮ್ಮ ಸೃಜನಶೀಲತೆಯನ್ನು ಕಡೆಗಣಿಸಿಕೊಂಡರು.

೨. ಅನುವಂಶಿತವಾಗಿ ಶಿಕ್ಷಣದ ಜೊತೆಗೆ ಸಾಂಪ್ರದಾಯಿಕ ಕೃಷಿ ಉದ್ಯೋಗದಿಂದ ಸ್ತ್ರೀಯರನ್ನು ಹೊರಗಿರಿಸಲಾಯಿತು. ಇದರಿಂದ ಆಕೆಗೆ ಉದ್ಯೋಗದ ಚಲನವಲನ ಸಾಧ್ಯತೆ ತಪ್ಪಿತು.

೩. ಬಾಲ್ಯ ವಿವಾಹ ವರದಕ್ಷಿಣೆ, ವಿಧವಾ ವಿವಾಹ ಮುಂತಾದ ಸಾಮಾಜಿಕ ಪಿಡುಗುಗಳಿಂದಾಗಿ ಶಾಲಾ ಪ್ರವೇಶವನ್ನೇ ನಿರಾಕರಿಸಲಾಯಿತು. ಇದರಿಂದ ಪ್ರಾಚೀನ ಸಮಾಜದಲ್ಲಿ ಸಾಕಷ್ಟು ಪುರುಷ ಸಮಾನತೆ ಹೊಂದಿದ್ದ ಸ್ತ್ರೀಯರು ಕೇವಲ ಗೃಹ ಬಂಧಿಗಳಾಗಿ ಗಂಡು ಮಕ್ಕಳಿಗಾಗಿ ಹಂಬಲಿಸುತ್ತಾ, ದಡ್ಡರು, ಮೂರ್ಖರು, ವಂಚಕಿಯರು ಮುಂತಾದ ಅಪವಾದಗಳಿಗೀಡಾದರು.

೪. ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ಹುಡುಗಿಯರಿಗೆ ಸಾಕಷ್ಟು ಅವಕಾಶಗಳಿವೆ. ಸರ್ಕಾರಗಳು ಸಂವಿಧಾನದಲ್ಲಿ ಸ್ರಚಿಸಿರುವ ಅಸಮಾನತೆ ಹಕ್ಕುಗಳಲ್ಲಿ ಶಿಕ್ಷಣವನ್ನು ಅಳವಡಿಸಿಕೊಂಡಿವೆ. ಸ್ವಾತಂತ್ರ್ಯ ಬಂದು ೫೦ ವರ್ಷಗಳಾದರೂ ಸಂಪೂರ್ಣ ಸಾಕ್ಷರತೆಯನ್ನು ಸಾಧಿಸಲು ಸಾಧ್ಯವಾಗಿಲ್ಲ. ಇಂದಿಗು ಮಹಿಳೆಚುರಲ್ಲಿ ಶೇ.೬೦ಕಿಇಂತಲೂ ಹೆಚ್ಚು ಜನರು ಅನಕ್ಷರಸ್ಥೆಯರಾಗಿದ್ದಾರೆ. ಅದ್ದರಿಂದ ಸಾಕ್ಷರತಾ ಸಮಸ್ಯೆಯನ್ನು ವಿಶ್ಲೇಷಿಸಬೇಕಾಗುತ್ತದೆ. ಮೊದಲನೆಚುದಾಗಿ ಶಾಲೆಗೆ ದಾಖಲಾಗುವ ಮಕ್ಕಳ ಪೈಕಿ ಗಂಡು ಮಕ್ಕಳಿಗಿಂತ ಹೆಣ್ಣು

ಮಕ್ಕಳ ಸಂಖ್ಯೆ ತುಂಬಾ ಕಡಿಮೆ. ಮಧ್ಯದಲ್ಲಿ ಶಾಲೆ ಬಿಡುವುದು ಹಾಗೂ ಒಂದೇ ತರಗತಿಯಲ್ಲಿ ಒಂದು ವರ್ಷಕ್ಕಿಂತ ಹೆಚ್ಚು ವರ್ಷ ಇರುವುದು ಎಂದರೆ ಶಾಲೆಗೆ ಗೈರು ಹಾಜರಾಗುವ ಮೂಲಕ ಮುಂದಿನ ತರಗತಿಗೆ ಹೋಗದಿರುವುದು ಈ ಸಮಸ್ಯೆಗಳು ಬಾಲಕಿಚುರಿಗೆ ಸಾಮಾನ್ಯ. ಇದಕ್ಕೆ ಹತ್ತು ಹಲವು ಕಾರಣಗಳಿವೆ. ಹುಡುಗಿಯರನ್ನು ನಿಧಾನವಾಗಿ ಶಾಲೆಗೆ ಸೇರಿಸುವುದು, ಮನೆಗೆಲಸ, ದೂರದಿಂದ ನೀರು ತರುವುದು (ಗ್ರಾಮಾಂತರ ಪ್ರದೇಶಗಳಲ್ಲಿ) ಸೌದೆ ಆರಿಸಲು ಕಳುಹಿಸುವುದು, ಮನೆಯಲ್ಲಿ ತಾಯಿಗೆ ನೆರವಾಗುವುದು ಹಾಗೂ ಇಂದಿಗೂ ಜಾರಿಯಲ್ಲಿರುವ ಬಾಲ್ಯ ವಿವಾಹ ಪಧ್ಧತಿ ಇವೆಲ್ಲವೂ ಹುಡುಗಿಯರ ಶಾಲಾ ಶಿಕ್ಷಣಕ್ಕೆ ಕಡಿವಾಣ ಹಾಕುವ ಸಮಸ್ಯೆಗಳಾಗಿವೆ.

ಇವುಗಳಲ್ಲದೇ ನಮ್ಮ ದೈನಂದಿನ ಜೀವನದಲ್ಲಿ ಹತ್ತು ಹಲವು ಸಮಸ್ಯೆಗೆ ಕ್ಹರಣಗಳನ್ನು ಪತ್ತೆ ಹಚ್ಚಬಹುದು ಸಂಪ್ರದಾಯಸ್ಥ ಕುಟುಂಬಗಳಲ್ಲಿ ಹೆಣ್ಣು ಮಕ್ಕಳನ್ನು ಓದಿಸುವುದು ಒಂದು ಅಪರಾಧ ಎಂದು ತಿಳಿದುಕೊಳ್ಳುವುದು, ಓದಿಸಿದರೆ ಅವಳಿಗೆ ತಕ್ಕ ವರನನ್ನು ಹುಡುಕುವ ಸಮಸ್ಯೆ ಎದುರಾಗಬಹುದು ಎಂದು ಪಾಲಕರು ಆಲೋಚಿಸುವುದು, ಹೆಣ್ಣು ಮಗು ರುತುವ್ಮತಿಯಾದರೆ ಅವಳು ಪುರುಷ ಕಣ್ಣೀಗೆ ಬೀಳುವುದು ಅಲ್ಲದೇ ಅವಳನ್ನು ಲೈಂಗಿಕ ಪ್ರಚೋದನೆಯತ್ತಾ ಸಮಾಜದಲ್ಲಿ ವರ್ಗ ಹಿಂಬಾಲಿಸಿವುದು ಬೇಡಾ ಎಂಬ ಪುರುಷರ ನಿರ್ಧಾರಗಳು, ವರದಕ್ಷಿಣೆಯ ಜೊತೆಗೆ ಕಲಿತ ಹೆಣ್ಣೀಗೆ ಗರ್ವ ಜಾಸ್ತಿ ಎನ್ನುವ ನಿಲುವಿನಿಂದ ಬೇಡ ಎಂದರೆ ಹೇಗೆ? ಎಂಬ ಪಾಲಕರ ವಿಚಾರಗಳು, ಮನೆಗೆ ಸಂಬಂಧಿಸಿದ ಸಂಪ್ರದಾಯ ಕಟ್ಟುನಿಟ್ಟುಗಳನ್ನು ಬಾಲಕಿಯರ ಮೇಲೆ ಹೇರುವುದು, ಮುಂತಾದ ಕಾರಣಗಳ ಜೊತೆಗೆ ಪಾಲಕರಲ್ಲಿರುವ ಮೌಢ್ಯ, ಅಜಾಞನ , ಅನಕ್ಷರತೆ, ಬಡತನ ಮುಂತಾದ ವಿಷಯಗಳು ಬಾಲಕಿಯರನ್ನು ಶಿಕ್ಷಣ ವಂಚಿತೆಯರನ್ನಾಗಿಸುತ್ತದೆ.

ಇವುಗಳಲ್ಲದೇ ನಮ್ಮ ಸರ್ಕಾರವೇ ಮುದ್ರಿಸಲ್ಪಟ್ಟಿರುವ ಶಾಲಾ ಪಠ್ಯ ವಿಷಯಗಳಲ್ಲೂ ಸಹ ಸಾಹಸಮಯ ಕಾರ್ಯಗಳಿಗೆ ಸಂಬಂಧಿಸಿದಂತೆ, ವೈಜ್ಞಾನಿಕ ವಿಷಯಗಳು ಕೇವಲ ಹ್ಮಡಿಗಿಯರೆಂದು ಚಿತ್ರಗಳ ಸಹಿತ ಒತ್ತು ನೀಡುವುದು ಹುಡುಗಿಯರನ್ನು ಅಂತರ್ಮುಖಿಗಳಾಗುವಂತೆ ಮಾಡಿ ವ್ಯಕ್ತಿತ್ವ ವಿಕಾಸಕ್ಕೆ ಅವಕಾಶ, ಪ್ರೋತ್ಸಾಹಿಸಿದ ನೀಡದಿರುವುದು ಹುಡುಗಿಯರಿಗೆ ನಾಚಿಕೆ ಸಂಕೋಚ

ಹೆಚ್ಚಾಗುವಂತೆ ಮಾಡುತ್ತದೆ ಅಲ್ಲದೇ ಅವರಿಗಾಗಲೇ ಪೂರ್ವಗ್ರಹ ಪೀಡಿತರನ್ನಾಗಿ ಮಾಡುವ ಕೌಟುಂಬಿಕ ಸದಸ್ಯರು ಕೇವಲ ಅಡಿಗೆ ಮಾಡುವ, ಬಟ್ಟೆ ಒಗೆದು, ಪಾತ್ರೆ ತೊಳೆಯುವ, ಮನೆಗೆಲಸ, ಮಕ್ಕಳ ಪಾಲನೆ-ಲಾಲನೆಗಳಿರುವಂಥ ವಿಷಯಗಳಿಗೆ ಹೆಚ್ಚು ಹುಡುಗಿಯರನ್ನು ತೊಡಗಿಸುವುದು ಅವರಿಗೆ ಇದೇ ನಿನ್ನ ಕೆಲಸ ಎಂದು ಒತ್ತು ಕೊಟ್ಟು ಹೇಳುವುದು ಇವೆಲ್ಲ ಮಹಿಳಾ ಶಿಕ್ಷಣಕ್ಕಿರುವ ಸಮಸ್ಯೆಗಳೆಂದೇ ಹೇಳಬಹುದು. ಅಲ್ಲದೇ ಇತ್ತೀಚಿಗೆ ಹೆಚ್ಚಾಗುತ್ತಿರುವ ಶಾಲೆಗಲಲ್ಲಿ ಅಪ್ರಾಪ್ತ ವಯಸ್ಕ ಹುಡುಗಿಯರ ಮೇಲೆ ಶಿಕ್ಷಕರೇ ಲೈಂಗಿಕ ಶೋಷಣ ಮಾಡುವ ಬಗ್ಗೆ ವರದಿಗಳು ಬರುತ್ತವೆ. ಇಂತಹ ಕಾರಣಗಳಿಂದಲೇ ಪೋಷಕರು ಹೆದರಿ ತಮ್ಮ ಹೆಣ್ಣು ಮಕ್ಕಳಿಗೆ ಮನೆಯಲ್ಲಿಯೇ ಇರಲಿ ಬಿಡು ಎನ್ನುವ ನಿರ್ಧಾರಗಳನ್ನು ತಾಳುತ್ತಾರೆ. ಹೆಣ್ಣುಮಕ್ಕಳ ಶೀಲಹರಣ, ಲೈಂಗಿಕ ದೌರ್ಜನ್ಯದಂತಹ ಕೃತ್ಯಗಳಿಂದ ತಪ್ಪಿಸಿಕೊಳ್ಳಲು ಈ ರೀತಿಯ ನಿರ್ಧಾರಗಳು ತಾಳುತ್ತಾರೆ.

ಇವುಗಳಲ್ಲದೇ ಇನ್ನು ಪ್ರಮುಖವಾದಂತಹ ಕಾರಣಗಳನ್ನು ನೀಡಬಹುದು ಅವು ರಾಜಕೀಯ ಸಮಸ್ಯೆ ಆಗಿರಬಹುದು, ಆರ್ಥಿಕ ಸಮಸ್ಯೆ ಆಗಿರಬಹುದು, ಸಾಮಾಜಿಕ ಸಮಸ್ಯೆ ಆಗಿರಬಹುದು. ಅವೆಲ್ಲದರಕ್ಕಿಂತ ಮುಖ್ಯವಾಗಿ ಕೌಟುಂಬಿಕ ಸಮಸ್ಯೆಯಾಗಿರಬಹುದು.

ಇವುಗಳ ಬಗ್ಗೆ ಈ ರೀತಿಯಾಗಿ ಚರ್ಚಿಸಬಹುದು

**ಕೌಟುಂಬಿಕ ಸಮಸ್ಯೆ:**

ಶಿಕ್ಷಣ ಕುರಿತ ಲಿಂಗ ತಾರತಮ್ಯ ಹೆಣ್ಣು ಮಗು ಹುಟ್ಟಿನಿಂದಲೇ ಪ್ರಾರಂಭವಾಗುತ್ತದೆ. ಗಂಡು ಮಕ್ಕಳಿಗೆ ಅಕ್ಷರಭ್ಯಾಸವೆಂಬ ಸಂಸ್ಕಾರದೊಂದಿಗೆ ಶಿಕ್ಷಣದ ಸೌಲಭ್ಯ ಪ್ರಾರಂಭವಾಗುತ್ತದೆ. ಆದರೆ ಹೆಣ್ಣು ಮಕ್ಕಳಿಗೆ ವಿವಾಹವಾಗಲು ತಕ್ಕಷ್ಟು ವಿಧ್ಯಾಬ್ಯಾಸ, ಕಲೆ, ಗೃಹ ಕೃತ್ಯಗಳು ಸಾಕು ಎಂದು ಪೋಷಕರು ಭಾವಿಸುತ್ತಾರೆ. ಆದಾರಿಂದ ಶಾಲೆಗೆ ಸೇರಿಸುವಾಗ ಮುಂದುವರಿಸಲು ಹಾಗೂ ಹೆಚ್ಚಿನ ಶಿಕ್ಷಣ ಕೊಡಿಸಲು ಹಿಂದೆಗೆಯುತ್ತಾರೆ. ಲಿಂಗಭೇದದ ಕ್ಲಾರಣದಿಂದಾಗಿ ಶಾಲೆಗೆ ಹೋಗಬೇಕಾದ ಹುಡುಗಿ ತನ್ನ ಅಣ್ಣ ಅಥವಾ ತಮ್ಮನಿಗೆ ತನ್ನ ಅವಕಾಶವನ್ನು ಬಿಟ್ಟುಕೊಡುವ ಪರಿಸ್ಥಿತಿ ಇರುತ್ತದೆ. ಅಷ್ಟೇ ಅಲ್ಲ ಪ್ರಾರಂಭದಿಂದಲೇ ಹುಡುಗಿಗೆ ಮನೆ ಆಟದ ಮಾದರಿ ಪಾತ್ರವಾಗಿ ಮಾಡಿ ಅಡುಗೆ, ಮನೆಗೆಲಸ ಕಲಿಸುತ್ತಾರೆ. ಹುಡುಗರಿಗೆ ಹೊರಗೆ ನಡೆದಾಡುವ ಜವಾಬ್ಧಾಯನ್ನು ಗ್ರಹಿಸುವಂತೆ

ಬೆಳೆಸುತ್ತಾರೆ. ಕುಟುಂಬದ ಪ್ರಜೆ, ಸಂಪ್ರದಾಯಗಳಲ್ಲಿ ಹುಡುಗಿಯರನ್ನು ತೊಡಗಿಸಿ, ಆಕೆ ತನ್ನ ಪಾತ್ರ ಬೌದ್ಧಿಕ ಬೆಳವಣಿಗೆಯಲ್ಲಿ, ಮನೆ ಹಾಗೂ ಕುಟುಂಬದ ಸದಸ್ಯರನ್ನು ತೃಪ್ತಿಪಡಿಸುವಷ್ಟು ಮಾತ್ರ ಎಂದು ಭಾವಿಸುವಂತೆ ಮಾಡುತ್ತಾರೆ. ಹೀಗಾಗಿ, ಹುಡುಗಿಯರಿಗೆ ಶಾಲೆಯ ಆಕರ್ಷಣೆಯೇ ಇಲ್ಲವಾಗುತ್ತದೆ. ಅದರಂತೆಯೇ ಎರಡನೇಯ ಅಂಶ ನೋಡಿದಾಗ ಪ್ರಮುಖವಾಗಿ ಕಂಡುಬರುವುದು ಆರ್ಥಿಕ ಸಮಸ್ಯೆ.

**ಆರ್ಥಿಕ ಸಮಸ್ಯೆ:**

ಹಿಂದೆಂದಿಗಿಂತಲೂ ಈಗ ಮಹಿಳೆಯರಿಗೆ ಶಿಕ್ಷಣದ ಅವಕಾಶಗಳು ಹೆಚ್ಚಾಗಿವೆ. ಆದರೆ ಕುಟುಂಬದ ಆರ್ಥಿಕ ಪರಿಸ್ಥಿತಿ, ಸಂಪನ್ಮೂಲಗಳ ಬಳಕೆ ಪ್ರಶ್ನೆ ಬಂದಾಗ ಪುರುಷ ನಿರ್ಮಿತ ವ್ಯವಸ್ಥೆ ಮಹಿಳೆಯರನ್ನು ಕಡೆಗಣಿಸುತ್ತದೆ. ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸಲು ಇಚ್ಚಿಸುವುದಿಲ್ಲ. ಕುಟುಂಬ ಮಗನನ್ನು ಮನೆಯ ಸ್ವತು. ಆಸ್ತಿ ಪಾಸ್ತಿಗಳನ್ನೇ ಒತ್ತೇ ಇಟ್ಟು ಓದಬಯಸುತ್ತಾರೆ. ಆದರೆ ಹುಡುಗನಿಗಿಂತಲೂ ಬುದ್ಧಿವಂತ ಮಗಳನ್ನು ಓದಿಸಲು ಮುಂದಾಗುವುದಿಲ್ಲ. ಕಾರಣ ಎಷ್ಟೇ ಖರ್ಚು ಮಾಡಿ ಕಲಿಸಿದರೂ ಸಹ ಅದು ಒಂದು ದಿನ ಪರರ ಮನೆಗೆ ಪಾಲಾಗುತ್ತದೆ ಎಂಬ ಪೂರ್ವಗ್ರಹದಿಂದ ಅವಳ ಶಿಕ್ಷಣಕ್ಕೆ ಅಡ್ಡಿಪಡಿಸುತ್ತಾರೆ. ಜೊತೆಗೆ ಎಷ್ಟೇ ಅವಳು ಓದಿ ಉದ್ಯೋಗಕ್ಕೆ ಸೇರಿದರೂ ಅದು ಮುಂದೇ ಗಂಡನ ಮನೆಗೆ ಸೇರುತ್ತದೆ ಎಂಬ ಕೀಳರಿಮೆಯ ವಿಚಾರಗಳು ಮಹಿಳಾ ಶಿಕ್ಷಣಕ್ಕೆ ದೊಡ್ಡ ಕೊಡಲಿಪೆಟ್ಟೊ ನೀಡಿವೆ. ಜೊತೆಗೆ ಶ್ರಮ ವಿಭಜನೆಯ ಮೂಲಕ ಸ್ತ್ರೀಯರ ಆರ್ಥಿಕತೆಯನ್ನು ನಿರ್ಭಂಧಿಸಲಾಗಿದೆ. ಮೂರನೇ ಸಮಸ್ಯೆಯಾಗಿ ನಮ್ಮ ಮುಂದೇ ಬರುವುದು ಸಾಮಾಜಿಕ ಸಮಸ್ಯೆ.

**ಸಾಮಾಜಿಕ ಸಮಸ್ಯೆ :**

ನಮ್ಮ ಸಾಮಾಜಿಕ ವ್ಯವಸ್ಥೆಯು ಪಿತೃ ಪ್ರಧಾನ ಮೂಲವಾಗಿದೆ. ವಿವಾಹ ಸಂಸ್ಥೆಗಳಲ್ಲಿ ಸ್ತ್ರೀಯರನ್ನು ಕಟ್ಟಿಹಾಕುವ, ಕಟ್ಟುನಿಟ್ಟಾದ ನಿಯಮಗಳನ್ನು ರೂಪಿಸಿದೆ. ಸಂಗಾತಿಯಾಗಿದ್ದ ಸ್ತ್ರೀ ವ್ಯಕ್ತಿಯನ್ನು ಗುಲಾಮಗಳನ್ನಾಗಿ ಮಾಡಿಕೊಂಡು ವಿಜೃಂಬಿಸಿದ ಪುರುಷನು ತಾನೇ ಶಕ್ತಿವಂತನೆಂದು ಸಾರಲು ಸ್ತ್ರೀಯರನ್ನು ನಿಯಂತ್ರಿಸಿದ್ದಾರೆ. ಗೊಂಬೆಗಳನ್ನು ತೊಟ್ಟು ಆಟವಾಡಿಸಿ, ಗೃಹಿಣಿಯರು, ಗೃಹಬಂದಿತ್ವದ ಹಾಗೂ ಗೃಹಿಣಿತ್ವದ ಮೂಲಕ ಸ್ತ್ರೀಯರ ಅಸ್ತಿತ್ವವನ್ನು ಹತ್ತಿಕ್ಕುವ ತಂತ್ರಗಳು

ಲೆಕ್ಕವಿಲ್ಲದಷ್ಟು ತಾಯ್ತನವನ್ನು ವೈಭವೀಕರಿಸಿ ಅವಳ ಆಲೋಚನಾಲೋಕವನ್ನು ಸ್ಥಗಿತಗೊಳಿಸಿ ತನ್ಮೂಲಕ ಚಲನಶೀಲತೆಗೆ ತಡೆಯೊಡ್ಡಲಾಯಿತು. ಅನಂತರ ವಿವಾಹವೆಂಬ ಉರುಳು ನಿಯಮಗಳಿಂದ ಸುತ್ತಿ ಸ್ತ್ರೀಯರ ಲೈಂಗಿಕತೆಯನ್ನು ನಿರ್ಬಂಧಿಸಲಾಯಿತು. ಎಲ್ಲ ಬಗೆಯ ಮುಕ್ತ ಲೈಂಗಿಕತೆಯಿಂದ ಪುರುಷ ತನ್ನ ಪೌರುಷವನ್ನು ಸಾರುವ ಹೊತ್ತಿನಲ್ಲಿ, ತನ್ನನ್ನು ಗೇಲಿ ಮಾಡಬಹುದು ಅಥವಾ ತನ್ನ ಕೈಯಿಂದ ನುಣುಕೊಂಡು ತಪ್ಪಿ ಹೆರರ ಪಾಲಾಗಬಹುದೆಂಬ ಭೀತಿಯಿಂದ ಹೆಣ್ಣನ್ನು ಸಂಕೋಲೆಯಲ್ಲಿ ಬಂಧಿಸಿದ. ವಿವಾಹ ನಿಯಮಗಳಡಿ ಆರ್ಥಿಕ ದಿಗ್ಬಂಧನ, ಲೈಂಗಿಕತೆಯ ದಿಗ್ಬಂಧನ ಹಾಗೂ ಗೃಹ ದಿಗ್ಬಂಧನಗಳಲ್ಲಿ ಸೆರೆಹಿಡಿದು ಅವಳ ಸ್ವಾತಂತ್ರ್ಯವನ್ನು ತಿಕ್ಕುಕೊಂಡಿದ್ದಾನೆ. ಹೀಗಾಗಿ ಯಾವುದೇ ನಿರ್ಧಾರಗಳನ್ನು ಅವಳು ಸಮಸ್ಯೆಯಾಗಿ ನಮ್ಮ ಮುಂದೇ ಪ್ರಮುಖವಾಗಿ ಕಾಣಿಸಿಕೊಳ್ಳೂವುದು.

**ರಾಜಕೀಯ ಸಮಸ್ಯೆ:**

ಇಲ್ಲಿ ಯಜಮಾನತ್ವ ಎಂಬುದು ಪ್ರಮುಖವಾಗಿ ಕಂಡುಬರುವುದು ಅಂದರೆ ಅಧಿಕಾರವಿರುವವರು ಅಧಿಕಾರವಿಲ್ಲದವರ ಮೇಲೆ ದಬ್ಬಾಳಿಕೆ ನಡೆಸುವುದು, ಅದಕ್ಕೆ ತಂತ್ರಗಳನ್ನು ರೋಡಿಸುವುದೇ ರಾಜಕೀಯ, ಒಂದು ಗುಂಪು ಮತ್ತೊಂದು ಗುಂಪು(ಪಕ್ಷ)ದ ಮೇಲೆ, ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ಮೇಲೆ ನಿಯಂತ್ರಣ ಹೊಂದಿರುವುದನ್ನು ರಾಜಕಾರಣ ವ್ಯಾಖ್ಯಾನ ಮಾಡುತ್ತದೆ. ಇನ್ನು ಸ್ತ್ರೀಯರ ಮಟ್ಟಿಗೆ ಹೇಳುವುದಾದರೆ ಲೈಂಗಿಕ. ಲೈಂಗಿಕ ರಾಜಕಾರಣವೆಂದರೆ, ಲೈಂಗಿಕ ವ್ಯತ್ಯಾಸದ ಕಾರಣದಿಂದಲೇ ಇಬ್ಬರೂ ವ್ಯಕ್ತಿಗಳು ಪರಸ್ಪರ ಅಧಿಕಾರ ಚಲಾಯಿಸುವುದು ಎನ್ನಬಹುದು. ಇದರಿಂದ ಅಧಿಕಾರ ನಡೆಸುವ ಪುರುಷ ವರ್ಗ ಅಧೀನರಾಗದ ಸ್ತ್ರೀ ವರ್ಗವನ್ನು ಮಾನಸಿಕ, ದೈಹಿಕ ಒತಡಕ್ಕೆ ಗುರಿ ಮಾಡುತ್ತದೆ.

ಕೇಟ್ ಮಿಲೆಟ್ ಎಂಬ ಸ್ತ್ರೀವಾದಿ ಲೇಖಕಿ ಲೈಂಗಿಕ ಕಾರಣವು ಲೈಂಗಿಕ ಯಜಮಾನಿಕೆಯ ಅಂಶವನ್ನು ಒಳಗೊಂಡಿದ್ದು ಅದು ಮೂಲಭೂತವಾದ ಅಧಿಕಾರದ ಪರಿಕಲ್ಪನೆ ಎಂದಿದ್ದಾಳೆ. ಪಿತೃಸ್ವರೋಪ ಸಂಸ್ಕೃತಿಯಲ್ಲಿ ಪುರುಷ ಮೇಲ್ದರ್ಜೆಯವನೆಂದು ಸ್ತ್ರೀಯನ್ನು ಕೆಳದರ್ಜೆಯವಳೆಂದೂ ಅಂಗೀಕರಿಸಲಾಗಿದೆ. ಇದನ್ನು ಶಿಕ್ಷಣಾವಕಾಶದಲ್ಲಿ ಕೂಡ ಗುರುತಿಸಬಹುದು.

ಪುರುಷರಿಗೆ ಉನ್ನತ ಶಿಕ್ಷಣಾವಕಾಶ ಹಾಗೂ ಬಯಸಿದ ಕೆಲವೊಂದು, ಉನ್ನತ ಜ್ಞಾನ ಶಿಸ್ತುಗಳನ್ನು ಮಹಿಳೆಯರಿಗೆ ಮುಚ್ಚಿಹಾಕಿದ್ದಿತು. ಐ.ಎ.ಎಸ್, ಐ.ಪಿ.ಎಸ್. ಹಾಗೂ ಐ. ಎನ್.ಎ ಗಳಂತಹ ಪರೀಕ್ಷೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರಿಗೆ ಆಯ್ಕೆ ನೀಡುವುದಿಲ್ಲ. ಆದರೆ ಈಗೀಗ ಬಾಹ್ಯಾಕಾಶ ಸಹಿತ ಎಲ್ಲಾ ಜ್ಞಾನ ಶಾಖೆಗಳಲ್ಲಿ, ದೈಹಿಕ ಬೌದ್ಧಿಕ ಕಸರತ್ತುಗಳಲ್ಲಿ ಮಹಿಳೆಯರುಮುಂದಾಗುತ್ತಿದ್ದರೆ. ಇದನ್ನು ತಡೆಗಟ್ಟಲು ಮತನಿಧಿಗಳನ್ನು ತಮ್ಮ ಬುದ್ಧಿಗೆ ಹಾಕಿಕೊಳ್ಳಲು ಮಹಿಳೆಯರನ್ನು ಅಜ್ಞಾನದಲ್ಲಿ ಇರಿಸಲು ಪ್ರಯತ್ನಿಸಲಾಗುತ್ತಿದೆ. ಸಂವಿಧಾನದ ಪ್ರಕಾರ ಸಮಾನ ಹಕ್ಕುಗಳನ್ನು ಪಡೆದಿರುವ ಮಹಿಳೆಯರಿಗೆ ಅಧಿಕಾರ ನೀಡಿ ಆಡಳಿತ ಯಂತ್ರ ನಡೆಸುವ ಸರ್ಕಾರದಲ್ಲಿ ಪ್ರಾತಿನಿಧ್ಯ ನೀಡಲು, ಪುರುಷರ ಗುಂಪು ಹೆಂದೆಗೆಯುತ್ತದೆ. ಹೇಗಾದರೂ ಮಾಡಿ, ಅಧಿಕಾರ ನೀಡಿದರೂ ಸೂತ್ರ ತಮ್ಮ ಕೈಯಲ್ಲಿರುವಂತೆ ನೋಡಿಕೊಳ್ಳಲಾಗುತ್ತದೆ. ಹೀಗಾಗಿ ಶಿಕ್ಷಣಾವಕಾಶವನ್ನು ತಪ್ಪಿಸಲು ಜಾತಿ ಕೋಮುಗಳ ಘರ್ಷಣೆ ಮೂಲಕ ಎಲ್ಲ ಪ್ರಸಂಗಗಳಿಗೂ ರಾಜಕೀಯ ಬಣ್ಣ ಹಚ್ಚಿ ಮಹಿಳೆಯರುಹಿಂದುಳಿಯುವಂತೆ ಮಾಡಲಾಗುತ್ತದೆ. ಏಕರೂಪ ನಾಗರೀಕ ಸಂಹಿತೆಯನ್ನು ಜಾರಿಯಲ್ಲಿ ತರಲು ಒಮ್ಮತ ಮೂಢದಂತೆ ರಾಜಕೀಯ ಪಕ್ಷಗಳು, ತಂತ್ರ, ಪ್ರತಿತಂತ್ರ ಜಾಲಗಳನ್ನು ರೂಪಿಸುತ್ತವೆ. ಇದು ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯ ಅವಕಾಶ ನೀಡಲು ಮನಸ್ಸು ಮಾಡದ ಪುರುಷ ಪ್ರಾಧಾನ್ಯ ವ್ಯವಸ್ಥೆಯ ಕಳಂಕಿತ ವಿಧಾನವಾಗಿದೆ.

ಈ ಎಲ್ಲಾ ದೃಷ್ಟಿಯಿಂದಲೂ ಪ್ರಮುಖವಾದಂತಹ ಸಮಸ್ಯೆಗಳನ್ನು ಮಹಿಳೆ ಶಿಕ್ಷಣ ಪಡೆದುಕೊಳ್ಳುವಲ್ಲಿ ಇಂದು ಎದುರಿಸುತ್ತಿದ್ದಾಳೆ. ಅವಳಲ್ಲಿ ಎಷ್ಟೇ ಓದುವ ಹವ್ಯಾಸ, ಆಸಕ್ತಿ, ಜಾಣ್ಮೆ, ಬುದ್ಧಿವಂತಿಕೆಗಳು ಇದ್ದರೂ ಸಹ ಪುರುಷ ಪ್ರಧಾನತೆಯ ನಿಯಮಗಳ ಮುಂದೆ ಕೊಚ್ಚಿಹೋಗಿ ಅವಳನ್ನು ಅಬಲೆ ಎಂದೂ ಗಾಢಾಂಧಕಾರದ ಕಡೆಗೆ ತಳ್ಳಲ್ಪಡುತ್ತಿದ್ದಾಳೆ.

ಮಹಿಳೆಯ ಶೈಕ್ಷಣಿಕ ಹಿನ್ನೆಲೆಯಲ್ಲಿ ಅವಳನ್ನು ಪುರುಷನಂತೆಯೇ ಎಲ್ಲಾ ರಂಗಗಳಲ್ಲಿ ಮುಂದೆ ತರುವ ಮಹಾದಸೆಯಿಂದಾಗಿ ನಮ್ಮ ಸರ್ಕಾರಗಳು ಹಲವಾರು ಕಾರ್ಯ ನೀತಿಗಳನ್ನು ಹಾಗೂ ಯೋಜನೆಗಳನ್ನು ರೂಪಿಸಿವೆ, ಅವು ಯಾವುವು ಎಂಬುದರ ಕುರಿತು ಈ ರೀತಿಯಾಗಿ ನೋಡಬಹುದು.

**ಶಿಕ್ಷಣ ವ್ಯವಸ್ಥೆಯ ಕಾರ್ಯನೀತಿಗಳು ಮತ್ತು ಯೋಜನೆಗಳು**

ಭಾರತದ ಸಂವಿಧಾನದ ಅನುಚ್ಛೇದ ೪೫ರಲ್ಲಿ ಮಕ್ಕಳಿಗೆ ಉಚಿತ ಕಡ್ಡಾಯ ಶಿಕ್ಷಣ ಅವಕಾಶವನ್ನು ಒದಗಿಸಲಾಗಿದೆ. ಎಂದರೆ ೧೪ ವರ್ಷ ವಯಸ್ಸು ಪೂರ್ಣವಾಗುವವರೆಗೆ ಎಲ್ಲ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಸಂವಿಧಾನದ ಪ್ರಾರಂಭದ ಹತ್ತು ವರ್ಷಗಳ ಒಳಗಾಗಿ ಒದಗಿಸಲು ರಾಜ್ಯವು ಪ್ರಯತ್ನಿಸಬೇಕು.[25] ಎದ್ದು ತಿಳಿಸಲಾಗಿದೆ.

ಅನುಚ್ಛೇದ (೧೪) : ರಾಜಕೀಯ, ಆರ್ಥಿಕ, ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಹಕ್ಕು ಮತ್ತು ಅವಕಾಶಗಳನ್ನು ಕಲ್ಪಿಸಿಕೊಡುತ್ತದೆ.

ಅನುಚ್ಛೇದ (೧೫) : (೩) : ಮಹಿಲೇಯರ ಪರವಾಗಿ ತಾರತಮ್ಯ ತೋರಲು ಸರ್ಕಾರಕ್ಕೆ ವಿಶೇಷ ಅನುಕೂಲ ಮಾಡಿಕುಡುತ್ತದೆ.

ಅನುಚ್ಛೇದ (೧೬) : ಸಾರ್ವತ್ರಿಕ ನೇಮಕಾತಿಗಳಲ್ಲಿ ಎಲ್ಲಾ ಪ್ರಜೆಗಳಿಗೂ ಸಮಾನ ಅವಕಾಶ ನೀಡುತ್ತದೆ.

ಅನುಚ್ಛೇದ (೩೯)(ಎ) : ಎಲ್ಲಾ ಪ್ರಜೆಗಳ, ಪುರುಷ ಮತ್ತು ಮಹಿಳೆಯರಿಗೆ ಸಮಾನವಾಗಿ ಜೀವನೋಪಾಯ ಜೀವನಾಧಾರವನ್ನು ಹೊಂದುವ ಹಕ್ಕನ್ನು ರಕ್ಷಿಸುವ ಸಲುವಾಗಿ ಸರ್ಕಾರ ತನ್ನೆಲ್ಲಾ ಕಾರ್ಯ ನೀತಿಯನ್ನು ನಿರ್ದೇಶಿಸಬೇಕೆಂದು ಹೇಳುತ್ತದೆ.

ಅನುಚ್ಛೇದ (೩೯)(ಬಿ) : ಸಮಾನ ಕೆಲಸಕ್ಕೆ ಸಮಾನ ವೇತನ ನೀಡಬೇಕೆಂದು ಹೇಳುತ್ತದೆ.

ಅನುಚ್ಛೇದ (೧೫)(ಎ)(೯) : ಈ ಅನುಚ್ಛೇದದ ಮೂಲಕ ಸಂವಿಧಾನವು ಮಹಿಳೆಯರ ಘನತೆಗೆ ಕುಂದುತರುವಂತಹ ಎಲ್ಲಾ ಆಚರಣೆಗಳನ್ನು ತ್ಯಜಿಸುವುದು ಪ್ರತಿಯೊಬ್ಬ ನಾಗರೀಕನ ಮೂಲಭೂತ ಕರ್ತವ್ಯವೆಂದು ಹೇಳುತ್ತದೆ.

ಅನುಚ್ಛೇದ ೪೨: ಕೆಲಸದ ಸ್ಥಳದಲ್ಲಿ ಮಹಿಳೆಯರಿಗೆ ನ್ಯಾಯಯುತವಾದ ಹಾಗೂ ಕರುಣೆಯಿಂದ ಕೂಡಿದ ಪರಿಸರವನ್ನು ಒದಗಿಸಬೇಕು ಮತ್ತು ಹೆರಿಗೆ ಭತ್ಯೆಯನ್ನು ನೀಡಬೇಕೆಂದು ಸರ್ಕಾರಕ್ಕೆ ನಿರ್ದೇಶನ ನೀಡುತ್ತದೆ.

ಈ ಮೇಲಿನ ಎಲ್ಲವೂ ಭಾರತದಲ್ಲಿ ಮಹಿಳಾಭಿವೃದ್ಧಿಗೆಂದು ಕೈಗೊಂಡ ವಿವಿಧ ಕಾರ್ಯನೀತಿಗಳಲ್ಲಿ ಸಂವಿಧಾನತ್ಮಕವಾಗಿರುವಂತಹ ಹಕ್ಕುಗಳಾಗಿವೆ. ಅದೇ ರೀತಿಯಾಗಿ ಮಹಿಳೆಯರಿಗೆ ಶಾಸನಾತ್ಮಕ ಸವಲತ್ತುಗಳನ್ನು ಒದಗಿಸಲಾಗಿದೆ. ಅಂತಹವುಗಳಲ್ಲಿ ಪ್ರಮುಖ ವಾಗಿ ಯಾವುವು ಎಂದರೆ, ಸಂವಿಧಾನ ನೀಡಿರುವ ಹಕ್ಕುಗಳನ್ನು ರಕ್ಷಿಸಲು ಹಾಗೂ ಕಾರ್ಯರೂಪಕ್ಕೆ ತರಲು ಸರ್ಕಾರ ಕೆಲವು ಶಾಸನಗಳನ್ನು ಜಾರಿಗೆ ತಂದಿದೆ. ಮಹಿಳೆಯರನ್ನು ಸಾಮಾಜಿಕ ಪಿಡುಗುಗಳಿಂದ ಹಾಗೂ ಅವರಲ್ಲಿ ತೋರುವ ತಾರತಮ್ಯ ಹಾಗೂ ಅವರ ವಿರುದ್ಧ ನಡೆಯುವ ಅಪರಾಧಗಳನ್ನು ನಿವಾರಿಸಲು ಈ ಕಾಯಿದೆಗಳನ್ನು ಜಾರಿಗೊಳಿಸಲಾಯಿತು.



**ಅವುಗಳಲ್ಲಿ**

- ಮಹಿಳಾ ನಿರ್ದಿಷ್ಟ ಶಾಸನಗಳು
- ಮಹಿಳೆಯರಿಗೆ ಸಂಬಂಧಿಸಿದ ಶಾಸನಗಳು

ಮಹಿಳಾ ನಿರ್ದಿಷ್ಟ ಶಾಸನಗಳು ಮಹಿಳೆಯರಿಗೋಸ್ಕರವೇ ಜಾರಿಗೆ ತಂದ ಕಾಯಿದೆಗಳು, ಅವುಗಳಲ್ಲಿ ಪ್ರಮುಖವಾದವುಗಳು ಎಂದರೆ,

ಫ್ಯಾಕ್ಟರಿ ಕಾಯಿದೆ ೧೯೪೮ (ತಿದ್ದುಪಡಿ ೧೯೭೬) ಮೂವತ್ತು ಮಹಿಳೆಯರನ್ನು ನೇಮಿಸಿಕೊಂಡ ಕೆಲಸದ ಸ್ಥಳದಲ್ಲಿ ಶಿಶು ಕೇಂದ್ರವನ್ನು ಸ್ಥಾಪಿಸಬೇಕೆಂದು ಹೇಳುತ್ತದೆ.

- ಹಿಂದೂ ವಿವಾಹ ಕಾಯಿದೆ ೧೯೫೫ (ತಿದ್ದುಪಡಿ ೧೯೭೬). ಇದು ಬಾಲ್ಯ ವಿವಾಹಕ್ಕೊಳಪಟ್ಟ ಹುಡುಗಿಗೆ ಪ್ರೌಡಾವಸ್ಥೆಗೆ ಬರುವ ಮೊದಲು ವಿವಾಹವನ್ನು ನಿರಾಕರಿಸುವ ಹಕ್ಕನ್ನು ನೀಡುತ್ತದೆ.
- ಅನೈತಿಕ ವ್ಯವಹಾರ ನಿಗ್ರಹಣಾ ಕಾಯಿದೆ ೧೯೫೬ (ತಿದ್ದುಪಡಿ ೧೯೮೬). ಈ ಕಾಯಿದೆ ಪುರುಷ ಅಥವಾ ಮಹಿಳೆಯನ್ನು ಲೈಂಗಿಕ ಶೋಷಣೆಗೆ ಗುರಿ ಮಾಡಿದರೆ ಅದನ್ನು ಜಾಮೀನುರಹಿತ ಅಪರಾಧವೆಂದು ಹೇಳುತ್ತದೆ.
- ವರದಕ್ಷಿಣೆ ನಿಷೇಧ ಕಾಯಿದೆ ೧೯೬೧ (ತಿದ್ದುಪಡಿ ೧೯೮೬) ವರದಕ್ಷಿಣೆ ಹೆಸರಲ್ಲಿ ಮಹಿಳೆರನ್ನು ದೌರ್ಜನ್ಯಕ್ಕೊಳಪಡಿಸುವುದನ್ನು ಜಾಮೀನುರಹಿತ ಅಪರಾಧವೆಂದು ಪರಿಗಣಿಸುತ್ತದೆ. ೧೯೮೬ರ ತಿದ್ದುಪಡಿಯು ವಿವಾಹವಾದ ೭ ವರ್ಷದೊಳಗೆ ಮಹಿಳೆಯು ಆತ್ಮಹತ್ಯೆ ಮಾಡಿಕೊಂಡರೆ ಆಕೆಯನ್ನು ಹಿಂಸೆಗೊಳಪಡಿಸಲಾಗಿದೆಯೆಂದು ಪರಿಗಣಿಸಿ ಅವಳ ಗಂಡ ಮತ್ತು ಅತ್ತೆ ಮಾವನನ್ನು ಶಿಕ್ಷೆಗೆ ಗುರಿಮಾಡಬಹುದೆಂದು ಹೇಳುತ್ತದೆ. ಜೊತೆಗೆ ಇಂಡಿಯನ್ ಪೆನಾಲ್ ಕೋಡ್‌ನ್ನಲ್ಲಿ ವರದಕ್ಷಿಣೆ ಸಾವು ಎಂಬ ಹೊಸ ಅಪರಾಧವನ್ನು ಸೇರಿಸಿಕೊಳ್ಳಲಾಯಿತು.

ದಿ ಮೆಡಿಕಲ್ ಟರ್ಮಿನೇಷನ್ ಆಫ್ ಪ್ರಗ್ನನ್ಸಿ ಆಕ್ಟ್ ೧೯೭೧ರ ಪ್ರಕಾರ ಮಾನವೀಯತೆ ಅಥವಾ ವೈದ್ಯಕೀಯ ಕಾರಣಗಳಿಗಾಗಿ ಒಬ್ಬ ವೃತ್ತಿಪರ ವೈದ್ಯರ ಬಳಿ ಗರ್ಭಪಾತ ಮಾಡಿಸಿಕೊಳ್ಳುವುದನ್ನು ಕಾನೂನುಬದ್ಧಗೊಳುಸುತ್ತದೆ.

- ಸಮಾನ ವೇತನ ಕಾಯಿದೆ ೧೯೭೬ –ಸ್ತ್ರಿ–ಪುರುಷರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ನೀಡಬೇಕೆಂದು ಹೇಳುತ್ತದೆ.
- ಹೆರಿಗೆ ಭತ್ಯೆ ಕಾಯಿದೆ ೧೯೬೧ –ಸಂಘಟಿತ ಮತ್ತು ಅಸಂಘಟಿತ ವಲಯಗಳಲ್ಲಿ ನಿರ್ದಿಷ್ಟ ಕನಿಷ್ಟ ದಿನಗಳ ಕಾಲ ಕೆಲಸ ಮಾಡಿದ್ದರೆ ಗರ್ಭಿಣಿ ಮಹಿಳೆಗೆ ೯೦ ದಿನಗಲ ವೇತನ ಸಹಿತ ರಜೆ ನೀಡಬೇಕೆಂದು ಹೇಳುತ್ತದೆ.

- ಅಪರಾಧ ಕಾಯಿದೆ ೧೯೮೩ರ ತಿದ್ದುಪಡಿಯು ಅತ್ಯಾಚಾರದ ಅಪರಾಧಿಗೆ ೭ ವರ್ಷ ಹಾಗೂ ಸೆರಮನೆಯಲ್ಲಿ ನಡೆದ ಅತ್ಯಾಚಾರಕ್ಕೆ ೧೦ ವರ್ಷಗಳ ಸಜೆಯನ್ನು ವಿಧಿಸುತ್ತದೆ.

ಅಲ್ಲದೆ ಅತ್ಯಾಚಾರದ ಆರೋಪವನ್ನು ಸಾಬೀತು ಪಡಿಸುವ ಹೊಣೆಯನ್ನು ಅತ್ಯಾಚಾರಕ್ಕೊಳಗಾದ ಮಹಿಳೆಯಿಂದ ಆರೋಪಿಗೆ ವರ್ಗಾಯಿಸಿತು. ಮಹಿಳೆಯರ ಘನತೆಯನ್ನು ಕಾಪಾಡಿ ಅವರನ್ನು ಹಿಂಸೆಯಿಂದ ರಕ್ಷಿಸಲು ಎರಡು ಕಾಯಿದೆಗಳನ್ನು ೧೯೮೦ರ ದಶಕದಲ್ಲಿ ಜಾರಿಗೊಳಿಸಲಾಯಿತು.

- ಮಹಿಳೆಯರ ಅಶ್ಲೀಲ ಪ್ರದರ್ಶನ ನಿಷೇಧ ಕಾಯಿದೆ ೧೯೮೬ ಮಹಿಳೆಯರನ್ನು ಅಶ್ಲೀಲವಾಗಿ ಪ್ರದರ್ಶಿಸುವುದನ್ನು ನಿಷೇಧಿಸುತ್ತದೆ.

  ಇವುಗಳಲ್ಲದೇ ಸ್ತ್ರೀಪುರುಷರಿಬ್ಬರಿಗೂ ಅನ್ವಯವಾಗುವ ಕಾಯಿದೆಗಳನ್ನು ಮಹಿಳೆಯರಿಗಾಗಿ ಸಂಬಂಧಿಸಿದ ಕಾಯಿದೆಗಳೆಂದು ಗುರುತಿಸಬಹುದು.

- ಹಿಂದೂ ಉತ್ತರಾಧಿಕರತ್ವ ಕಾಯಿದೆ ೧೯೫೬ (ತಿದ್ದುಪಡಿ ೧೯೯೪ ಕರ್ನಾಟಕದ ವ್ಯಾಪ್ತಿಗೆ). ತಂದೆಯ ಸ್ವಯಾರ್ಜಿತ ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೆ ಗಂಡು ಮಕ್ಕಳಿಗೆ ಸಮನಾಗಿ ಭಾಗ ಪಡೆಯುವ ಹಕ್ಕನ್ನು ನೀಡುತ್ತದೆ.

- ಇದರ ತಿದ್ದುಪಡಿಯನ್ನು ಕರ್ನಾಟಕದಲ್ಲಿ ೧೯೯೪ರಲ್ಲಿ ಜಾರಿಗೆ ತಂದಿರುವಂತೆ ೧೯೯೪ರ ನಂತರ ವಿವಾಹವಾದ ಹೆಣ್ಣುಮಕ್ಕಳು ಪಿತ್ರಾರ್ಜಿತ ಆಸ್ತಿಯಲ್ಲೂ ಸಮಾನಪಾಲು ಪಡೆಯುವ ಹಕ್ಕನ್ನು ಹೊಂದುತ್ತಾರೆ.

- ಹಿಂದೂ ದತ್ತಕ ಹಾಗೂ ಜೀವನಾಂಶ ಕಾಯಿದೆ (೧೯೫೬)

- ಬಾಲ್ಯವಿವಾಹ ನಿರ್ಬಂಧ ಕಾಯಿದೆ ೧೯೭೬ ಇದು ವಿವಾಹದ ವಯಸ್ಸನ್ನು ಹುಡುಗಿಗೆ ೧೫ರಿಂದ ೧೮ಕ್ಕೆ ಹಾಗೂ ಹುಡುಗರಿಗೆ ೧೮ರಿಂದ ೨೧ಕ್ಕೆ ಏರುಸುತ್ತಾರೆ.

- ಕುಟುಂಬ ನ್ಯಾಯಾಲಯ ೧೯೮೪ ಕೌಟುಂಬಿಕ ಸಮಸ್ಯೆಗಳನ್ನು ಬಗೆಹರಿಸಲು ಕುಟುಂಬ ನ್ಯಾಯಾಲಯಗಳು ಈ ಕಾಯಿದೆಯಿಂದ ಸ್ಥಾಪನೆಗೊಂಡವು.

ಇವುಗಳಲ್ಲದೇ, ದಿ ನ್ಯಾಷನಲ್ ಕಮಿಷನ್ ಆನ್ ದಿ ಸ್ಟೇಟಸ್ ಆಫ್ ವುಮೆನ್ ೧೯೭೧ – ಸರ್ಕಾರವು ಭಾರತದ ಮಹಿಳೆಯರ ಸ್ಥಾನ ಕುರಿತು ಕ್ಷೇತ್ರಾಧ್ಯಯನ ಮಾಡಿ ವರದಿ ಸಲ್ಲಿಸಲು ಈ ಸಮಿತಿಯನ್ನು ಸ್ಥಾಪಿಸಿತು. ಮತ್ತೊಂದು ಕಾರ್ಯನೀತಿಯೆಂದರೆ, ದಿ ನಾಷನಲ್ ಪರ್ಸ್‌ಪೆಕ್ಟಿವ್ ಸಂಹಿತೆಯಾಗಿದ್ದು ಮಹಿಳಾಭಿವೃದ್ಧಿಗೆ ಸಮಗ್ರ ಪರಿಕ್ರಮವನ್ನು ನೀಡಿತು.

ಅಲ್ಲದೇ – ದಿ ನಾಷನಲ್ ಕಮಿಷನ್ ಆನ್ ಸೆಲ್ಫ್ ಎಂಪ್ಲಯೆಡ್ ವುಮೆನ್ ಅಂಡ್ ವುಮೆನ್ ಇನ್ ಇನ್‌ಫಾರ್ಮಲ್ ಸೆಕ್ಟರ್ ೧೯೮೮ ಹಾಗೆಯೇ, ದಿ ನಾಷನಲ್ ಎಕ್ಸ್‌ಪರ್ಟ್ ಕಮಿಟಿ ಆನ್ ವುಮೆನ್ ಪ್ರಿಸನರ್ಸ್ ೧೯೮೬ ಇದು ಮಹಿಳಾ ಖೈದಿಗಳ ಪರಿಸ್ಥಿತಿಗಳನ್ನು ಅಧ್ಯಯನ ಮಾಡಿ ಕೆಲವು ಶಿಫಾರಸ್ಸುಗಳನ್ನು ಮಾಡಿತು. ನಂತರ ಬಂದಂತಹ ದಿ ನಾಷನಲ್ ಪ್ಲಾನ್ ಆಫ್ ಆಕ್ಶನ್ ಆಫ್ ದಿ ಗರ್ಲ್ ಚೈಲ್ಡ್ ೧೯೯೧–೨೦೦೦–೧೯೯೦ರಲ್ಲಿ ಅಂತರಾಷ್ಟ್ರೀಯ ಹೆಣ್ಣುಮಗುವಿನ ವರ್ಷವನ್ನು ಆಚರಿಸಿದ ನಂತರ ಸರ್ಕಾರ ಮುಂದಿನ ಒಂದು ದಶಕಕ್ಕೆ ಬಹುಕ್ಷೇತ್ರಿಯ ಸಮಗ್ರ ಕ್ರಿಯಾ ಯೋಜನೆಯನ್ನು ಹಮ್ಮಿಕೊಂಡಿತು. ಇದರಲ್ಲಿ ಹೆಣ್ಣುಮಕ್ಕಳ ಉಳಿವು, ರಕ್ಷಣೆ ಹಾಗೂ ಅಭಿವೃದ್ಧಿಯನ್ನು ಸಾಧಿಸುವ ಹೆಣ್ಣುಮಕ್ಕಳು ಮತ್ತು ಯುವತಿಯರಲ್ಲಿ ಜಂಡರ್ ಸೂಕ್ಷ್ಮತೆಯನ್ನು ಬೆಳೆಸುವ ಯೋಜನೆಗಳನ್ನು ಕೈಗೊಳ್ಳಲಾಯಿತು.

ತದನಂತರದಲ್ಲಿ ಬಂದ ಕಾರ್ಯನೀತಿಯಾದ, ದಿ ನಾಷನಲ್ ಪಾಲಿಸಿ ಆನ್ ಎಂಪವರ್‌ಮೆಂಟ್ ಆಫ್ ವುಮೆನ್ ೨೦೦೧ ಇಸವಿಯನ್ನು ಮಹಿಳಾ ಸಬಲೀಕರಣ ಅಥವಾ ಸಶಕ್ತೀಕರಣ ವರ್ಷವನ್ನಾಗಿ ಆಚರಿಸಿದ ಸರ್ಕಾರ ಮಹಿಳೆಯ ಸಶಕ್ತೀಕರಣಕ್ಕೆ ಸಂಬಂಧಿಸಿದಂತೆ ಒಂದು ಸಮಗ್ರ ಕಾರ್ಯಯೋಜನೆಯನ್ನು ಜಾರಿಗೆ ತರಲು ಈ ಕಾರ್ಯನೀತಿಯನ್ನು ಅಳವಡಿಸಿಕೊಂಡಿತು.

ಇವುಗಳ ಜೊತೆಗೆ,

- ರಾಷ್ಟ್ರೀಯ ಮಕ್ಕಳ ಕಾರ್ಯನೀತಿ, ೧೯೭೪
- ರಾಷ್ಟ್ರೀಯ ಆರೋಗ್ಯ ಕಾರ್ಯನೀತಿ, ೧೯೮೩
- ರಾಷ್ಟ್ರೀಯ ಶಿಕ್ಷಣ ನೀತಿ, ೧೯೮೬
- ರಾಷ್ಟ್ರೀಯ ಪೌಷ್ಟಿಕತೆ ಕಾರ್ಯನೀತಿ, ೧೯೯೩

- ರಾಷ್ಟ್ರೀಯ ಜನಸಂಖ್ಯಾ ಕಾರ್ಯನೀತಿ, ೧೯೯೩

ಈ ಎಲ್ಲಾ ಕಾರ್ಯನೀತಿಗಳನ್ನು ನಮ್ಮ ಸರ್ಕಾರಗಳು ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲೆಲ್ಲಾ ರೂಪಿಸಲಾಯಿತು.

ಅಲ್ಲದೇ ನಮ್ಮ ದೇಶದಲ್ಲಿ ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳಾ ಶಿಕ್ಷಣಕ್ಕೆ ಹಾಗೂ ಅವಳ ಅಭಿವೃದ್ಧಿ ಸಾಧಿಸಲು ಮಹತ್ತರ ಯೋಜನೆಗಳನ್ನು ಹಾಕಿಕೊಂಡಿತು. ಅದರಲ್ಲಿಯೂ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ವಿಶೇಷ ಆದ್ಯತೆ ನೀಡಲಾಗಿತ್ತು. ಆದ್ದರಿಂದ ಕಡ್ಡಾಯವಾಗಿ ಪ್ರಾಥಮಿಕ ಶಾಲೆಗೆ ದಾಖಲಾಗಿ ಹೆಚ್ಚಾಗುವಂತೆ ಶಾಲಾ ಸಲಭ್ಯಗಳನ್ನು ಒಂದಗಿಸಲಾಯಿತು. ಅಷ್ಟೇ ಅಲ್ಲದೇ ಬಾಲಕರ ಶಾಲೆಗೆ ಬಾಲಕಿಯರನ್ನು ದಾಖಲು ಮಾಡಲು ಸಹ ಶಿಕ್ಷಣ ಶಾಲೆಗಳನ್ನು ತೆರೆಯಲಾಯಿತು ಹಾಗೂ ಪೋಷಕರನ್ನು ಕೂಡ ಈ ಬಗ್ಗೆ ಉತ್ತೇಜಿಸಲಾಯಿತು. ಅನಂತರ ೧೯೫೭ ರಿಂದ ೨೦೦೫ ರವರೆಗೆ ಸುಮಾರು ಒಂಬತ್ತು ಪಂಚವಾರ್ಷಿಕ ಯೋಜನೆಗಲನ್ನು ರೂಪಿಸಿ ಕಾರ್ಯಗತಗೊಳಿಸಲಾಗಿದೆ. ಇವೆಲ್ಲದರಲ್ಲೂ ಹೆಣ್ಣು ಮಕ್ಕಳ ಶಾಲೆಗಳ ಸ್ಥಾಪನೆ, ಶಿಕ್ಷಕಿಯರಿಗೆ ಉಚಿತ ವಸತಿ ಸೌಲಭ್ಯ, ಹಾಜರಾತಿ, ವಿಧ್ಯಾರ್ಥಿ ವೇತನ, ಶಾಲಾ ಶುಲ್ಕ ಕಡಿತ, ಶಿಶಿಕ್ಷು ವೇತನ, ಹೆಣ್ಣು ಮಕ್ಕಳಿಗೆ, ಪ್ರತ್ಯೇಕ ಹಾಸ್ಟೆಲ್‌ಗಳನ್ನು ತೆರೆಯುವುದು ಮುಂತಾದ ಅಂಶಗಳಿಗೆ ಒತ್ತು ನೀಡಲಾಯಿತು. ಜೊತೆಗೆ ಭಾರತ ಸರ್ಕಾರ ಶ್ರೀಮತಿ ದುರ್ಗಾ ಬಾಯಿ ದೇಶ್ ಮುಖ್ ರವರ ಅಧ್ಯಕ್ಷತೆಯಲ್ಲಿ ಮಹಿಳಾ ಶಿಕ್ಷಣ ಸಮಿತಿಯನ್ನು ರಚಿಸಿತು. ಹಾಗೂ ರಾಷ್ಟ್ರೀಯ ಮಹಿಳಾ ಶಿಕ್ಷಣ ಪರಿಷತ್ತು ರಚಿತವಾಗಿ, ರಾಜ್ಯಗಳಲ್ಲಿ ಮಹಿಳಾ ಶಿಕ್ಷಣಕ್ಕೆ ವಿಶೇಷ ಕಾಳಜಿ ವಹಿಸಲು ಸಾಧ್ಯವಾಯಿತು.

ಇವುಗಳಲ್ಲದೇ ೧೯೮೫-೧೯೯೦ರಲ್ಲಿ ರೂಪಿತವಾದ ೭ನೇ ಯೋಜನೆಯ ವೇಳೆಗೆ ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಜಾರಿಯಲ್ಲಿ ಬಂದಿತು. ಇದರಲ್ಲಿ ಮಹಿಳೆಯರ ಸ್ಥಾನಮಾನವನ್ನು ಬದಲಾಯಿಸಲು ಮಹಿಳಾ ಸಮಾನತೆಯನ್ನು ಸಾಧಿಸಲು ಲಿಂಗಾಧಾರಿತ ದೃಷ್ಟಿಕೋನವನ್ನು ಅಳವಡಿಸಿತು. ಕಪ್ಪು ಹಲಗೆ ಯೋಜನೆ, ಕನಿಷ್ಟ ಕಲಿಕಾ ಸಾಮರ್ಥ್ಯ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಸಾಕ್ಷರತಾ ಮಿಶನ್ ಮುಂತಾದ ಹಲವಾರು ಯೋಜನೆಗಳು ಚಾಲ್ತಿಯಲ್ಲಿ ಬಂದವು. ಅದರಲ್ಲೂ ಲಿಂಗ ತಾರತಮ್ಯ ವಿಮೋಚನೆಗೆ ಹೆಚ್ಚು ಒತ್ತು ನೀಡಿರುವುದೊಂದು ವಿಶೇಷ.

ಅಲ್ಲದೇ ಮುಂದಿನ ಯೋಜನೆಗಳಾದ ೮ ಮತ್ತು ೧೦ನೇ ಯೋಜನೆಗಳಲ್ಲಿ (೧೯೯೨-೯೭ ಮತ್ತು ೧೯೯೮-೨೦೦೫) ಹಿಂದುಳಿದ ಜಿಲ್ಲೆಗಳಲ್ಲಿ ಪ್ರಾಥಮಿಕ ಶಿಕ್ಷಣ ಯೋಜನೆಗಳನ್ನು ಜಾರಿಯಲ್ಲಿ ತರಲಾಯಿತು. ಮುಖ್ಯವಾಗಿ ಲಿಂಗ ಸಮಾನತೆಗೆ ಒತ್ತು ನೀಡಿ ಮಧ್ಯಾಹ್ನ ಉಪಹಾರದ ಜೊತೆಗೆ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಸಾಕಷ್ಟು ಪ್ರೋತ್ಸಾಹ ನೀಡಲಾಗಿದೆ. ಅಲ್ಲದೇ ಹೊಸ ಶಿಕ್ಷಣ ಯೋಜನೆಯಲ್ಲಿ ಇಂದಿನವರೆಗೆ ಇದ್ದ ಮಹಿಳೆಯುರಿಗೆ ಶಿಕ್ಷಣದಲ್ಲಿ ಸಮಾನತೆ ಎಂಬ ಘೋಷಣೆಯಿಂದ ಮಹಿಳಾ ಸಮಾನತೆಗಾಗಿ ಶಿಖ್ಷಣ ಎಂಬ ಹೊಸ ತತ್ವವನ್ನು ಪ್ರತಿಪಾದಿಸಲಾಗಿದೆ.

ಇನ್ನೊಂದು ಗಮನಾರ್ಹ ವಿಷಯವೆಂದರೆ ನಮ್ಮ ಸರ್ಕಾರವು ಹನ್ನೊಂದನೇ ಪಂಚವಾರ್ಷಿಕ ಯೋಜನೆಯಲ್ಲಿ ಕೇಂದ್ರ ಸರ್ಕಾರವು ಹೆಣ್ಣುಮಕ್ಕಳಿಗೆಂದೇ ಪ್ರತ್ಯೇಕವಾದ ಶಿಕ್ಷಣ ಯೋಜನೆಯೊಂದು ರೂಪಿಸಿದೆ. ಈ ಯೋಜನೆಯನ್ನು ಆಂಗ್ಲ ಭಾಷೆಯಲ್ಲಿ ಎನ್.ಪಿ.ಇ.ಜಿ.ಇ.ಎಲ್. ಒಂದು ಕರೆಯಲಾಗುತ್ತಿದೆ.

## ರಾಷ್ಟ್ರೀಯ ಹೆಣ್ಣು ಮಕ್ಕಳ ಸಮಗ್ರ ಕಲಿಕಾ ಯೋಜನೆ

ಈ ಯೋಜನೆಯ ಅಡಿಯಲ್ಲಿ ೬ ರಿಂದ ೧೪ ವರ್ಷದ ಹೆಣ್ಣು ಮಕ್ಕಳು ಕಲಿಕೆಗೆ ಅರ್ಹರಾಗುತ್ತಾರೆ. ಇವರಿಗೆಂದೇ ಪ್ರತ್ಯೇಕವಾದ ಒಂದು ಸ್ವತಂತ್ರ ಕೊಠಡಿ ಹಾಗೂ ಆ ಕೊಠಡಿಗೆ ಇನ್ನೊಬ್ಬಳು ಸ್ವಯಂಸೇವಕಿಯೆಂದು ಮೂರುಜನ ಮಹಿಳಾ ಅರೆಕಾಲಿಕಾ ಭೋಧಕ ಶಿಕ್ಷಣವನ್ನು ಉಚಿತವಾಗಿ ನೀಡಲಾಗುತ್ತಿದ್ದು ಇದು ಈಗ ಚಾಲ್ತಿಯಲ್ಲಿರುವ ಕರ್ನಾಟಕದಾದ್ಯಂತ ಜಾರಿಯಲ್ಲಿರುವ ಕಲಿಕಾ ಯೋಜನೆಯಾಗಿದೆ. ಇದು ಕರ್ನಾಟಕ ೬೪ ಜಿಲ್ಲೆಗಳಲ್ಲಿ ಕಂಡುಬರುತ್ತಿದ್ದು ಅದರಲ್ಲೂ ಪ್ರಸ್ತುತವಾಗಿ ಕೊಪ್ಪಳ ಜಿಲ್ಲೆಯಲ್ಲೂ ಕಂಡು ಬರುತ್ತಿದೆ. ಇದಕ್ಕೆಂದೇ ಹಲವಾರು ಯೋಜನೆಗಳನ್ನು ಹಾಕಿಕೊಂಡು ಪ್ರಸ್ತುತವಾಗಿ ಯೋಜನೆ ಕಾರ್ಯಗತವಾಗಿರುವುದು ಕಂಡುಬರುತ್ತಿದೆ.

ಈ ಮೇಲಿನ ಆಡಳಿತದ ಸರಪಣಿಯಿಂದ ನಮಗೆ ತಿಳಿದುಬಂದಿರುವುದೇನೆಂದರೆ, ಗ್ರಾಮದಲ್ಲಿನ ಶಾಲೆಯ ಮುಖ್ಯೋಪಾಧ್ಯಾಯರೊಂದಿಗೆ ಗ್ರಾಮ ಜೆಂಡರ ಸಮಿತಿಯೊಂದಿಗೆ ಪ್ರಾರಂಭವಾಗಿ ಮುಂದೇ ಅದು ಕ್ಲಸ್ಟರ ಹಾಗೂ ತಾಲ್ಲೋಕು ಮತ್ತು ಜಿಲ್ಲಾಅ ರಾಜ್ಯ ಮುಂದೇ ಸಮಸ್ತ ದೇಶದ ಕೇಂದ್ರ ಸರ್ಕಾರಕ್ಕೆ ಜೋಡಣೆಯಾಗಿರುವ ಆಡಳಿತ ವೈಖರಿಯಿಂದ ನಮ್ಮ ರಾಷ್ಟ್ರೀಯ

ಹೆಣ್ಣು ಮಕ್ಕಳ ಕಲಿಕಾ ಯೋಜನೆಯ ಗುರಿಯನ್ನು ಹಾಗೂ ಉದ್ದೇಶವನ್ನು ಸಾಧಿಸುವ ಹಿನ್ನೆಲೆಯಲ್ಲಿ ರಚಿತವಾಗಿರುವ ಆಡಳಿತ ಸಮಗ್ರ ಮಾಹಿತಿಯೆಂದು ತಿಳಿದುಬರುತ್ತದೆ. ಈ ರೀತಿಯಾಗಿ ಈ ಕಲಿಕಾ ಕಾರ್ಯಕ್ರಮವು ಕಾರ್ಯಾರಂಭವಾಗಿದ್ದು ಇಡೆರೆ ದೇಶದ ತುಂಬೆಲ್ಲಾ ಆಯ್ಕೆಯಾದ ರಾಜ್ಯಗಳಲ್ಲೆಲ್ಲಾ ಶಿಕ್ಷಣ ಕಾರ್ಯಕ್ರಮ ಹೆಣ್ಣು ಮಕ್ಕಳಿಗೆಂದೇ ಹಮ್ಮಿಕೊಂಡಿದೆ. ಇದು ಸರ್ವ ಶಿಕ್ಷಣ ಅಭಿಯಾನ ಯೋಜನೆಯಡಿಯಲ್ಲಿ ನಡೆಯುವುದಲ್ಲದೇ ಈ ಕಾರ್ಯಕ್ರಮಕ್ಕೆಂದೇ ನಮ್ಮ ಸರ್ಕಾರವು ಲಕ್ಷಾಂತರ ರೂಪಾಯಿಗಳನ್ನು ವರ್ಷಕ್ಕೆಲ್ಲಾ ಖರ್ಚು ಮಾಡುತ್ತಿದೆ.

ಸರ್ಕಾರವು ಸರ್ವ ಶಿಕ್ಷಣ ಅಭಿಯಾನದ್ದಿ ಪ್ರಾಥಮಿಕ ಹಂತದಲ್ಲಿ ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ರಾಷ್ಟ್ರೀಯ ಕಾರ್ಯಕ್ರಮವನ್ನು ಅನುಮೋದಿಸಿದೆ. ಸರ್ವ ಶಿಕ್ಷಣ ಅಭಿಯಾನದ ಒದು ಭಾಗವಾಗಿದ್ದು, ಅಡಿಯಲ್ಲಿ ಪ್ರತ್ಯೇಕವಾದ ಅನುಷ್ಟಾನಗೊಳ್ಳುವುದು. ಈ ಯೋಜನೆಯು ಹೆಣ್ಣು ಮಕ್ಕಳನ್ನೊಳಗೊಂಡಂತೆ ಎಲ್ಲಾ ಮಕ್ಕಳಿಗೆ ಸಮರೋಪಾದಿಯಲ್ಲಿ ಸಮುದಾಯದ ಬಡತನದ ಮೂಲಕ ಮಾನವ ಸಾಮರ್ಥ್ಯಗಳನ್ನು ಹೆಚ್ಚಿಸುವ ಒಂದು ಪ್ರಯತ್ನವಾಗಿದೆ. ಈ ಹಿನ್ನೆಲೆಯಲ್ಲಿ ಕಾರ್ಯಕ್ರಮವನ್ನು ಶಿಕ್ಷಣ ವಂಚಿತ ೧ ರಿಂದ ೮ ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿಸುವ ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಎಸ್.ಎಸ್.ಎ. ಜೆಂಡರ ಘಟಕವಾಗಿ ರೂಪಿಸಲಾಗಿದೆ. ಶೈಕ್ಷಣಿಕವಾಗಿ ಹಿಂದುಳಿದ ಪ್ರದೇಶಗಳಲ್ಲಿ ಹೆಣ್ಣು ಮಕ್ಕಳ ಪ್ರಥಮಿಕ ಶಿಕ್ಷಣದ ಸಾರ್ವತ್ರಿಕರಣಕ್ಕಾಗಿ ಈ ಕಾರ್ಯಕ್ರಮ ಅತ್ಯಂತ ಅವಶ್ಯಕವಾಗಿದೆ.

ಪ್ರಾಥಮಿಕ ಶಾಲಾ ಹಂತದ ದಾಖಲಾತಿ/ಹಾಜರಾತಿಯಲ್ಲಿ ಜೆಂಡರ್ ಅಸಮಾನತೆಯು ಹೆಚ್ಚು ಇದೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗ್ಡಡದ ಹೆಣ್ಣು ಮಕ್ಕಳಲ್ಲಿ ಇದು ತೀವ್ರವಾಗಿದೆ. ಈಚಿನ ಬೆಳವಣಿಗೆಗಳಿಂದ ಜೆಂಡರ್ ಅಸಮಾನತೆಯನ್ನು ಕಡಿಮೆಗೊಳಿಸಲಾಗಿದ್ದರೂ ಸಹ ಕಷ್ಟ ಸಾಧ್ಯ ಗುಂಪುಗಳಿಗೆ ಹೆಚ್ಚು ಗಮನ ನೀಡುವುದರ ಮೂಲಕ ಅಸಮಾನತೆಯನ್ನು ಇನ್ನೂ ಕಡಿಮೆಗೊಳೀಸಬಹುದಾಗಿದೆ ಆದ್ದರಿಂದ ಹೆಣ್ಣು ಮಕ್ಕಳ ಅವಶ್ಯಕತೆಗೆ ಅನುಗುಣವಾಗಿ ಕೆಲವು ಚಟುವಟಿಕೆಗಳನ್ನು ಸೇರಿಸುವ ಅಗತ್ಯತೆ ಇದೆ. ಈ ಹಿನ್ನೆಲೆಯಲ್ಲಿ ಕಾರ್ಯಕ್ರಮ ರೂಪುಗೊಂಡಿದೆ.

**ಎನ್.ಪಿ.ಇ.ಜಿ.ಎಲ್.ನ ಸ್ಥೂಲ ಗುರಿಗಳು:**

೧. ಹೆಣ್ಣುಮಕ್ಕಳನ್ನುಶಾಲೆಗಳಲ್ಲಿ ಉಳಿಸಿಕೊಳ್ಳಲು ಸೌಲಭ್ಯ ಒದಗಿಸುವುದರೊಂದಿಗೆ ಮಹಿಳೆಯರುಮತ್ತು ಹೆಣ್ಣು ಮಕ್ಕಳು ಹೆಚ್ಚಾಗಿ ಶಿಕ್ಷಣ ಕ್ಷೇತ್ರದಲ್ಲಿ ಪಾಲ್ಗೊಳ್ಳುವುದನ್ನು ಖಚಿತಪಡಿಸಿಕೊಳ್ಳುವುದು

೨. ವಿವಿಧ ಚಟುವಟಿಕೆಗಳ ಮೂಲಕ ಶಿಕ್ಷಣದ ಗುಣಮಟ್ಟ ಹೆಚ್ಚಿಸುವುದು ತನ್ಮೂಲಕ ಅವರ ಸಬಲೀಕರಣಕ್ಕೆ ಒತ್ತು ನೀಡುವುದು

**ಈ ಕಾರ್ಯಕ್ರಮದ ಉದ್ದೇಶಗಳು:**

೨೦೧೦ರೊಳಗೆ ರಾಜ್ಯದಲ್ಲಿ ಶೈಕ್ಷಣೀಕವಾಗಿ ಹಿಂದುಳಿದ ಬ್ಲಾಕ್‌ಗಳಲ್ಲಿ ೬-೧೪ ಯಯೋಮಾನದ ಎಲ್ಲಾ ಹೆಣ್ಣು ಮಕ್ಕಳ ದಾಖಲಾತಿ/ಹಾಜರಾತಿ/ಕಲಿಕೆ ಮತ್ತು ಜೀವನ ಕೌಶಲಗಳಲ್ಲಿ ಶೇಕಡ ೧೦೦ ರಷ್ಟು ಪ್ರಗತಿ ಸಾಧಿಸುವುದು

- ಹೆಣ್ಣು ಮಕ್ಕಳ ಶಿಕ್ಷಣದ ಸಮಸ್ಯೆಗಳಿಗೆ ಕ್ರಿಯಾ ಸಂಶೋಧನೆಗಳ ಮೂಲಕ ಪರಿಹಾರ ಕಂಡುಕೊಳ್ಳೂವುದು
- ಜೆಂಡರ್ ತರಬೇತಿಗಳನ್ನು ನೀಡುವ ಮೂಲಕ ಎಲ್ಲಾ ಹಂತಗಳಲ್ಲಿ ಲಿಂಗ ತಾರತಮ್ಯವನ್ನು ಹೋಗಲಾಡಿಸುವುದು
- ಪ್ರಾಥಮಿಕ ಹಂತದಲ್ಲಿ ಹೆಣ್ಣು ಮಕ್ಕಳಿಗೆ ಉತ್ತಮ, ಗುಣಮಟ್ಟದ ಶಿಕ್ಷ್ಯಣ ದೊರಕುವುವಂತೆ ಮಾಡುವುದು.
- ಸಮಗ್ರ ಶಿಕ್ಷಣದ ಮೂಲಕ ಹೆಣ್ಣು ಮಕ್ಕಳಲ್ಲಿ ಆತ್ಮ ವಿಶ್ವಾಸ ಹಾಗೂ ಆತ್ಮ ಗೌರವವನ್ನು ಹೆಚ್ಚಿಸಿ ಉತ್ತಮ ವ್ಯಕ್ತಿತ್ವ ರೂಪಿಸುವುದು. ಇದಕ್ಕಾಗಿ ಮಹಿಳ ಸಂಘಗಳು, ಶಿಕ್ಷ್ಯಣ ಕ್ಷೇತ್ರದ ವಿವಿಧ ಆಯಾಮಗಳ ಅಧಿಕಾರಿಗಳು ಶಿಕ್ಷಕರು ಒಗ್ಗೂಡಿ ಕೆಲಸ ಮಾಡುವುದು
- ಕಾರ್ಯಕ್ರಮದ ಯಶಸ್ವಿ ಅನುಷ್ಠಾನದಿಂದ ಪ್ರಾಥಮಿಕ ಶಿಕ್ಷಣದಲ್ಲಿ ಹೆಣ್ಣು ಮಕ್ಕಳ ಭಾಗವಹಿಸುವಿಕೆ ಮತ್ತು ಪ್ರಸ್ತುತತೆಯನ್ನು ಹೆಚ್ಚಿಸುವುದು

- ಹೆಣ್ಣು ಮಕ್ಕಳ ಶಿಕ್ಷಣಕಾಗಿ ಶಾಲೆ ಮತ್ತು ಮನೆಗಳಲ್ಲಿ ಅನುಕೂಲಕರ ವಾತಾವರಣವನ್ನುಂಟು ಮಾಡಿ ಸಮುದಾಯ್ದ ಬೆಂಬಲ ದೊರಕುವಂತೆ ಮಾಡುವುದು ಮತ್ತು ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವುದು.

**ಕಾರ್ಯಕ್ರಮದ ವ್ಯಾಪ್ತಿ.**

೧. ಶೈಕ್ಷಣಿತವಾಗಿ ಹಿಂದುಳಿದ ಬ್ಲಾಕ್‌ಗಳು : ಮಹಿಳಾ ಸಾಕ್ಷರತಾ ಪ್ರಮಾಣವು ರಾಷ್ಟ್ರೀಯ ಸರಾಸರಿಗಿಂತ (೪೬.೧೩) ಕಡಿಮೆ ಇರುವ ಮತ್ತು ಜೆಂಡರ್ ರಾಷ್ಟ್ರೀಯ ಸರಾಸರಿಗಿಂತ ೨೧.೫೯) ಹೆಚ್ಚಿಗೆ ಇರುವ ಕಂದಾಯ ಬ್ಲಾಕ್‌ಗಳನ್ನು ಇ.ಬಿ.ಬಿ ಎಂದು ಗುರುತಿಸಲಾಗುವುದು. ಮಹಿಳಾ ಸಾಕ್ಷರತೆಯನ್ನು ೧೯೯೧ರ ಜನಗಣತಿಯಲ್ಲಿ ಇರುವುದನ್ನು ಪರಿಗಣಿಸಲಾಗಿದೆ

೨. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗ್ಡಡದ ಜನಸಂಖ್ಯೆಯು ಬ್ಲಾಕ್‌ನಲ್ಲಿ ಕನಿಷ್ಟ ಶೇಕಡ ೫ ರಷ್ಟಿರುವ ಮತ್ತು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಮಹಿಳಾ ಸಾಕ್ಷರತಾ ಪ್ರಮಾಣವು ಶೇ ೧೦ ಕ್ಕಿಂತ ಕಡಿಮೆ ಇರುವ ಕಂದಾಯ ಬ್ಲಾಕ್‌ಗಳು.

೩. ಆಯ್ದನಗರ ಪ್ರದೇಶದ ಸ್ಲಿಮ್ ಗಳು

೪. ಕರ್ನಾಟಕ ರಾಜ್ಯದಲ್ಲಿ ಸದರಿ ವರ್ಷದಲ್ಲಿ ೬೨೧ (೪ ನಗರ ಕ್ಲಿಸ್ಟರ್ ಸೇರಿದಂತೆ ಕ್ಲಸ್ಟರ್‌ಗಳಲ್ಲಿ ಎನ್.ಪಿ.ಇ.ಎಲ್. ಕಾರ್ಯಕ್ರಮ ಅನುಷ್ಟಾನದಲ್ಲಿರುತ್ತದೆ. ಎನ್.ಪಿ.ಇ.ಎಲ್. ಕಾರ್ಯಕ್ರಮವು ೨೦೦೪-೦೫ರಿಂದ ಕರ್ನಾಟಕ ರಾಜ್ಯದಲ್ಲಿ ಜಾರಿಯಲ್ಲಿದ್ದು ಇದುವರೆಗೆ ಅನುಷ್ಟಾನಗೊಂಡಿರುವ ಮಾದರಿ ಕ್ಲಸ್ಟರ್ ಶಾಲೆಗಳ ಸಂಖ್ಯೆ ಈ ಕೆಳಕಂಡಂತೆ ಇವೆ.

| ಕ್ರ.ಸಂ. | ವಿವರ | ೨೦೦೪-೦೫ | ೨೦೦೫-೦೬ | ೨೦೦೬-೦೭ | ೨೦೦೭-೦೮ | ೨೦೦೮-೦೯ |
|---|---|---|---|---|---|---|
| ೧ | ಕ್ಲಸ ರ್‌ಗಳ ಸಂಖ್ಯೆ | ೪೮೨ | ೬೨೫ | ೮೫೮ | ೮೬೧ | ೯೧೭ |
| ೨ | ನಗರ ಸ್ಲಂಗಳ ಸಂಖ್ಯೆ | ೪ | ೪ | ೪ | ೪ | ೪ |
| ೩ | ಒಟ್ಟು ಕ್ಲಸ ರ್‌ಗಳು | ೪೮೬ | ೬೨೯ | ೮೬೨ | ೮೬೫ | ೯೨೧ |
| ೪ | ಶೈಕ್ಷಣಿಕವಾಗಿ ಹಿಂದುಳಿದ ಬ್ಲಾಕ್‌ಗಳ ಸಂಖ್ಯೆ | ೪೫ | ೫೮ | ೬೧ | ೬೧ | ೬೧ |

**ಕಾರ್ಯಕ್ರಮ ಅನುಷ್ಠಾನ**

೨೦೦೮-೦೯ನೇ ಸಾಲಿಗೆ ರಾಜ್ಯದಲ್ಲಿ ೩೭ ವಿವಿಧ ಚಟುವಟಿಕೆಗಳನ್ನು ಯೋಜಿಸಿದ್ದು ಅದು ಕೇಂದ್ರ ಸರ್ಕಾರದಿಂದ ಅನುಮೋದನೆಯಾಗಿದ್ದು, ಅದರಂತೆ ರಾಜ್ಯದಲ್ಲಿ ಅನುಷ್ಠಾನ ಮಾಡಬೇಕಿದೆ. ಪ್ರತಿ ಇ.ಬಿ.ಬಿ. ವಲಯ ೮೬೫ಹಳೆಯ ಹಾಗೂ ಹೊಸದಾಗಿ ಮಂಜೂರಾಗಿರುವ ೫೬ ಕ್ಲಸ್ಟರ್ ಮಾದರಿ ಶಾಲೆಗಳಿಗೆ ಮಂಜೂರಾಗಿರುವಂತೆ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡುವುದು. ಒಟ್ಟಾರೆ, ಬ್ಲಾಕ್ವಾರು ಯೋಜಿಸಿರುವ ಈ ಅನುದಾನವನ್ನು ಬಳಸಿ ಚಟುವಟಿಕೆವಾರು ಬ್ಲಾಕ್, ಕ್ಲಸ್ಟರ್ ಹಾಗೂ ಶಾಲಾ ಹಂತದಲ್ಲಿ ಚಟುವಟಿಕೆಗಳನ್ನು ಅನುಷ್ಠಾನ ಮಾಡಬಹುದಾಗಿದೆ.

ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ಸಮುದಾಯದ ; ಉಪಾಧ್ಯಾಯರ ಮತ್ತು ಸ್ವಯಂ ಸೇವಾ ಸಂಸ್ಥೆಗಳ ಸಹಕಾರವನ್ನು ಕ್ರೂಡೀಕರಿಸಿ ಸ್ಥಳೀಯ ಸಮುದಾಯದ ಪ್ರಣ ಪ್ರಮಾಣದ ಭಾಗವಹಿಸುಕೆಯ ಆಧಾರದ ಮೇಲೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವುದು.

ಆಯ್ದ ಚಟುವಟಿಕೆಗಳನ್ನು ಆಯಾ ಬ್ಲಾಕ್‌ನ ಪರಿಸ್ಥಿತಿಗನುಗುಣವಾಗಿ ಚಟುವಟಿಕೆಯನ್ನು ಯೋಜಿಸಿ ಅನುಷ್ಠಾನಗೊಳಿಸುವುದು. ಯೋಜನೆ ಈ ಕೆಳಕಂಡ ಅಂಶಗಳಿಗೆ ವಿಶೇಷ ಗಮನ ನೀಡುವಂತೆ ಇರಲಿ.

- ಶಾಲೆಯಿಂದ ಹೊರಗುಳಿದ ಹೆಣ್ಣು ಮಕ್ಕಳು ( ಶಾಲೆಗೆ ಸೇರದ ಮತ್ತು ಶಾಲೆ ತೊರೆದ ಮಕ್ಕಳು)
- ಪ್ರಾಥಮಿಕ ಶಿಕ್ಷಣವನ್ನು ಮುಕ್ತಾಯಗೊಳಿಸದೆ ಇರುವ ಹೆಣ್ಣುಮಕ್ಕಳು

- ಕೆಲಸ ಮಾಡುತ್ತಿರುವ ಪ್ರಾಥಮಿಕ ಶಾಲಾ ವಯಸ್ಸಿನ ಹೆಣ್ಣು ಮಕ್ಕಳು
- ಸಾಮಾಜಿಕವಾಗಿ ಹಿಂದುಳಿದಿರುವ ಹೆಣ್ಣುಮಕ್ಕಳು
- ಹಾಜರಾತಿ ಕಡಿಮೆ ಇರುವ ಹೆಣ್ಣು ಮಕ್ಕಳು
- ಶೈಕ್ಷಣಿಕವಾಗಿ ಹೆಚ್ಚು ಸಾಧನೆ ಗಳಿಸದೆ ಇರುವ ಹೆಣ್ಣುಮಕ್ಕಳು

ಎನ್.ಪಿ.ಇ.ಜಿ.ಇ.ಎಲ್. ಕಾರ್ಯತಂತ್ರಗಳನ್ನು ಕ್ಲಸ್ಟರ್ ಮಾದರಿ ಶಾಲೆಯ ಮೂಲಕ ಅನುಷ್ಠಾನಗೊಳಿಸಲಾಗುತ್ತದೆ.

**ಕ್ಲಸ್ಟರ್ ಮಾದರಿ ಶಾಲೆ ಎಂದರೇನು?**

ಕ್ಲಸ್ಟರ್ ಹಂತದಲ್ಲಿ ಪ್ರಾಥಮಿಕ ಹೆಣ್ಣು ಮಕಳ ಶಿಕ್ಷಣದ ರಾಷ್ಟ್ರೀಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಆಯ್ಕೆ ಮಾಡಿಕೊಂಡಿರುವ ಕೇಂದ್ರ ಶಾಲೆಯನ್ನು ಹಾಗೂ ಚಟುವಟಿಕಾ ಕೇಂದ್ರವಾಗಿರುವ ಶಾಲೆಯನ್ನು ಕ್ಲಸ್ಟರ್ ಮದರಿ ಶಾಲೆ ಎನ್ನುವರು.

**ಕ್ಲಸರ್ ಮಾದರಿ ಶಾಲೆಯ ಆಯ್ಕೆ**

ಕ್ಲಸ್ಟರ್ ಮಾದರಿ ಶಾಲೆಯ ಆಯ್ಕೆಗೆ ಈ ಕೆಳಗಿನ ಅಂಶಗಳು ಆಧಾರವಾಗಿವೆ.

- ಹೆಚ್ಚುವರಿ ಕಟ್ಟಡ ಕಟ್ಟಲು ಸ್ಥಳಾವಕಾಶವಿರಬೇಕು
- ಆಟದ ಮೈದಾನವಿರಬೇಕು
- ಪ.ಜಾತಿ, ಪ.ಪಂಗಡ ಇತರೆ ಹಿಂದುಳಿದ ವರ್ಗ, ಅಲ್ಪಸಂಖ್ಯಾತ, ಶಾಲೆ ಬಿಟ್ಟ ಹೆಣ್ಣು ಮಕ್ಕಳ ಸಂಖ್ಯೆ ಹೆಚ್ಚಾಗಿರಬೇಕು
- ಕ್ಲಸ್ಟರ್ ವ್ಯಾಪ್ತಿಗೆ ಒಳಪಟ್ಟ ಇತರೆ ಶಾಲೆಗಳಿಗೆ ಮಾದರಿಯುಆಗಿರುವ ಶಾಲೆಯಾಗಿರಬೇಕು.
- ಕ್ಲಸ್ಟರ್ ವ್ಯಾಪ್ತಿಗೆ ಒಳಪಡುವ ಇತರೆ ಶಾಲೆಗಳ ಸಂಪರ್ಕಕ್ಕೆ ಅನುಕೂಲವಾದ ಸ್ಥಳದಲ್ಲಿರಬೇಕು

ಕ್ಲಸ್ಟರ್ ಮಾದರಿ ಶಾಲೆಯ ಜವಾಬ್ಧಾರಿ ಎನ್.ಪಿ.ಇ.ಎಲ್. ಸೌಲಭ್ಯಗಳನ್ನು ವರದಿ ಪ್ರಕಾರ ಇತರೆ ಎಲ್ಲಾ ಶಾಲೆಗಳಿಗೆ ವರ್ಗಾಯಿಸುವ ಜವಾಬ್ಧಾರಿಯನ್ನು ಹೊಂದಿದೆ. ಸೌಲಭ್ಯಗಳೆಂದರೆ

- ಭೋದನಾ ಕಲಿಕಾ ಸಾಮಗ್ರಿಗಳು
- ಕ್ರೀಡ ಸಾಮಗ್ರಿಗಳು
- ಗ್ರಂಥಾಲಯ ಪುಸ್ತಕಗಳು
- ವೃತ್ತಿ ಶಿಕ್ಷಣದ ಪರಿಕರಗಳು (ರಾಬಿ, ಕತ್ತರಿ ) ಇತ್ಯಾದಿ.

**ಕ್ಲಸ್ಟರ್ ಶಾಲೆಯು ನಿರ್ವಹಿಸಬೇಕಾದ ದಾಖಲೆಗಳು**

- ಶಾಲೆಯಿಂದ ಹೊರಗುಳಿದ ಶಾಲೆ ಬಿಟ್ಟ ಹೆಣ್ಣು ಮಕ್ಕಳ ಪಟ್ಟಿ (ವ್ಯಾಪ್ತಿಗೆ ಒಳಪಡುವ ಎಲ್ಲಾ ಶಾಲೆಗಳ)
- ವೃತ್ತಿ ಶಿಕ್ಷಣಕ್ಕೊಳಪಟ್ಟ ಮಕ್ಕಳ ಪಟ್ಟಿ
- ಪರಿಹಾರ ಭೋಧಕರ /ಸ್ವಯ ಸೇವಕರ /ವೃತಿಪರ ಶಿಕ್ಯ್ಃಅಣ/ವಿಅವರ
- ಗೌ ರವ ಧನ ವಿತರಣಾ ಸಹಿ
- ಮಕ್ಕಳ ದಾಖಲಾತಿ/ಹಾಜರಾತಿ (ಕ್ಲಸ್ಟರ್ ವ್ಯಾಪ್ತಿ ಎಲ್ಲಾ ಶಾಲೆಗಳ)
- ಖರ್ಚು ವೆಚ್ಚಗಳ ದಾಖಲೆಗಳು
- ಯೋಜನೆ ಮತ್ತು ಅನುಷ್ಠಾನ ಕುರಿತು ದಾಖಲೆಗಳು

**ಅನುಷ್ಠಾನ ಸಮಿತಿ**

**ಜಿಲ್ಲಾ ಹಂತದ ಸಮಿತಿ**

ಡಿ.ಡಿ.ಪಿ.ಐ.(ಆ)–ಅಧ್ಯಕ್ಷರು, ಡಿ.ಡಿ.ಪಿ.ಐ.(ಅ)–ಉಪಾಧ್ಯಕ್ಷರು, ಸದಸ್ಯ ಕಾರ್ಯದರ್ಶಿ ಜಿಲ್ಲಾ ಜ್ಂಡರ್ ಕೋ–ಆರ್ಡಿನೇಟರ್ ಅಥವಾ ಡಿ.ವೈ.ಪಿ.ಸಿ.ಎಂ.ಸಿ.ಯ ಆಯ್ದ ಮಹಿಳಾ ಸದಸ್ಯರು (

೨ ಮಂದಿ), ಮಹಿಳಾ ಸಂಘದ ಪ್ರತಿನಿಧಿ (೦೩), ಮಹಿಳಾ ಸಾಮುಖ್ಯ (೦೧), ರಾಜ್ಯ ಕಛೇರಿಯ ಜಿಲ್ಲಾ ನೋಡೆಲ್ ಅಧಿಕಾರಿ (೦೧), ಸಂಪನ್ಮೂಲ ವ್ಯಕ್ತಿ (೦೧), ಡಿ.ವೈ.ಪಿ.ಸಿ.

**ನಿರ್ವಹಿಸಬೇಕಾದ ಕಾರ್ಯಗಳು**

ಎನ್.ಪಿ.ಇ.ಜಿ.ಇ.ಎಲ್. ಮಧ್ಯವರ್ತನೆಯ ಯೋಜನೆಯ ತಯಾರಿಕೆ ಅನುಷ್ಠಾನ ಮತ್ತು ಉಸ್ತುವಾರಿ, ಮತ್ತು ತಾಂತ್ರಿಕ ಬೆಂಬಲ ನೀಡಿಕೆ; ವರ್ಷ್ಃಅದಲ್ಲಿ ಕನಿಷ್ಟ ೨ ಬಾರಿ ಸಭೆ ಸೇರಿ ಅನುಷ್ಠಾನದ ಅವಲೋಕನ ಮಾಡಬೇಕು.

**ಬ್ಲಾಕ್ ಹಂತದ ಸಮಿತಿ**

ಬಿ.ಇ.ಓ–ಅಧ್ಯಕ್ಷರು, ಬಿ.ಆರ್.ಸಿ– ಉಪಾಧ್ಯಕ್ಷರು, ಸದಸ್ಯ ಕಾರ್ಯದರ್ಶಿ, ಜಿಲ್ಲಾ ಜೆಂಡರ್ ಕೋ–ಆರ್ಡಿನೇಟರ್ ಅಥವಾ ಬಿ.ಆರ್.ಸಿ, ಸದಸ್ಯರು: ಎಸ್.ಐ.ಎಂ.ಸಿಗಲ ಆಯ್ದ ಮಹಿಳಾ ಸದಸ್ಯರು ( ೨ ಮಂದಿ), ಮಹಿಳಾ ಸಂಘದ ಪ್ರತಿನಿಧಿ (೦೧), ಮಹಿಳಾ ಸಾಮುಖ್ಯ (೦೧), ಎಸ್.ಸಿ./ಎಸ್.ಟಿ ಸಂಘಗಳ ಮಹಿಳಾ ಪ್ರತಿನಿಧಿಗಳು(೦೨) , ತಯಬ್ ಸಂಸ್ಥೆಯಿಂದ ಬ್ಲಾಕಿಗೆ ನಿಯೋಜಿಸಲ್ಪಟ್ಟ ನೋಡೆಲ್ ಅಧಿಕಾರಿ (೦೧), ಸಂಪನ್ಮೂಲ ವ್ಯಕ್ತಿ (೦೧).

**ನಿರ್ವಹಿಸಬೇಕಾದ ಕಾರ್ಯಗಳು:**

ಎನ್.ಪಿ.ಇ.ಜಿ.ಇ.ಎಲ್. ಮಧ್ಯವರ್ತನೆಯ ಸಂಬಂಧ ಯೋಜನೆ ತಯಾರಿಕೆ, ಅನುಷ್ಠಾನ, ಉಸ್ತುವಾರಿ ಮತ್ತು ತಾಂತ್ರಿಕ ಬೆಂಬಲ ನೀಡಿಕೆ.

ಈಲ್ಲಾವಾರು ಯೋಜಿಸಿರುವಂತಹ ಚಟುವಟಿಕೆಗಳನ್ನು ಅನುಬಂಧದಲ್ಲಿ ನೀಡಲಾಗಿದ್ದು ಬ್ಲಾಕ್, ಕ್ಲಸ್ಟರ್ ಹಾಗೂ ಶಾಲಾ ಹಂತದ ಚಟುವಟಿಕೆಗಳನ್ನು ಅನುಷ್ಠಾನಗೊಳಿಸುವಲ್ಲಿ ಕ್ರಿಯಾಯೋಜನೆ ತಯಾರಿಸುವುದು.

**ಕ್ಲಸ್ಟರ್ ಹಂತದ ಶಾಲೆಗಳ ಸಮಿತಿ**

ಸಿ.ಎ.ಇ.ಓ–ಅಧ್ಯಕ್ಷರು, ಕ್ಲಸ್ಟರ್ ಕೇಂದ್ರದ ಪ್ರಾಥಮಿಕ ಶಾಲೆಯ ಮುಖ್ಯಸ್ಥರು–ಸದಸ್ಯ ಕಾರ್ಯದರ್ಶಿ, ಸದಸ್ಯರು–ಸಿ.ಆರ್.ಪಿ; ಹಿಂಬಂದಿ ಪ್ರಾಥಮಿಕ ಶಾಲೆಯ, ಎಸ್.ಡಿ.ಎಮ್.ಸಿ, ಅಧ್ಯಕ್ಷರು, ಹಿಂಬಂದಿ ಪ್ರಾಥಮಿಕ ಶಾಲೆಯ ಮುಖ್ಯಸ್ಥರು, ಇವರಲ್ಲಿ ಕನಿಷ್ಟ ೦೫ ಮಂದಿ ಮಹಿಳೆಯರುಇರುವುದು. ಇಲ್ಲವಾದರೆ ಕೊರತೆ ಬೀಳುವ ಸಂಖ್ಯೆಯಷ್ಟೇ ಮಂದಿಯನ್ನು ಹಿಂಬಂದಿ ಶಾಲೆ ಎಸ್.ಡಿ.ಎಮ್.ಸಿಗಳಿಂದ ಮಹಿಳಾ ಅಭ್ಯರ್ಥಿಗಳನ್ನು ಸೇರಿಸಿಕೊಳ್ಳೂವುದು. ಕ್ಲಸ್ಟರ್ ರೆಘಿಂಡರ್ ಕೋಆರ್ಡಿನೇಟರ್; ಅಂಗನವಾಡಿ ಕಾರ್ಯಕರ್ತೆ; ವೈದ್ಯಾಧಿಆರಿ ಅಥವಾ ಆರೋಗ್ಯ ಕಾರ್ಯಕರ್ತೆ ; ಮಹಿಳಾ ಸಂಘಗಳ ಪ್ರತಿನಿಧಿ (೦೧) ಎಸ್.ಸಿ ಸಂಘಗಳ ಮಹಿಳಾ ಪ್ರತಿನಿಧಿ (೦೧) , ಸಂಪನ್ಮೂಲ ವ್ಯಕ್ತಿ (೦೧).

**ನಿರ್ವಹಿಸಬೇಕಾದ ಕಾರ್ಯಗಳು**

ಕ್ಲಸ್ಟರ್ ವ್ಯಾಪ್ತಿಯ ಎನ್.ಪಿ.ಇ.ಜಿ.ಇ.ಎಲ್. ಕಾರ್ಯಕ್ರಮದ ಯೋಜನೆ ಅನುಷ್ಟಾನ–ಉಸ್ತುವಾರಿ ಮಾಡುವುದು. ಇದಕ್ಕಾಗಿ ೦೩ ತಿಂಗಳಿಗೊಮ್ಮೆ ಸಭೆ ಸೇರಿ ಕಾರ್ಯಕ್ರಮಗಲ ಅವಲೋಕನ ಮಾಡುವುದು. ಅಗತ್ಯವೆನಿಸಿದರೆ ಕ್ಷೇತ್ರ ಭೇಟಿಯನ್ನು ತಂಡಗಳಲ್ಲಿ ಮಾತ್ರ ಮಾಡಬೇಕು.

ಇಲ್ಲಿ ಪ್ರಮುಖವಾಗಿ ಸರ್ಕಾರವು ಆಡಳಿತದ ದೃಷ್ಟಿಯಿಂದ ಕೆಲವೊಂದು ಅನುಕೂಲಗಳನ್ನು ಮಾಡಿಕೊಟ್ಟಿರುವ ಹಿನ್ನೆಲೆಯಲ್ಲಿ ಆಡಳಿತವು ಕಾರ್ಯಕ್ರಮದ ಅನುಕೂಲಕ್ಕೋಸ್ಕರವಾಗಿ ಯೋಜನೆಯ ಮಾದರಿಗಳನ್ನು ತಯಾರಿಸಿಕೊಂಡಿರುತ್ತದೆ. ಅಲ್ಲದೇ, ಕರ್ನಾಟಕದಾದ್ಯಂತ ಎಲ್ಲಾ ಒಟ್ಟು ೬೪ ಜಿಲ್ಲೆಗಳ ಪೈಕಿ ೬೧ ಬ್ಲಾಕ್ ಗಳು ತಮ್ಮ ಬ್ಲಾಕ್ ಮತ್ತು ಜಿಲ್ಲೆಯಲ್ಲಿನ ಅನುಕೂಲಕ್ಕಾಗಿ ಹಾಗೂ ಅಭಿವೃದ್ದಿಗಾಗಿ ಕಾರ್ಯಕ್ರಮದ ಅನುಷ್ಟಾನದ ಹಿನ್ನೆಲೆಯಿಂದ ತಮ್ಮ ಬೇಡಿಕೆಗಳನ್ನು ರಾಜ್ಯದಲ್ಲಿ ಎನ್.ಪಿ.ಇ.ಜಿ.ಇ.ಎಲ್. ಕಾರ್ಯಕ್ರಮ ಅನುಷ್ಟಾನಗೊಳಿಸುವ ವ್ಯಾಪ್ತಿಗೆ ಸೇರುವ ಜಿಲ್ಲೆಗಳು ಯೋಜಿಸಿರುವ ಕ್ರಿಯಾ ಅಂಶಗಳ ಆಧಾರದ ದೃಷ್ಟಿಯಿಂದ ಈ ಶೈಕ್ಷಣಿಕ ವರ್ಷದಲ್ಲಿ ಒಟ್ಟಾರೆ ೩೭ ಕಾರ್ಯತಂತ್ರಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದ್ದು. ಅದಕ್ಕೆ ಬೇಕಾಗಿರುವ ಹಣಕಾಸು ಹಾಗೂ

ಹೊಸದಾಗಿ ಆಯ್ಕೆ ಆಗಿರುವ ಹೊಸ ಕ್ಲಸ್ಟರ್ಗಳ ಅಭಿವೃದ್ಧಿಗೆ ಬಿಡುಗಡೆಯಾಗಿರುವ ಹಣಕಾಸಿನ ಮಾಹಿತಿ ಈ ರೀತಿಯಾಗಿದೆ.

ಎನ್.ಪಿ.ಇ.ಜಿ.ಇ.ಎಲ್. ಕಾರ್ಯಕ್ರಮವನ್ನು ೮೬೫ ಹಳೆಯ ಮತ್ತು ೫೭ ಹೊಸ ಕ್ಲಸ್ಟರ್‌ನಲ್ಲಿ ಅಳವಡಿಸಲು ೨೦೦೮ರಲ್ಲಿ ಅನುಮೋದನೆಯಾಗಿದೆ ಹಾಗೂ ಎಂ.ಹೆಚ್.ಆರ್.ಡಿ ಪತ್ರ ಸಂ: ಎಫ್.೧೪೫-೧/೦೮೯೯-೧೫ ದಿನಾಂಕ : ೩೦-೦೭-೦೮ರಂತೆ ಸ್ಥಿರಪಡಿಸಿದೆ. ಹಳೆಯ ಕ್ಲಸ ರಿಗೆ ೨೦೦೮-೦೯ರಲ್ಲಿ ಖರ್ಚು ಮಾಡಬೇಕಾದ ಒಟ್ಟು ಅನುದಾನ ರೂ.೬೦,೦೦೦/- ಮತ್ತು ರೂ ೧೦,೦೦೦/- ಸಮುದಾಯ ಸಂಚಲನಕ್ಕಾಗಿ, ಹೊಸ ಕ್ಲಸ್ಟ ರಿಗೆ ಖರ್ಚುಮಾಡಬೇಕಾದ ಘಟಕ ವೆಚ್ಚ ೩.೦೦ ಲಕ್ಷ (೨.೦೦ ಲಕ್ಷ ರೂಗಳು). ಕೌಶಲ ಬೆಳವಣಿಗೆಗೆ ಭರಿಸುವುದು ೩೦,೦೦೦/- ರೂಗಳನ್ನು ಸಾಮಗ್ರಿಗಳನ್ನು/ಗ್ರಂಥಾಲಯ ಪುಸ್ತಕ, ಕಲಿಕಾ ಭೋಧನೋಪಕರಣಗಳು, ಕ್ರೀಡಾ ಸಾಮಗ್ರಿ ಮತ್ತು ತರಬೇತಿ ಬಳಸಬೇಕು): ೬೦,೦೦೦ +೧೦,೦೦೦ ರೂಗಳನ್ನು ಆಯ್ಕೆಯಾನ ಒಟ್ಟು ೩೭ ಕಾರ್ಯ ತಂತ್ರಗಳಿಗೆ ಬಳಸಬೇಕು.

ಕೌಶಲ ಬೆಳವಣಿಗೆಗೆ ಬೇಕಾದ ಪರಿಕರಗಳನ್ನು ಕೊಳ್ಳಲು ಮತ್ತು ತರಬೇತಿ ಕೊಡಿಸಲು ಬೇಕಾದ ವೆಚ್ಚವನ್ನು ಭರಿಸಲು ರೂ.೨೦೦ ಲಕ್ಷ ಹಣವನ್ನು ೩ ವರ್ಷಗಳ ಅವಧಿವರೆಗೆ ಬಳಸಬಹುದು. ಬ್ಲಾಕುಗಳಿಂದ ಬೇಡಿಕೆ ಪಡೆದು ಆಧ್ಯತೆ ಮೇರೆಗೆ ಜಿಲ್ಲಾ ಹಂತದ ಖರೀದಿ ಸಮಿತಿ ಸಾಲಿಗೆ ಬಳಕೆ ಮಾಡಬೇಕು. ಉೂ ೨.೩ ಲಕ್ಷಗಳು ಅನಾವರ್ತಕ ವೆಚ್ಚಾಗಿ ಎನ್.ಪಿ.ಇ.ಜಿ.ಇ.ಎಲ್. ಅಡಿಯಲ್ಲಿ ಅನಾವರ್ತಕ ವೆಚ್ಚದಡಿ ಖರ್ಚು ಮಾಡುವ ಹಣದಲ್ಲಿ ವಸ್ತುಗಳ ಖರೀದಿಯನ್ನು ಜಿಲ್ಲಾ ಹಂತದ ಪಿ.ಎ.ಸಿ ಯ ಮುಖಾಂತರವೇ ಮಾಡುವುದು. ಹಣ ಬಿಡುಗಡೆಯನು ಕ್ಲಸ್ಟರಿಗೆ ಮಾಡಿ ಖರೀದಿ ಪ್ರಕ್ರಿಯೆ ನಡೆದಂತೆ ಅನುದಾನದ ಹನವನ್ನು ಕ್ಲಸ್ಟರಿನಿಂದ ತರಿಸಿ ವಿತರಿಸಬೇಕು.

ಈ ರೀತಿಯಾಗಿ ಪ್ರಾಥಮಿಕ ಹಂತದಲ್ಲಿ ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ರಾಷ್ಟ್ರೀಯ ಕಾರ್ಯಕ್ರಮವನ್ನು ದೇಶದ ವ್ಯಾಪ್ತಿಯಲ್ಲೂ ಹಾಗೂ ರಾಜ್ಯಗಳ ವ್ಯಾಪ್ತಿಯಲ್ಲೂ ಹಮ್ಮಿಕೊಳ್ಳಲಾಗಿದ್ದು ನಮ್ಮ ಕರ್ನಾಟಕದಲ್ಲೂ ಚಾಲ್ತಿಯಲ್ಲಿರುತ್ತದೆ. ೪,೮೫,೩೧೭ ಹೆಣ್ಣು ಮಕ್ಕಳನ್ನು ೬೧ ಎ.ಬಿ.ಬಿ.ಗಳ ೩೭ ಚಟುವಟಿಕೆಗಳಿಗೆ ೭೭೩.೫೦ ಲಕ್ಷ ರೂಗಳು ಬಳಸಿ ಅನುಷ್ಠಾನಗೊಳಿಸಬೇಕಿರುತ್ತದೆ.

ಜಿಲ್ಲಾವಾರು ಅನುದಾನವನ್ನು ನಮ ಕರ್ನಾಟಕ ಸರ್ಕಾರದ ಅಡಿಯಲ್ಲಿ ಬರುವ ಸರ್ವ ಶಿಕ್ಷಣ ಅಭಿಯಾನವು ಅದರ ಬಗ್ಗೆ ಪರಿಪೂರ್ಣ ಮಾಹಿತಿ ಚಿತ್ರಣ ನೀಡಿದೆ ಅದನ್ನು ಈ ಮುಂದಿನಂತೆ ನೋಡಬಹುದು.

**ಜಿಲ್ಲಾವಾರು ಅನುದಾನದ ವಿವರ**

| | ಜಿಲ್ಲೆಗಳು | ಸಶಿಅ | ನಗರಸ್ಲಂ | ಮ.ಸ | ಒಟ್ಟು | ೨೦೦೮-೦೯ರ ಹೊಸಕ್ಲಸ್ಟರ್ | ೨೦೦೮-೦೯ರ ಒಟ್ಟು ಕ್ಲಸ್ಟರ್ | ಜಿಲ್ಲಾವಾರು ನೌಮೋದಿತ ಅನುದಾನ |
|---|---|---|---|---|---|---|---|---|
| ೧ | ಬಾಗಲಕೋಟೆ | ೫೭ | ೦ | ೯ | ೬೬ | ೨ | ೬೮ | ೫೨.೨೦೦ |
| ೨ | ಬೆಂ.ಗ್ರಾ | ೧೩ | ೧ | ೦ | ೧೪ | ೦ | ೧೪ | ೯.೮೦೦ |
| ೩ | ಬೆಳಗಾಂ | ೪೩ | ೦ | ೦ | ೪೩ | ೦ | ೪೩ | ೩೦.೧೦೦ |
| ೪ | ಬಳ್ಳಾರಿ | ೬೨ | ೦ | ೧ | ೭೩ | ೧೧ | ೮೪ | ೮೪.೧೦೦ |
| ೫ | ಬೀದರ್ | ೫೧ | ೦ | ೧೪ | ೬೫ | ೦ | ೬೫ | ೪೫.೫೦೦ |
| ೬ | ಬಿಜಾಪುರ | ೦೫ | ೦ | ೨೮ | ೯೩ | ೬ | ೯೯ | ೮೩.೧೦೦ |
| ೭ | ಚಿತ್ರದುರ್ಗ | ೨೮ | ೦ | ೦ | ೨೮ | ೦ | ೨೮ | ೧೯.೬೦೦ |
| ೮ | ದಾವಣಗೆರೆ | ೧೪ | ೦ | ೦ | ೧೪ | ೨ | ೧೬ | ೧೫.೮೦೦ |
| ೯ | ಧಾರವಾಡ | ೨೨ | ೧ | ೦ | ೨೩ | ೬ | ೨೯ | ೩೪.೧೦೦ |
| ೧೦ | ಗದಗ | ೧೬ | ೦ | ೦ | ೧೬ | ೦ | ೧೬ | ೧೧.೨೦೦ |
| ೧೧ | ಗುಲ್ಬರ್ಗಾ | ೯.೩ | ೦ | ೨೮ | ೧೨೧ | ೨೬ | ೧೪೭ | ೧೬೨.೭೦೦ |
| ೧೨ | ಹಾಸನ | ೨೧ | ೦ | ೦ | ೨೧ | ೦ | ೨೧ | ೧೪.೭೦೦ |
| ೧೩ | ಚಿಕ್ಕಬಳ್ಳಾಪುರ | ೫೭ | ೦ | ೦ | ೫೭ | ೦ | ೫೭ | ೩೯.೯೦೦ |
| ೧೪ | ಕೋಲಾರ | ೬೩ | ೦ | ೦ | ೬೩ | ೦ | ೬೩ | ೪೪.೧೦೦ |
| ೧೫ | ಕೊಪ್ಪಳ | ೪೭ | ೦ | ೧೨ | ೫೯ | ೩ | ೬೨ | ೫೦.೩೦೦ |
| ೧೬ | ಮೈಸೂರು | ೧೬ | ೧ | ೦ | ೧೭ | ೦ | ೧೭ | ೧೧.೯೦೦ |
| ೧೭ | ರಾಯಚೂರು | ೭೧ | ೦ | ೬ | ೭೧ | ೦ | ೭೭ | ೫೩.೯೦೦ |
| ೧೮ | ತುಮಕೂರು | ೧೪ | ೦ | ೦ | ೧೪ | ೦ | ೧೪ | ೯.೮೦೦ |
| ೧೯ | ಬೆಂಗಳೂರು ನಗರ | ೦ | ೧ | ೦ | ೧ | ೦ | ೧ | ೦.೭೦೦ |
| | ಒಟ್ಟು | ೭೫೩ | ೪ | ೧೦೮ | ೮೦೫ | ೫೬ | ೯೨೧ | ೭೭೩.೫೦೦ |

ಈ ರೀತಿಯಾಗಿ ಕರ್ನಾಟಕ ಸರ್ಕಾರವು ರಾಜ್ಯದೆಲ್ಲೆಡೆ ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ಇಂತಹ ಮಹತ್ವದ ಯೋಜನೆಗಳನ್ನು ಕೈಗೆತ್ತಿಕೊಂಡು ಹೆಣ್ಣು ಮಕ್ಕಳು ಶಿಕ್ಷಿತರಾಗಲು ಹಾಗೂ ಅವರಿಗೆ ಶಿಕ್ಷಣ ಒದಗಿಸುವ ಓನ್ನೆಲೆಯಲ್ಲಿ ಮಹತ್ವದ ಹೆಜ್ಜೆ ಹಾತುತ್ತಿದೆ ಎಂದರೆ ತಪ್ಪಾಗಲಾರದು.

ಇವುಗಳಲ್ಲದೇ ಕರ್ನಾಟಕ ಸರ್ಕಾರವು ಮಹಿಳಾ ಶಿಕ್ಷಣ ಸುಧಾರಿಸುವಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ಅವುಗಳಲ್ಲಿ ಪ್ರಮುಖವಾದವುಗಳು.

೧. ೬ ರಿಂದ ೧೪ ವರ್ಷದ ಹೆಣ್ಣುಮಕ್ಕಳಿಗೆ ಉಚಿತ ಶಿಕ್ಷಣ

೨. ಉಚಿತ ಸಮವಸ್ತ್ರ; ಪಠ್ಯ ಪುಸ್ತಕ, ಸಲಕರಣೆಗಳು (ಬ್ಯಾಗ್‌ಗಳು)

೩. ಮದ್ಯಾಹ್ನ ಉಪಹಾರ ಯೋಜನೆ

೪. ಬಾಲಕಿಯರಿಗೆ ಹಾಜರಾತಿ ಶಿಷ್ಯ ವೇತನ

೫. ವಿಧ್ಯಾರ್ಥಿ ವೇತನ

೬. ವಸತಿ ಶಾಲೆ ಮತ್ತು ವಸತಿ ನಿಲಯಗಳು

೭. ಮಹಿಳಾ ಕಾನೂನು ಪಧವಿದರರಿಗೆ ಧನ ಸಹಾಚು ಯೋಜನೆ

೮. ಬಾಲಿಕಾ ಸಂವೃಧ್ಧಿ ಯೋಜನೆ

೯. ಮಹಿಳೆಯರಿಗಾಗಿ ಪ್ರತ್ಯೇಕ ಕೋರ್ಸ್ ಮತ್ತು ತರಬೇತಿಗಳು

೧೦. ಸಹ ಶಿಕ್ಷಣದಲ್ಲಿ ಅವಕಾಶ

೧೧. ಬಾ ಬಾಲೆ ಶಾಲೆಗೆ

೧೨. ಮೀಸಲಾತಿ

ಈ ಮೇಲ್ಕಂಡ ಸೌಲಭ್ಯಗಳನ್ನು ಸ್ತ್ರೀಯರ ಶೈಕ್ಷಣಿಕ ಅಭಿವೃದ್ದಿಗೆ ಹಮ್ಮಿಕೊಂಡಿರುವುದಲ್ಲದೇ ಇದಕ್ಕೆ ಪೂರಕವಾದ ಅಂಗನವಾಡಿ, ಶಿಶುಪಾಲನಾ ಕೇಂದ್ರಗಳ ಸೌಲಭ್ಯ, ಸಮಗ್ರ ಶಿಶು ಅಭಿವೃದ್ದಿ ಯೋಜನೆ ಮುಂತಾದುವುಗಳಿದ್ದು; ಇತ್ತೀಚೆಗೆ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿ ವಿಸ್ತರಣೆ ಮತ್ತು ಪದವಿ ಪೂರ್ವದ ಶಿಕ್ಷಡವರೆಗೆ ಮಹಿಳೆಚುರಿಗೆ ಉಚಿತ ಶಿಕ್ಷಣ ನೀಡುವ ಯೋಜನೆಯನ್ನು

ಮಾಡಿದ್ದು; ಅವು ಮುಂದೆದೆ ಜಾರಿಯಲ್ಲಿ ಬರಬಹುದು. ಹೀಗೆ ಕರ್ನಾಟಕ ಸರ್ಕಾರ ಮಹಿಳೆಯರಿಗಾಗಿ ವಿವಿಧ ಶೈಕ್ಷಣಿಕ ಸೌಲಭ್ಯಗಳನ್ನು ಮಹಿಳಾ ಶಿಕ್ಷಣ ಪ್ರಗತಿಯತ್ತ ಸಾಗಿರುವುದನ್ನು ಕಾಣಬಹುದು.

ಈ ಮೇಲಿನಂತೆ, ನಮ್ಮ ರಾಜ್ಯದಲ್ಲಿ ಪ್ರಸ್ತುತವಾಗಿ ಶೈಕ್ಷಣಿಕ ರಂಗದಲ್ಲಿ ಹೊಸ ಯೋಜನೆಗಳು ಹಾಗೂ ಕಾರ್ಯಕ್ರಮಗಳ ಅನುಷ್ಠಾನಗಳ ಮೂಲಕ ಪ್ರತಿಯೊಂದು ಜಿಲ್ಲೆ, ತಾಲೋಕ್, ಗ್ರಾಮಶಾಲೆಗಳವರೆಗೂ ಪಸರಿಸಿ ಪ್ರತಿಯೊಬ್ಬ ಮಹಿಳೆ ಸುಕ್ಷಿತರಾಗಲು ಸಾಧ್ಯವಾಗುತ್ತಿದೆ. ಇಂತಹ ಸೌಲಭ್ಯಗಳನ್ನು ತಿಳಿದುಕೊಂಡು ಮಹಿಳೆಯರುಶಿಕ್ಷಣವನ್ನು ಪಡೆದುಕೊಳ್ಳುವಲ್ಲಿ ಯಶಸ್ವಿಯಾದರೆ ಈ ಲಿಂಗತಾರಮ್ಯತೆಯಿಂದ ಹಾಗೂ ಸೌಲಭ್ಯ ವಂಚಿತಗಳಿಂದ ಹೆಣ್ಣು ಮುಕ್ತಳಾಗಿ ಪುರುಷನಂತೆಯೇ ಎಲ್ಲಾ ರಂಗಗಳಲ್ಲಿ ಮುಂದೆ ಬರಲು ಸಾಧ್ಯವಾಗುತ್ತದೆ.

**ತರಬೇತಿ**

ತರಬೇತಿಯು ಶಿಕ್ಷಣ ಕಾರ್ಯಕ್ರಮದ ಮೂಲ ಉದ್ದೇಶವನ್ನು ಅವಲಂಬಿಸಿದೆ. ನಮ್ಮ ದೇಶವು ಕಳೆದ ಐವತ್ತು ವರ್ಷಗಳಿಂದಾಚೆಗೆ (೧೯೫೧) ಸ್ವತಂತ್ರವಾಗಿ ಆಧುನಿಕ ಆರ್ಥಿಕಾಭಿವೃದ್ಧಿ ಕೈಗೊಂಡಿದೆ. ಹೀಗಾಗಿ ಭಾರವು ಒಂದು ಅಲ್ಪದಾಯದ, ಅಧಿಕ ಜನಸಂಖ್ಯೆಯ ಮಂದಗತಿಯಲ್ಲಿ ಆಧುನೀಕರಣದಿಂದ ಕೂಡಿದೆ. ಅದ್ದರಿಂದ ಭಾರತೀಯ ಸಮಾಜಿಕ ವ್ಯವಸ್ಥೆಯು ಇನ್ನೂ ಅವೈಚಾರಿಕ ಸಂಪ್ರದಾಯಗಳ, ಕುರುಡು ನಂಬಿಕೆಗಳ, ಪುರುಷ ಪೂರ್ವಾಗ್ರಹಗಳಿಂದ ಪೂರ್ಣವಾಗಿ ಮುಕ್ತಗೊಂಡಿಲ್ಲ.

ಭಾರತವು ಅಪೂರ್ಣ ವೃದ್ದ ಆರ್ಥಿಕವಾಗಿ ಮತ್ತು ಸಾಮಜ್ಜಿಕವಾಗಿ ಹಿಂದುಳಿದ ರಾಷ್ಟ್ರವಾಗಿದೆ. ಮೇಲ್ಕಂಡ ಒಟ್ಟು ಅಪೂರ್ಣಭಿವೃದ್ದಿ ಸಂಧರ್ಭದಲ್ಲಿ ಭಾರತೀಯ ಮಹಿಳೆಚುರ ಸಮಾನತೆ ಹೋರಾಟದ ಪ್ರಶ್ನೆಗಲನ್ನು ನೋಡಬೇಕು. ಶಿಕ್ಷಣ ಹಾಗೂ ತರಬೇತಿಗಳಲ್ಲೂ ಸಹ ಅವಳಿಗೆ ಆಗುತ್ತಿರುವ ತಾರತಮ್ಯತೆಯಿಂದಾಗಿ ಇಂದು ಅವಳು ಉದ್ಯೋಗ ಅವಕಾಶಗಳಂತಹಲ್ಲಿ ಪುರುಷನಷ್ಟು ಪರಿಪೂರ್ಣವಾಗಿ ಪಡೆದುಕೊಳ್ಳುವಲ್ಲಿ ಹಿಂದೆ ಬೀಳುತ್ತಿದ್ದಾಳೆ.

ಆದರೂ ಸಹ ನಮ್ಮ ದೇಶದಲ್ಲಿ ಬ್ರಿಟೀಷರ ಆಡಳಿತ ಕಾಲದಿಂದಲೂ ಜಾರಿಗೊಂಡ ಆಡಳಿತ ಸುಧಾರಣೆಗಳು, ಶಿಕ್ಷಣ ಕ್ರಮಗಳು; ರಾಜಾರಂ ಮೋಹನರಾಯ್, ಸ್ವಾಮಿ ವಿವೇಕಾನಂದ, ದಯಾನಂದ ಸರಸ್ವತಿ, ಮಹಾತ್ಮ ಗಾಂಧಿ, ಪಂಡಿತ ನೆಹರು, ಡಾ. ಬಿ.ಆರ್. ಅಂಬೇಡ್ಕರ್ ಮುಂತಾದ ರಾಷ್ಟ್ರೀಯ ರಾಜಕೀಯ, ಸಮಾಜ ಸ್ಮಧಾರಣಾ, ಸಾಂಸ್ಕೃತಿಕ ನಾಯಕರ ಚಿಂತನೆಗಳ ಹಾಗೂ ಪ್ರಯತ್ನಗಲ ಫಲಬ್ವಾಗಿ ಮಹಿಳಾ ಶಿಕ್ಷಣದ ಅಗತ್ಯದ ಜೊತೆಗೆ ಜೆವನದಲ್ಲಿ ಸಬಲಳಾಗುವ ಉದ್ದೇಶದಿಂದ ಉದ್ಯೋಗ ಪಡೆದುಕೊಳ್ಳುವ ಹಿನ್ನೆಲೆಚುಲ್ಲಿ ತರಬೇತಿಗಳಿಗೂ ಹೆಚ್ಚ್ಚು ಮಹತ್ವ ನೀಡಲಾಯಿತು.

ಮಹಾತ್ಮ ಗಾಂಧೀಜಿಯವರು ತಮ್ಮ ಸುಧಾರಣಾ ಕಾರ್ಯಕ್ರಮಗಳಲ್ಲಿ ಮಹಿಳಾ ವೃತ್ತಿ ತರಬೇತಿಗಳಿಗೂ ಹೆಚ್ಚಿನ ಆದ್ಯತೆ ನೀಡಿದ್ದರೆಂದು ತಿಳಿದು ಬರುತ್ತದೆ. ಉದಾ: ಅವರು ನೇಯುತ್ತಿದ್ದ ಬಟ್ಟೆಯ ನೂಲು (ದಾರ) ನ್ನು ಅಂದಿನ ಬಡತನದಲ್ಲಿರುವ ಮಹಿಳೆಯರಿಗೂ ಹಾಗೂ ಉದ್ಯೋಗ ಅರಸಿಕೊಂಡು ಬರುವ ಮಹಿಳೆಯರಿಗೂ ವೃತಿಕಔಶಲ್ಯತೆಯನ್ನಾಗಿ ಒದಗಿಸಿಕೊಟ್ಟು ಬಟ್ಟೆ ನೇಯುವ ತರಬೇತಿಯನ್ನು ನೀಡುವುದರ ಜೊತೆಗೆ ಅವರಿಗೆ ಉದ್ಯೋಗ ಕಂಡುಕೊಳ್ಳುವಲ್ಲಿ ಸಹಾಯಕರಾಗುತ್ತಿದ್ದು, ಸಂಧರ್ಭಗಳು ನಮ್ಮೆಲ್ಲರಿಊ ತಿಳಿದ ವಿಚಾರವೇ ಸರಿ.

ಅಂದಿನ ಬ್ರಿಟೀಷರ ಕಾಲಕ್ಕೆ ೧೮೪೦ರ ದಶಕದಲ್ಲಿ ಅವಿವಾಹಿತ ಸನ್ಯಾಸಿನಿ ಮಿಷನರಿ ಮಹಿಳೆಯರುವಿದ್ಯಾವಂತೆಯರಾಗಿದ್ದು ತಮಗೆ ವಹಿಸಿದ್ದು ಕಾರ್ಯನಿರ್ವಹಣೆಯಲ್ಲಿ ತಾವೆಷ್ಟು ನಿಪುಣರೆಂಬುದನ್ನು ಸಾಬೀತುಪಡಿಸುವ ಉತ್ಸಾಹವನ್ನು ತುಂಬಿಕೊಂಡಿದ್ದರು. ಪ್ರೌಢ ವಿವಾಹಿತ ಭಾರತೀಯ ಮಹಿಳೆಯರನ್ನು ಕ್ರಿಸ್ಚಿಚುನ್ ಜಾತಿಗೆ ಪರಿವರ್ತಿಸುವ ಕೆಲಸದಲ್ಲಿ ಮಗ್ನರಾಗಿದ್ದಾರೆ. ಅಲ್ಲದೇ ಭಾರತೀಯ ಮನೆಗಲಲ್ಲಿ ಶಿಕ್ಷಕಿಯರಾಗಿ ಪ್ರವೇಶ ಪಡೆದರು. ಕತೆಗಳನ್ನು ಹೇಳುವುದು, ಕಸೂತಿ ಕಲಿಸುವುದು ಅವುಗಳ ಜೊತೆಗೆ ಕ್ರಿಸ್ತನ ಉಪದೇಶಗಳನ್ನು ಬಿತ್ತಲು ಯತ್ನಿಸುತ್ತಿದ್ದರು. ಆದರೂ ಕ್ರೈಸ್ತರಾಗಿ ಪರಿವರ್ತನಿಗಾಗುವವರು ಅಷ್ಟಾಗಿಯೇನು ಅವರಿಗೆ ಸಿಗುತ್ತಿರಲಿಲ್ಲ. ಆ ಅಂತ:ಪುರ ಪ್ರವೇಶದ ಉಪಾಯ ಅಷ್ಟೇನು ಪಲದಾಯಕವಾಗಲಿಲ್ಲ ಎಂಬುದನ್ನು ಮನಗಂಡು ಮಿಷನರಿಗಳು ಆಮೇಲಾಮೇಲೆ ಬಾಲಕಿಯರ ಶಾಲೆಗಳನ್ನು ಲಾಭದಾಯಕವಿರಬಹುದೆಂದು ಯೋಜನೆ ಮಿಷನರಿ ಮಹಿಳೆಚುರೇ ಅಧ್ಯಾಪಕಿಯರಾಗಿ ಮುಂದೇ ಈ ಶಾಲೆಗಳಲ್ಲಿ ಶಿಕ್ಷಕಿಯರ ತರಬೇತು ಪಡೆದು ಕೊಂಡು

ಈ ಶಾಲೆಗಳಲ್ಲಿಯೇ ಭಾರತದ ಮಹಿಳೆಯರುಅವರ ಜವಾಬ್ದಾರಿಯನ್ನು ವಹಿಸಿಕೊಂಡು ಬಾಲಕಿಯರ ಶಾಲೆಗಳಲ್ಲಿ ಅಧ್ಯಾಪಕಿಯರಾದರು.

ಈ ರೀತಿ ಉದ್ಯೋಗ ತರಬೇತಿಗಳು ಒಂದೇ ಸಾರಿ ಮುಕ್ತಾಯಗೊಳ್ಳುವುದಿಲ್ಲ. ಅದು ಸದಾ ಮುಂದುವರಿಯುವ ವಿಧಾನ. ಉದ್ಯೋಗ ಪೂರ್ವ, ಉದ್ಯೋಗ ಸಹಿತ ಆಗಾಗ್ಗೆ ತರಬೇತಿ ಕಾರ್ಯಕ್ರಮಗಳು ಏರ್ಪಡಿಸುತ್ತವೆ. ತರಬೇತಿ ಶಿಬಿರ ಒಂದು ಪುಟ್ಟ ಸಮಾಜದಂತೆ , ಕಲಿಯುವವರು ಕಲಿಸುವವರು ಜತೆಗೂಡುತ್ತಾರೆ.

ಮೇಲ್ಪಟ್ಟದವರು, ಕೆಳಮಟ್ಟದವರು ಎಂಬ ಗುಂಪುಗಳು ಹುಟ್ಟಿಕೊಳ್ಳಬಹುದು. ಅನೇಕ ವಿವಾದಾತ್ಮಕ ವಿಷಯಗಳ ಬಗ್ಗೆ ಭಿನ್ನಾಭಿಪ್ರಾಯಗಳನ್ನು ತಾಳಿ ಅವರಲ್ಲಿಯೇ ೨ ಪಂಗಡಗಳು ಹುಟ್ಟಿಕೊಳ್ಳಬಹುದು. ಇಂತಹ ಸನ್ನಿವೇಶದಲ್ಲಿ ಶಿಕ್ಷಣದ ಉದ್ದೇಶ ಸಾರ್ಥಕವಾಗುವುದಿಲ್ಲ. ಆದ್ದರಿಂದ ಶಿಕ್ಷಣಾರ್ಥಿಗಳು ಸಮಾನ ಭಾವನೆಚುನ್ನು ಬೆಳೆಸಿಕೊಳ್ಳಬೇಕು. ಅಭಿಪ್ರಾಯಗಳನ್ನು ಪ್ರಾಮಾಣಿಕವಾಗಿ, ಸ್ವತಂತ್ರವಾಗಿ ವಿನಿಮಯ ಮಾಡಿಕೊಳ್ಳಬೇಕಲ್ಲದೆ ಪರಸ್ಪರ ದೃಷ್ಟಿ ಭೇಧಗಳನ್ನು ಗೌರವಿಸಬೇಕು. ತಾವೆಲ್ಲರೂ ಒಂದೇ ಸಾಮಾನ್ಯವಾದ ತತ್ವಕ್ಕೋಸ್ಕರ ಶ್ರಮಿಸುತ್ತಿರುವೆಯೆಂಬ ಅಭಿಪ್ರಾಯವನ್ನು ತಳೆದಿದ್ದರೆ ಮಾತ್ರ ತರಬೇತಿ ಶಿಬಿರಗಳು ಯಶಸ್ವಿಯಾಗಬಲ್ಲವು.

ಅಧಿಕಾರಿಯಲ್ಲದ ಸೇವಾ ತಂಡವನ್ನು ತರಬೇತಿ ಮಾಡುವಾಗ ಶಿಕ್ಷಿತ ವರ್ಗದವರೂ ಸೇವಾ ಮನೋಭಾವನವನ್ನು ತಳೆದಿರಬೇಕು. ಅಧಿಕಾರಿ ರೀತಿ ನೀತಿಗಳು ಎಂದೂ ಸಲ್ಲವು. ಅವರು ಬಳಸುವ ದೃಷ್ಟಿ, ವಿಧಾನ, ತಂತ್ರ, ತರಬೇತಿ ಕಲಿಕೆಗಳಲ್ಲಿ ಮತ್ತು ತಂತ್ರಗಳು ಆಚೂ ಜನಜೀವನ ಮತ್ತು ಸಂಸ್ಸ್ರತಿಯನ್ನು ಅವಲಂಬಿಸಿರುತ್ತದೆ. ಸ್ಥಳದಿಂದ ಸ್ಥಳಕ್ಕೆ ಅವು ಬೇರೆಯಾಗಿರಬಹುದು. ಒಂದು ಸ್ಥಳದಲ್ಲಿ ಯಶಸ್ವಿಯಾಗಿ ಕೆಲಸ ಮಾಡಬಲ್ಲರು ಮತ್ತೊಂದು ಸ್ಥಳದಲ್ಲಿ ಅಥವಾ ಸನ್ನಿವೇಶದಲ್ಲಿ ಕೆಲಸ ಮಾಡಲು ಅಸಮರ್ಥರಾಗಿರಬಹುದು. ಆದ್ದರಿಂದ ಎಲ್ಲಾ ಸನ್ನಿವೇಶಗಲಲ್ಲಿ ಅನುಸರಿಸಭುದಾದ ಸಾಮಾನ್ಯ ತತ್ವಗಳ ಪರಿಚಯ ಶಿಕ್ಷಕರಿಗೆ ಇರಬೇಕಾಗುತ್ತದೆ.

ವಿಷಯ ಪ್ರತಿಪಾದನೆ, ಪರಸ್ಪರ ಅರ್ಥಮಾಡಿಕೊಳ್ಳಲು ತಿಳಿದದ್ದನ್ನು ಸುಲಭವಾಗಿ ಇನ್ನೊಬ್ಬರಿಗೆ ತಿಳಿಸಲು ಅತಿ ಸರಳ ಮಾರ್ಗವೇನೆಂದರೆ ಸಂಭಾಷಾಣೆ ಯೊಂದೆ. ಮಹಿಳೆಯರಿಗೆ, ಮಕ್ಕಳಿಗೆ, ವಯಸ್ಸರಿಗೆ ಪಾಠಗಳನ್ನು ಬರೆಯುವುದು, ಸಮಾಚಾರ ಹಾಳೆಗಳನ್ನು ಸಿಧ್ಧಪಡಿಸುವುದು,

ರೇಡಿಯೋ ಗೋಷ್ಠಿಗಳನ್ನು ನಡೆಸಬಹುದು. ಅಲ್ಪಾವಧಿ ಸಮೀಕ್ಷೆಗಳು ಇಂತಹ ಸಂಧರ್ಭಗಳಿಗೆಲ್ಲಾ ಸಂಭಾಷಣೆ ಅತಿ ಉಪಯುಕ್ತ ತಂತ್ರವಾಗಿದೆ.

ಆದರೆ ಈ ಎಲ್ಲಕ್ಕೂ ಮೊದಲು ಶಿಕ್ಷಣಾರ್ಥಿಗಳು ಎಲ್ಲಕ್ಕೂ ಮೊದಲು ತಮ್ಮ ಜಾಞನ ವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನ ಮಾಡಬೇಕು. ಜ್ಞಾನಾರ್ಜನೆ ಜೀವನದ ಉದ್ದಕ್ಕೂ ಬೆಳೆದುಬರುವ ನಿರಂತರ ವಿಧಾನ. ಅವರು ಪ್ರಶ್ನೆಗಳನ್ನು ಕೇಳಿ ತಿಳಿದು ನಾನು ಸೇವೆ ಸಲ್ಲಿಸಲು ಹೊರಟಿರುವ ಜನರ ಮೂಲಭೂತ ಶಕ್ತಿ ಸಾಮರ್ಥ್ಯಗಳಲ್ಲಿ ನನಗೆ ನಂಬಿಕೆ ಇದೆಯೇ?

ವಂಶ, ಲಿಂಗ, ಜಾತಿ, ಪಂಗಡಗಳ ವಿಂಗಡಣೆ ಇಲ್ಲದ ಸಮಾನತೆ ಮತ್ತು ಸಾಮಾಜಿಕ ನ್ಯಾಯದಲ್ಲಿ ನನಗೆ ನಂಬಿಕೆಯಿದೆಯೇ. ನಾನು ಅನುಭವಿಸುತಿದ್ದು, ಇತರರು ವಂಚಿತರಾಗಿರುವ ಸಾಮಾಜಿಕ ಆರ್ಥಿಕ ಲಾಭಗಳ ಬಗ್ಗೆ ಅರಿವಿದೆಯೇ? ಎಲ್ಲರ ಹಿತಕ್ಕಾಗಿ ನಾನು ಅನುಭವಿಸುತ್ತಿರುವ ಕೆಲವು ಸೌಲಭ್ಯಗಲನ್ನು ತ್ಯಾಗ ಮಾಡಲು ಸಿಧ್ಧನಿದ್ದೇನೆಯೇ?

ವಯಸ್ಕ ಶಿಕ್ಷಣ ತತ್ವ ಹಾಗೂ ಪಾಠ ಭೋಧನೆ, ಮತ್ತು ಆದರ್ಶಗಳಿಗೆ ನಾನು, ಬಧ್ಧನಾಗಿದ್ದೇನೆಯೇ ಅಥವಾ ನಾನು ಒಂದು ವೃತ್ತಿಗಾಗಿ ಸಂಪಾದನೆಗಾಗಿ ಇರುತ್ತೇನೆಯೇ? ಇತ್ಯಾದಿ

**ಮಹಿಳಾ ಶಿಕ್ಷಣ ಹಾಗೂ ತರಬೇತಿಗಳ ಸುಧಾರಣೆ ಶಿಫಾರಸು ಅಥವಾ ಸಲಹೆಗಳು:-**

ಬಹುಮಂದಿ ಮಹಿಳೆಯರುಪೌಷ್ಠಿಕ ಆಹಾರದ ಕೊರತೆಯಿಂದ ನರಳುವರು ಮತ್ತು ಸುಮಾರು ಮೂರರಲ್ಲಿ ಎರಡು ಭಾಗ ಮಹಿಳೆಯರುಹೆಚ್ಚಾಗಿ ರಕ್ತಹೀನತೆ, ದೇಹದೌರ್ಬಲ್ಯಗಳಿಂದ ಕೂಡಿದ್ದು, ಸಾಕಷ್ಟು ಅಂತರವಿಲ್ಲದ ಗರ್ಭಧರಿಸುವಿಕೆ, ಬಾಣಂತನದಿಂದ ಹೆಚ್ಚು ಮಂದಿ ಮಹಿಳೆಯರು ಸಾವಿಗೆ ತುತ್ತಾಗುತ್ತಿರುವರಲ್ಲದೆ, ಹೆಣ್ಣುಮಕ್ಕಳ ಶಿಶುಮರಣದ ಪ್ರಮಾಣ ಹೆಚ್ಚುತ್ತಿರುವುದನ್ನು ತಪ್ಪಿಸಲು ಮತ್ತು ಪ್ರಾಥಮಿಕ ಶಿಕ್ಷಣದ ಪ್ರವೇಶದಲ್ಲಿ ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳ ಸಂಖ್ಯೆ ಕಡಿಮೆಯಿರುವುದನ್ನು ಹೋಗಲಾಡಿಸಲು ಈಗಾಗಲೇ ಜಾರಿಯಲ್ಲಿರುವ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯನ್ನು ಇನ್ನೂ ವಿಸ್ತರಿಸಿ ಅದನ್ನು ಕಡ್ಡಾಯವಾಗಿ ವ್ಯವಸ್ಥಿತ ರೀತಿಯಲ್ಲಿ ಕಾರ್ಯಗತಗೊಳಿಸುವಲ್ಲಿ ಕಠಿಣ ಕ್ರಮಗಳನ್ನು ತೆಗೆದುಕೊಂಡು ಮಹಿಳೆ ಮತ್ತು ಮಕ್ಕಳ ಆರೋಗ್ಯ ಹಾಗೂ ಶಿಶುಶಿಕ್ಷಣಕ್ಕೆ ಹೆಚ್ಚಿನ ಪ್ರಾಧಾನ್ಯತೆ ಕೊಡಬೇಕು.

ಪ್ರೌಢ ಶಾಲಾ ಹಂತದಲ್ಲಾಗಿರಬಹುದು ಅಥವಾ ಪ್ರಾಥಮಿಕ ಶಾಲಾ ಹಂತದಲ್ಲಾಗಿರಬಹುದು. ಅಲ್ಲಿರುವ ಐಚ್ಛಿಕ ವಿಷಯಗಳಾದ ಗಣಿತ, ವಿಜ್ಞಾನ, ಸಮಾಜ, ವಿಜ್ಞಾನಗಳ ಜೊತೆ ಮಹಿಳೆಯರಿಗೆ ಒಲವಿರುವ ಹೊಲಿಗೆ ತರಬೇತಿ, ಪಾಕಶಾಸ್ತ್ರ, ಸಂಗೀತಶಾಸ್ತ್ರ, ಅಲಂಕಾರಶಾಸ್ತ್ರ, ಲಲಿತಕಲೆಗಳ ವಿಜ್ಞಾನ, ಕಸೂತಿ ಕಲೆ, ಕಂಪ್ಯೂಟರ್ ತರಬೇತಿ, ಗೃಹವಿಜ್ಞಾನ, ಗೃಹ ಉಪಕರಣಗಳ ತರಬೇತಿ ಮತ್ತು ರಿಪೇರಿ ಕಲೆ ಮುಂತಾದ ಪ್ರಸ್ತುತ ಸಮಾಜಕ್ಕೆ ಅಗತ್ಯವಿರುವ ಐಚ್ಛಿಕ ವಿಷಯಗಳನ್ನು ಸೇರ್ಪಡಿಸಿ ಅವರ ಆಯ್ಕೆಗೆ ಅವಕಾಶ ಕಲ್ಪಿಸಿ ಸೂಕ್ತ ತರಬೇತಿ ನೀಡಿ ಸಶಕ್ತರನ್ನಾಗಿ ಮಾಡಬೇಕು.

ಆಧುನಿಕ ಶಿಕ್ಷಣ ವ್ಯವಸ್ಥೆ ಸಂಕೀರ್ಣಗೊಳ್ಳುತ್ತಿದ್ದು, ಮಹಿಳೆಯರಲ್ಲಿ ಕಾಲೇಜು ಉನ್ನತ ಶಿಕ್ಷಣದ ಕಲಾ ವಿಭಾಗದಲ್ಲಿ ಹೆಚ್ಚಿನ ವಿದ್ಯಾರ್ಥಿನಿಯರು ಅಭ್ಯಸಿಸುತ್ತಿದ್ದು, ವಿಜ್ಞಾನ, ವಾಣಿಜ್ಯ ಇತರೆ ವಿಭಾಗಗಳಲ್ಲಿ ಕಡಿಮೆಯಿರುವುದು ಸಾಮಾನ್ಯ ಸಂಗತಿ, ಇದಕ್ಕೆ ಕಾರಣ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಪದವಿ ಕಾಲೇಜುಗಳಲ್ಲಿ ಈಗಾಗಲೇ ಇರುವ ಅಲ್ಪ ಕಾಲೇಜುಗಳಲ್ಲಿ ಕಲೆ ಮತ್ತು ವಾಣಿಜ್ಯ ವಿಭಾಗಗಳಿದ್ದು, ವಿಜ್ಞಾನ ಇತರೆ ವಿಭಾಗಗಳಿಲ್ಲವಿರುವುದು ಇನ್ನು ಉನ್ನತ ಶಿಕ್ಷಣದ ಪರಿಪೂರ್ಣ ಸೌಲಭ್ಯದ ಕೊರತೆಯಿಂದಾಗಿ ಗ್ರಾಮೀನ ಮಹಿಳೆಯರುಹೆಚ್ಚಾಗಿ ಉನ್ನತ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಆದ್ದರಿಂದ ಮಹಿಳೆಯರ ಶಿಕ್ಷಣದ ಸಮಸ್ಯೆಗಳನ್ನು ಗಂಭೀರವಾಗಿ, ಕೂಲಂಕುಶವಾಗಿ ತಿಳಿದು ಅವರ ಅಗತ್ಯಕ್ಕೆ ತಕ್ಕಂತೆ ಶಿಕ್ಷಣ ಒದಗಿಸಲು ಮತ್ತು ಮಹಿಳೆಯರಿಗೆ ಸಾಮಾನ್ಯ ವಿಷಯಗಳ ಜೊತೆಗೆ ಅವರಿಗೆ ಒಲವಿರುವ ಸಂಗೀತ ಕಲೆ, ನೃತ್ಯಕಲೆ, ನಾಟಕ ಕಲೆ, ಚಿತ್ರಕಲೆ, ಗೃಹವಿಜ್ಞಾನ, ಪಾಕಶಾಸ್ತ್ರ, ಅಲಂಕಾರಶಾಸ್ತ್ರ ಮುಂತಾದವುಗಳಿಗೆ ಪ್ರತ್ಯೇಕ ವಿಜ್ಞಾನ ಪ್ರಾತ್ಯೇಕವಾಗಿ ನ್ನಲು, ಹೆಣ್ಣುಮಕ್ಕಳ ಶಿಕ್ಷಣವನ್ನು ಸುವ್ಯವಸ್ಥಿತವಾಗಿ ನಿರ್ವಹಿಸಲು ಶಿಕ್ಷಣಗಳನ್ನು ನೀಡಿ ಅವರ ಸಂಪೂರ್ಣ, ಅಂಚೆ ತೆರೆಪಿನ ಶಿಕ್ಷಣ, ಮುಕ್ತ ಶಿಕ್ಷಣಗಳನ್ನು ನೀಡಿ ಅವರ ಸಂಪೂರ್ಣ ಶೈಕ್ಷಣಿಕ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಈಗಾಗಲೇ ಉತ್ತರ ಕರ್ನಾಟಕದ ಕೇಂದ್ರ ಸ್ಥಳದಲ್ಲಿ ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಿರುವಂತೆ ದಕ್ಷಿಣ ಕರ್ನಾಟಕದ ಕೇಂದ್ರ ಸ್ಥಳದಲ್ಲಿ ಮತ್ತೊಂದು ವಿಶ್ವವಿದ್ಯಾಲಯ ಸ್ಥಾಪಿಸಿ ಅವರ ಶಿಕ್ಷಣದ ಅಭಿವೃದ್ಧಿ ಸುಗಮವಾಗುವಂತೆ ಮಾಡಬೇಕು.

- ಬಾಲಕ-ಬಾಲಕಿಯರ ಶಿಕ್ಷಣ ಕ್ರಮದಲ್ಲಿ ಲಿಂಗ ತಾರತಮ್ಯವನ್ನು ಹೋಗಲಾಡಿಸಲು ಬಾಲಕಿಯರಿಗೆ ಹೆಚ್ಚು ಪ್ರತ್ಯೇಕ ಶಾಲೆಗಳನ್ನು ಮತ್ತು ವಸತಿ ಶಾಲೆಗಳನ್ನು ತೆರೆಯಬೇಕು.

- ಸಹ ಶಿಕ್ಷಣ ಎಲ್ಲಾ ಹಂತಗಳಲ್ಲಿರಬೇಕು. ಅಲ್ಪಸ್ತ್ರೀಯರ ಸ್ಥಾನಮಾನ, ಘನತೆ, ಗೌರವಗಳಿಗೆ ಚ್ಯುತಿ ಬಾರದಂತೆ ಕ್ರಮಗಳನ್ನು ಕೈಗೊಳ್ಳುವುದರ ಜೊತೆಗೆ ವಿಶೇಷವಾಗಿ ಗ್ರಾಮೀಣ ಪ್ರದೇಶದ ಎಲ್ಲಾ ಸಹ ಶಿಕ್ಷಣ ಶಾಲೆಗಳಲ್ಲಿ ಕಡ್ಡಾಯವಾಗಿ ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯಗಳನ್ನು ನಿರ್ಮಿಸಬೇಕು.

- ಸ್ತ್ರೀಯರಲ್ಲಿ ಜಾಗೃತಿ ಮತ್ತು ಶಿಕ್ಷಣ ಪಡೆದು ಸಬಲಳಾಗಬೇಕೆಂಬ ಮನಸ್ಸನ್ನು ಸಿದ್ಧಗೊಳಿಸದೆ ಯೋಜನೆಗಳಿಂದ ಪ್ರಯೋಜನವಾಗುವುದಿಲ್ಲ. ಅಲ್ಲದೇ ಸ್ತ್ರೀಯರಿಗೆ ಸೂಕ್ತ ಶಿಕ್ಷಣ ಮತ್ತು ವೃತ್ತಿ ಮಾರ್ಗದರ್ಶನ ನೀಡುವ ಪ್ರತ್ಯೇಕವಾದ ಕೇಂದ್ರಗಳಿಲ್ಲದಿರುವುದರಿಂದ ಮಹಿಳೆಯರುಶಿಕ್ಷಣ ಮತ್ತು ಉದ್ಯೋಗದಿಂದ ವಂಚಿತರಾಗುತ್ತಿದ್ದಾರೆ. ಆದ್ದರಿಂದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಪ್ರತಿಯೊಂದು ಹೋಬಳಿ ಮಟ್ಟದಲ್ಲಿ ಅಥವಾ ಕನಿಷ್ಟ ಪಕ್ಷ ತಾಲೂಕು ಮಟ್ಟಾದಲ್ಲಾದರೂ ಮಹಿಳೆಯರಿಗೆ ಶಿಕ್ಷಣ ಮತ್ತು ವೃತ್ತಿ ಮಾರ್ಗದರ್ಶನದ ಕೇಂದ್ರಗಳನ್ನು ಸ್ಥಾಪಿಸಬೇಕು.

- ಸರ್ಕಾರಿ ಕೈಗಾರಿಕಾ ತರಭೇತಿ ಸಂಸ್ಥೆಗಳಲ್ಲಿ ಸಹಶಿಕ್ಷಣದ ಅವಕಾಶಾವಿದ್ದರೂ ಸಹ ಹೆಣ್ಣುಮಕ್ಕಳ ಸಂಖ್ಯೆ ಈ ತರಬೇತಿ ಸಂಸ್ಥೆಗಳಲ್ಲಿ ಬಹಳ ವಿರಳವಾಗಿರುವುದರಿಂದ ಮಹಿಳೆಯರಿಗೆ ವೃತ್ತಿ ಶಿಕ್ಷಣ ತರಬೇತಿ ನೀಡಿ ಸ್ವಾವಲಂಬಿಗಳನ್ನಾಗಿ ಬೆಳೆಸಲು ಸರ್ಕಾರಿ ಬಾಲಕಿಯ ವೃತ್ತಿ ತರಭೇತಿ ಸಂಸ್ಥೆಗಳನ್ನು ಪ್ರತಿಯೊಂದು ಹೋಬಳಿ ಮಟ್ಟದಲ್ಲಿ ಒಂದೊಂದು ಸಂಸ್ಥೆಯನ್ನು ಪ್ರಾರಂಭಿಸಬೇಕು.

- ಕೃಷಿ ವಿಶ್ವವಿದ್ಯಾಲಯಗಳು ಈಗಾಗಲೇ ಮಹಿಳೆಯರಿಗೆ ಕೆಲವೊಂದು ತರಬೇತಿಗಳನ್ನು ನೀಡುತ್ತದೆಯಾದರೂ ಜೇನು, ಕೋಳಿ, ಮೊಲ ಸಾಕಣಿಕೆ, ಹೈನುಗಾರಿಕೆ, ಹಣ್ಣುಗಳ ಸಂರಕ್ಷಣೆ, ಬೇಕರಿ ತರಭೇತಿ ಮುಂತಾದ ಇಂದಿನ ಸಮಾಜಕ್ಕೆ ಅಗತ್ಯವಿರುವ ವಿವಿಧ ಕೈಗಾರಿಕಾ ಮೂಲ ತರಬೇತಿಗಳಿಗೆ ಪ್ರತ್ಯೇಕ ವಿಭಾಗ ತೆರೆದಿಲ್ಲ. ಆದ್ದರಿಂದ ಪ್ರತ್ಯೇಕ ವಿಭಾಗವನ್ನು ತೆರೆದು ಶಾಲೆ ಬಿಟ್ಟ ಮಕ್ಕಳಿಗೆ ಮತ್ತು ಈಗಾಗಲೇ ತರಭೇತಿ ಪಡೆದ ಕ್ಷೇತ್ರದ ಬದಲು ಇನ್ನಿತರ ಕ್ಷೇತ್ರದಲ್ಲಿ ಉದ್ಯೋಗದಲ್ಲಿರುವ ಮಹಿಳೆಯರಿಗೆ ಅಗತ್ಯವಿರುವ ಅಲ್ಪಾವಧಿ ತರಬೇತಿಯನ್ನು ಅವರಿಗೆ ಅಗತ್ಯವೆನಿಸಿದಾಗ ಪಡೆಯುವ ಅವಕಾಶ ಕಲ್ಪಿಸುವಂತಾಗಬೇಕು.

- ಅಂಗವಿಕಲ ಹೆಣ್ಣುಮಕ್ಕಳಿಗೆ ಸಹ ಶಿಕ್ಷಣದಲ್ಲಿ ಅವಕಾಶ ಕಲ್ಪಿಸುವುದರ ಜೊತೆಗೆ ಅವರಿಗೆ ವಿಶೇಷ ಸೌಲಭ್ಯ ಒದಗಿಸಬೇಕು ಮತ್ತು ಹೆಚ್ಚು ಅಂಗವಿಕಲ ಮಹಿಳೆಯರಿರುವ ಕಡೆ ಅಥವಾ ತಾಲೂಕ್ ಮಟ್ಟದಲ್ಲೊಂದು ಪ್ರತ್ಯೇಕ ಅಂಗವಿಕಲ ಹೆಣ್ಣುಮಕ್ಕಳ ವಸತಿ ಶಾಲೆಗಳನ್ನು ತೆರೆಯಬೇಕು.
- ಹೆಣ್ಣುಮಕ್ಕಳು ಪ್ರೌಢಶಾಲಾ ಹಂತ ತಲುಪುವುದಕ್ಕಿಂತ ಮುಂಚೆ ಅಥವಾ ತಲುಪಿದ ನಂತರ ರುತುಮತಿಯಾಗುವ ಸ್ವಾಭಾವಿಕ ದೈಹಿಕ ಕ್ರಿಯೆಯನ್ನು ಹೊಂದಿರುವುದರಿಂದ ಮತ್ತು ಈ ಸಂದರ್ಭದಲ್ಲಿ ಪೂರ್ವತಾರುಣ್ಯದ ಸಮಸ್ಯೆಗಳನ್ನು ಎದುರಿಸುವುದರಿಂದ ಈ ಹಂತದಲ್ಲಿ ಅವರಿಗೆ ಸೂಕ್ತ ಮಾರ್ಗದರ್ಶನ ಮತ್ತು ಸಲಹೆ ಅಗತ್ಯ. ಇದು ದೊರಕ್ದೇ ಹೋದರೆ ಅವರು ಅನ್ಯೆಯಿಕ ಚಟುವಟಿಕೆಯಲ್ಲಿ ತೊಡಗಬಹುದು ಅಥವಾ ತಮ್ಮ ಸಮಸ್ಯೆಗಲನ್ನು ಸ್ವತಂತ್ರ್ಯವಾಗಿ ಹೇಳಿಕೊಳ್ಳದೇ ವೇದನೆಯನ್ನು ಅನುಭವಿಸುತ್ತಾರೆ. ಅಲ್ಲದೇ ಇಂದು ಏಡ್ಸ್ ಹೆಮ್ಮಾರಿಯಂತೆ ಆವರಿಸಿದೆ. ಆದ್ದರಿಂದ ಪ್ರೌಢಶಾಲಾ ಹಂತದಲ್ಲಿ ಆರೋಗ್ಯ ಮತ್ತು ಏಡ್ಸ್/ಲೈಂಗಿಕ ಶಿಕ್ಷಣಗಳನ್ನು ಪ್ರತ್ಯೇಕವಾಗಿ ನೀಡಬೇಕು.
- ದಲಿತ, ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಗ್ರಾಮೀಣ ಮಹಿಳೆಯರಿಗೆ ಹೆಚ್ಚಾಗಿ ಪ್ರತ್ಯೇಕ ಶೈಕ್ಷಣಿಕ ಸೌಲಭ್ಯ ಮತ್ತು ಪ್ರವೇಶಾವಕಾಶಗಳನ್ನು ಶಿಕ್ಷಣದ ಎಲ್ಲಾ ಹಂತಗಳಲ್ಲಿ ಕಡ್ಡಾಯವಾಗಿ ವಿಸ್ತರಿಸಿ ಅವರ ಶೈಕ್ಷಣಿಕ ಅಭಿವೃದ್ಧಿಯನ್ನು ಸಾಧಿಸುವಂತಾಗಬೇಕು.
- ಗ್ರಾಮೀಣ ಪ್ರದೇಶ ಮತ್ತು ಹಿಂದುಳಿದ ಜಿಲ್ಲೆಗಳಲ್ಲಿ ಅಗತ್ಯಕ್ಕೆ ತಕ್ಕಂತೆ ಮತ್ತು ನಿಯಮಿತ ಅಂತರದಲ್ಲಿ ಶಾಲೆಗಳನ್ನು ಪ್ರಾರಂಭಿಸಿಲ್ಲದ ಸ್ಥಳಗಳಲ್ಲಿ ಪ್ರಾರಂಭಿಸಬೇಕು. ಈ ಶಾಲೆಗಳಿಗೆ ಶಿಕ್ಷಕರು ಮತ್ತು ಉತ್ತಮ ಶೈಕ್ಷಣೀಕ ಸೌಲಭ್ಯಗಲನ್ನು ಕಡ್ಡಾಯವಾಗಿ ಒದಗಿಸಬೇಕು.
- ತಾಂತ್ರಿಕ ಮತ್ತು ಮಾಹಿತಿ ತಂತ್ರಜ್ಞಾನ ಶಿಕ್ಷಣಿಕದಲ್ಲಿ ಸ್ತ್ರೀಯರಿಗೆ ಅವಕಾಶ ಹೆಚ್ಚಾಗಿದ್ದರೂ ಸಹ ಇದು ಗ್ರಾಮೀಣ ಪ್ರದೇಶದ ಸ್ತ್ರೀಯರಿಗೆ ಇದು ತಲುಪಿಲ್ಲ. ಆದ್ದರಿಂದ ಅವರಿಗೆ ತಲುಪಿಸುವಲ್ಲಿ ಮತ್ತು ಸ್ತ್ರೀಯರಿಗೆ ಇನ್ನೂ ಹೆಚ್ಚಿನ ಅವಕಾಶ ಕಲ್ಪಿಸಲು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

- ಮಹಿಳೆಯರಲ್ಲಿ ಹೆಚ್ಚು ಮಂದಿ ಇಲಾಖೆಗಳ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುವಲ್ಲಿ ಸ್ತ್ರೀಯರು ವಿವಿಧ ಸಮಸ್ಯೆಗಳನ್ನು ಎದುರಿಸಲು ಸಾಧ್ಯವಿಲ್ಲವೆಂಬ ಭೀತಿಯಿದೆ. ಅರ್ಹತೆಯಿದ್ದರೂ ಸಹ ಅಧಿಕಾರವನ್ನು ವಹಿಸಿಕೊಳ್ಳುವಲ್ಲಿ ಹಿಂಜರಿಯುತ್ತಾರೆ ಮತ್ತು ಕೆಲವು ಮಹಿಳೆಯರುಅಧಿಕಾರವಹಿಸಿಕೊಂಡಾಗಲೂ (ಉದಾ: ಗ್ರಾಮಪಂಚಾಯಿತಿ ಅಧ್ಯಕ್ಷ) ಅವರು ಗಂಡ ಅಥವಾ ಸಂಬಂಧಿಕ ಪುರುಷ ಹೇಳಿದಂತೆ ಕೇಳುವ ಕೈಗೊಂಬೆಚುಾಗಿರುತ್ತಾರೆ. ಆದ್ದರಿಂದ ಅವರಲ್ಲಿ ಸ್ವತಂತ್ರವಾಗಿ ನಿರ್ಭಿತಿಯಿಂದ ನಾಯಕತ್ವ ನಿರ್ವಹಿಸುವಂತೆ ಮಾಡಲು ಶಿಕ್ಷಣದ ಜೊತೆಗೆ ಅಧಿಕಾರ ವಹಿಸಿಕೊಳ್ಳುವ ಪೂರ್ವದಲ್ಲಿ ನಾಯಕತ್ವದ ಅಲ್ಪಾವಧಿ ತರಭೇತಿಯನ್ನು ನೀಡಿ ಅವರಿಗೆ ವಿಶೇಷ ರಕ್ಷಣೆಯನ್ನು ಒದಗಿಸಬೇಕು ಮಹಿಳೆಯರಿಗೆ ವಕೀಲ, ಶಿಕ್ಷಕಿ, ಡಾಕ್ಟರ್, ವಿಜ್ಞಾನಿ, ಇಂಜಿನಿಯರ್, ಸಾಹಿತಿ, ರಾಜಕಾರಣಿ, ಪೋಲೀಸ್ ಇನ್ಸ್‌ಪೆಕ್ಟರ್ ಮುಂತಾದ ವೃತ್ತಿಗಳಲ್ಲಿ ಇನ್ನೂ ಹೆಚ್ಚಾಗಿ ಪುರುಷರ ಪ್ರಮಾಣಕ್ಕೆ ಸಮನಾಗಿ ಕಾರ್ಯನಿರ್ವಹಿಸುವ ಉತ್ಸಾಹ ಮತ್ತು ಸೂಕ್ತ ಸಾಮರ್ಥ್ಯವನ್ನು ಬೆಳೆಸಲು ಅರ್ಹತೆಯಿರುವ ಸ್ತ್ರೀಯರಿಗೆ ವಿಶೇಷ ತರಭೇತಿಯನ್ನು ನೀಡಬೇಕು. ವಿಶೇಷವಾಗಿ ಇಂದು ವಿಜ್ಞಾನ ಕ್ಷೇತ್ರದಲ್ಲಿ ಸ್ತ್ರೀಯರಿಗೆ ವಿಜ್ಞಾನಿಗಳಾಗುವ ಅವಕಾಶ ಕಲ್ಪಿಸಿ ಪುರುಷರಿಂದ ಯಾವುದೇ ಶೋಷನೆಯಾಗದಂತೆ ಕಠಿಣ ಕ್ರಮಗಳನ್ನು ಜಾರಿಗೊಳಿಸಿ ಮಹಿಳೆಯರುವಿಜ್ಞಾನಿಗಳಾಗುವಂತೆ ಪ್ರೋತ್ಸಾಹಿಸಬೇಕು.
- ಶಿಕ್ಷಣ ಪಡೆದ ಕೆಲವು ಸ್ತ್ರೀಯರಲ್ಲಿ ಸಹಜವಾಗಿ ಸಮಾಜ ಸೇವೆ ಮಾಡುವ ಮನೋಭಾವನೆ ಇದ್ದರೂ ಸಹ ಅವರು ಈ ಸಮಾಜದಲ್ಲಿ ಅಂಥ ಕಾರ್ಯದಲ್ಲಿ ಸ್ತ್ರೀ ಭಾಗವಹಿಸುವುದು ತುಂಬಾ ಕಷ್ಟ ಮತ್ತು ಸಮಾಜದಲ್ಲಿ ಅಂತವರಿಗೆ ಯಾವುದೇ ರಕ್ಷಣೆ ಇಲ್ಲದ ಕಾರಣ, ಸಂಪ್ರದಾಯದ ಬಿತಿಮುಷ್ಠಿಯಿಂದಾಗಿ ಇವರು ಸಾಮಾನ್ಯ ಜೀವನಕ್ಕೆ ಹೊಂದಿಕೊಳ್ಳುತ್ತಾರೆ. ಇದರಿಂದ ಸಮಾಜಕ್ಕೆ ಅವರಿಂದಾಗುವ ಸೇವೆ ಮತ್ತು ಸಮಾಜದ ಅಭಿವೃದ್ಧಿಗೆ ಧಕ್ಕೆಯುಂಟಾಗುತ್ತಿದೆ. ಆದ್ದರಿಂದ ಅಂತಹ ಮಹಿಳೆಯರಿಗೆ ಸೂಕ್ತ ರಕ್ಷಣೆ, ತರಭೇತಿ ನೀಡುವ ಒಂದು ಮಹಿಳಾ ಮಂಡಳಿಯನ್ನು ಶಿಕ್ಷಣ ಕ್ಷೇತ್ರಕ್ಕೆ ಹೊಂದಿಕೊಂಡಂತೆ ಪ್ರದೇಶಗಳನ್ನು ಗುರುತಿಸಿ, ಆಯಾ ಪ್ರದೇಶಗಳ ರಾಜ್ಯಗಳಲ್ಲಿ ಹೆಣ್ಣು ಮಕ್ಕಳಿಗೆ

ಸಂಬಂಧಿಸಿದಂತೆ ಅವರ ಶಿಕ್ಷಣಕ್ಕೆ, ಆರೋಗ್ಯಕ್ಕೆ ಹಾಗೂ ವೃತ್ತಿಗಳಿಗೆ ಸಂಬಂಧಿಸಿದಂತೆ ಪೂರ್ವ ಸಲಹಾ ಕೇಂದ್ರಗಳನ್ನು ಪ್ರಾರಂಭಿಸಿದರೆ ಹೆಣ್ಣುಮಕ್ಕಳಲ್ಲಿ ತಿಳುವಳಿಕೆಯ ಜಾಗೃತಿ ಕಾರ್ಯಕ್ರಮಗಳ ಅನುಷ್ಠಾನವನ್ನು ಸುಲಭವಾಗಿ ಮಾಡಬಹುದು ಅವುಗಳ ಸಂಕೀರ್ಣ ಏರ್ಪಡಿಸುವುದರಿಂದ ಎಲ್ಲಾ ಮಹಿಳೆಯರಿಗೂ ಮಹಿಳೆಯರ ದೈನಂದಿನ ಬದುಕಿನ ವಿಷಯಗಳತ್ತ ಅವರಲ್ಲಿ ತಿಳುವಳಿಕೆ ಮೂಡಿಸಲು ಸಹಾಯಕವಾಗುತ್ತದೆ ಎಂದು ಹೇಳಬಹುದು.

ಈ ರೀತಿಯಾಗಿ ಮಹಿಳೆಯರ ಶಿಕ್ಷಣ ಹಾಗೂ ತರಬೇತಿಗಳ ಬಗ್ಗೆ ಸ್ವಾತಂತ್ರ್ಯಕ್ಕಿಂತ ಮುಂಚಿನ ದಿನಗಳನ್ನು ಹಾಗೂ ಸ್ವಾತಂತ್ರ್ಯೋತ್ತರ ದಿವಸಗಳನ್ನು ನೋಡಿದಾಗ ಇತ್ತೀಚಿನ ದಿನಗಳಲ್ಲಿ ಹೆಚ್ಚು ಹೆಚ್ಚಾಗಿ ಮಹಿಳಾಪರ ಕಾರ್ಯಕ್ರಮಗಳು ಅನುಷ್ಠಾನಗೊಳ್ಳುತ್ತವೆ ಇಂತಹ ಕಾರ್ಯಚಟುವಟಿಕೆಯತ್ತ ಸರ್ಕಾರಗಳು ಸಹ ತೀವ್ರವಾದ ಕಾರ್ಯಯೋಜನೆಗಳನ್ನು ಜಾರಿಗೆ ತರುತ್ತಿದ್ದರೂ ಸಹ ಇನ್ನೂ ಹೆಚ್ಚಿನ ಮಟ್ಟದಲ್ಲಿ ಕಾರ್ಯಾಗಾರಗಳು, ಮಹಿಳಾಪರ ಚಟುವಟಿಕಾ ಅನುಷ್ಠಾನ, ತರಭೇತಿಗಳು ಯಶಸ್ವಿಯಾಗಿ ನಡೆಯಬೇಕಿದ್ದು ಸಂಪೂರ್ಣವಾಗಿ ಗ್ರಾಮೀಣದಿಂದ ಹಿಡಿದು ನಗರದ ಸ್ಲಂ, ಕೊಳಚೆ ವ್ಯಾಪ್ತಿಯಲ್ಲಿ ವಾಸಿಸುವ, ನಗರ ಜೀವನದ ಮಹಿಳೆಯರೆಲ್ಲರೂ ಸಹ ಪಾಲ್ಗೊಂಡು ಇಂತಹ ಕಾರ್ಯಚಟುವಟಿಕೆಗಳ ಫಲಾನುಭವಿಗಳಾಗಿ ಪ್ರತಿಯೊಬ್ಬ ಮಹಿಳೆ ಸಬಲಳಾಗಬೇಕಾಗಿರುವುದು ಅನಿವಾರ್ಯ ಹಾಗೂ ಅವಳ ಹಕ್ಕೆಂದು ಹೇಳಬಹುದು.

**ಸಾಮಾಜಿಕ ಒತ್ತಾಸೆ**

ನಮ್ಮ ಭಾರತೀಯ ಸಾಮಾಜಿಕ ವ್ಯವಸ್ಥೆಯು ಪುರುಷ ಪ್ರಧಾನವಾದದ್ದು. ಇಲ್ಲ ಪುರುಷರನ್ನೇಕೆ ಸ್ತ್ರೀಯರನ್ನು ಕುರಿತು ಮಾಡುವ ಕ್ರಿಯೆ ಚಿಂತನೆಗಳೆಲ್ಲ ಪುರುಷ ಪ್ರಧಾನ್ಯತೆಯ ಹಿನ್ನೆಲೆಯಲ್ಲಿ ಆಕಾರ ಪಡೆಯುತ್ತವೆ. ಹೆಣ್ಣನ್ನು ಎರಡನೆಯ ದರ್ಜೆಯ ಪ್ರಜೆಯನ್ನಾಗಿ ಪುರುಷ ಜನಾಂಗದ ಹಿತಕ್ಕೆ ಮಾನದಂಡವನ್ನಾಗಿಸಿಕೊಂಡಿದ್ದು, ಶಾಸನದಿಂದ ವಿಧಿತ, ಬೌದ್ಧಿಕ ಸಾಧನೆಯಲ್ಲ

ಕೀಳರಿಮೆ, ಆ ಮೂಲಕ ಹೆಂಗಸಿನ ವೃತ್ತಿಪರತೆ ಮತ್ತು ಬೌದ್ಧಿಕ ಮಹತ್ವವನ್ನು ಕುಂಠಿತಗೊಳಿಸುವ ಕ್ರಿಯೆ ಮುನ್ನಡೆದು ಬಂದಿದೆ.

ಈ ನಮ್ಮ ವ್ಯವಸ್ಥೆಯು ಮಹಿಳೆಯರನ್ನು ಮೂಲೆಗುಂಪು ಮಾಡುತ್ತಿದ್ದು ಹೆಸರಿಗೆ ಮಾತ್ರ ಪ್ರೋತ್ಸಾಹದ ಕೆಲವೊಂದು ಕಾರ್ಯಕ್ರಮಗಳನ್ನು ಹಾಗೂ ಅವಳಿಗೆ ಸಂಬಂಧಿಸಿದ ಅಭಿವೃದ್ಧಿ ಕೆಲಸಗಳನ್ನು ಕಾಣಬಹುದು. ಆದರೆ, ಈ ವ್ಯವಸ್ಥೆ ಇಂದಿನದೆಲ್ಲ ಹೆಣ್ಣು ಮನೆತನದ ಪ್ರತಿಷ್ಠೆಯ ಸಂಕೇತ. ಆದ್ದರಿಂದ ಅವಳು ಮನೆಯ ನಾಲ್ಕು ಗೋಡೆಗಳ ಮಧ್ಯೆ ರಕ್ಷಣೆ ಪಡೆದುಕೊಂಡಿರಬೇಕು. ಹೊರಗೆ ಬಂದರೆ ಅಪ್ಪ ಮರ್ಯಾದೆಗೆ ಚ್ಯುತಿ. ಸಾರ್ವಜನಿಕವಾಗಿ ಕುಲೀನ ಸ್ತ್ರೀಯೊಬ್ಬಳ ಹೆಸರು ಯಾವುದೇ ಕಾರಣಕ್ಕೂ ಚರ್ಚೆಗೆ ಬರಬಾರದು. ಹೀಗೆ ಯಾವ ಯಾವುದೋ ಕಾರಣಕ್ಕೆ ಮನೆತನಸ್ಥ ಸ್ತ್ರೀಯೊಬ್ಬಳು ಸ್ವಂತ ಹೊರ ಬರುವದಿರು ಅವಳ ಹೆಸರು ಕೂಡ ಹೊರ ಬರಬಾರದು ಎಂಬ ನಂಬಿಕೆಗಾಗಿ ಇವತ್ತಿಗೂ ಸ್ತ್ರೀಯರಿಗೆ ಸ್ವತಂತ್ರ ಅಸ್ತಿತ್ವವಿಲ್ಲಾ. ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ, ಹೆಣ್ಣಾಗಿ ಹುಟ್ಟುವುದಕ್ಕಿಂತ ಮಣ್ಣಾಗಿ ಹುಟ್ಟುವುದು ಲೇಸು, ನಾರಿ ನರಕಕ್ಕೆ ದಾರಿ, ಇಂಥಹ ಹತ್ತಾರು ಗಾದೆ ಮಾತುಗಳು, ಜಾಣ್ಣುಡಿಗಳು, ಕರ್ನಾಟಕದಲ್ಲಿ ಅಷ್ಟೇ ಅಲ್ಲ ಎಲ್ಲ ರಾಜ್ಯಗಳಲ್ಲಿ ಅವರವರ ಭಾಷೆಗಲಲ್ಲಿ ಪ್ರಚಲಿತದಲ್ಲಿವೆ ಪಹಲಿ ಬೇಟಿ ನಸೀಬಿ ಖೊಟ್ಟಿ, ಔರತ್ ಪೈದಾಯಿಸಿ ಗಲತ್, ಇಂತಹ ಹತ್ತಾರು ಉಕ್ತಿಗಳು ಸಮ್ಮೇಳನದ ಚರ್ಚೆಗಳಲ್ಲಿ ಪಟ್ಟಿಮಾಡಿ ಅವುಗಳ ಹಿಂದಿರುವ ಮನೋಭಾವವನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ.

ಇವತ್ತಿಗೂ ಕೂಡ ಹೆಣ್ಣು ಮಗುವಿನ ಲಾಲನೆ-ಪೋಷಣೆಯಲ್ಲಿ ಇವತ್ತಿಗೂ ಎಲ್ಲ ಸಮುದಾಯಗಳಲ್ಲಿ ದೊಡ್ಡ ಪ್ರಮಾಣದಲ್ಲಿ ತಾರತಮ್ಯ ಕಂಡು ಬರುತ್ತದೆ. ಹೆಣ್ಣು ಮಗುವಿಗೆ ಪೌಷ್ಟಿಕ ಆಹಾರ ದೊರೆಯುವುದಿಲ್ಲ. ಎಷ್ಟೋ ಸಲ ಹೊಟ್ಟೆ ತುಂಬ ಅನ್ನ, ಮೈ ತುಂಬ ಅರಿವೆ, ಒಳ್ಳೆಯ ಶಾಲೆ, ಸಮಯೋಚಿತ ಆರೋಗ್ಯ ಸೌಲಭ್ಯ ಕನಿಷ್ಟ ಮಟ್ಟದ ಪ್ರೀತಿಯು ದೊರೆಯದೇ ಪ್ರತಿದಿನ ಸಾವಿರಾರು ಹೆಣ್ಣು ಶಿಶುಗಳು ಮರಣ ಅಪ್ಪುತ್ತಿವೆ. ಬಾಲವೇಶ್ಯಾವಾತಿಕೆಗಳು ಹೆಚ್ಚುತ್ತಿವೆ. ಹೀಗೆ ಸ್ತ್ರೀಯರನ್ನು ನೋಡುವ ಅಮಾನವೀಯ ದೃಷ್ಟಿಕೋನ ಅವರನ್ನು ಬಲಿ ತೆಗೆದುಕೊಳ್ಳುತ್ತಿದೆ ಇಲ್ಲವೆ ನಿಕೃಷ್ಟವಾಗಿ ನಡೆಸಿಕೊಳ್ಳುತ್ತಿದೆ.

ಈಗ ನೂರಾರು ವರ್ಷಗಳ ಹಿಂದೆ ವಿಜ್ಞಾನ, ವೈದ್ಯಕೀಯ ಕ್ಷೇತ್ರಗಳು ಅಷ್ಟಾಗಿ ಬೆಳೆದಿರಲಿಲ್ಲ. ಈ ಕಾರಣವಾಗಿ ಸ್ತ್ರೀಯರನ್ನು ಹುಟ್ಟುವಾಗಲೇ ಅಲಕ್ಷಿಸಲ್ಪಡುತ್ತಿದ್ದರಿಂದ ಹಲವು ರೋಗ ರುಜಿನಗಳಿಗೆ ಬಲಿಯಾಗಿ ಅವರು ಮರಣ ಹೊದುತ್ತಿದ್ದರು. ಬಸುರಿ, ಬಾಣಂತಿ ಅವಧಿಯಲ್ಲಿ ಸೋಂಕುಗಳಿಗೆ ತುತ್ತಾಗಿ, ಅಥವಾ ಪ್ರಸವದ ಅವಘಡಗಳಿಗೆ ತುತ್ತಾಗಿ ಸರಾಸರಿ ಹೆಚ್ಚು ಪ್ರಮಾಣದಲ್ಲಿ ಸ್ತ್ರೀಯರು ಸಾವನ್ನಪ್ಪುತ್ತಿದ್ದರು. ವೈಜ್ಞಾನಿಕವಾಗಿ ಸ್ತ್ರೀಯರ ಸಂಖ್ಯೆ ಪುರುಷರ ಸಂಖ್ಯೆಗಿಂತ ಸರಾಸರಿ ತುಸು ಹೆಚ್ಚೇ ಇರಬೇಕು ಆದರೆ ನಮ್ಮಲ್ಲಿರುವ ಸ್ತ್ರೀ ವಿರೋಧಿ ನೆಲೆಯ ಸಂಕೀರ್ಣ, ಸನಾತನ ನೆಲೆಗಳನ್ನು ಸಮಗ್ರವಾಗಿ ಮತ್ತು ವೈಜ್ಞಾನಿಕವಾಗಿ ಗ್ರಹಿಸದೆ ಅನುಕಂಪ, ಆದರ್ಶದ ಭ್ರಮೆಯಲ್ಲಿ ತರುವ ಸುಧಾರಣೆಗಳು ಯಾವತ್ತು ಇಚ್ಚಿತ ಫಲ ನೀಡಲಾರವು. ಸ್ತ್ರೀಯರನ್ನು ನೋಡುವ ದೃಷ್ಟಿಕೋನದಲ್ಲಿ ಸಮಗ್ರ ಬದಲಾವಣೆ ತರಲಾರದೆ ಕೇವಲ ತುಟಿ ಅನುಕಂಪದ ಯೋಜನೆಗಳು ಅವರ ಸ್ಥಿತಿಯಲ್ಲಿ ಸ್ಮಧಾರಣೆ ತರಲಾರವು. ಲಿಂಗ ಅಸಮಾನತೆಯ ತಾತ್ವಿಕ ಮತ್ತು ಆರ್ಥಿಕ ಆಯಾಮಗಳಲ್ಲಿ ಬದಲಾವಣೆ ತರಬೇಕಿದೆ. ಸ್ತ್ರೀ ಪುರುಷರು ಪರಸ್ಪರ ವಿರೋಧವು ಅಲ್ಲ ಮೇಲು, ಕೀಳೂ ಅಲ್ಲ ಅವು ಪರಸ್ಪರ ಪೂರಕ ಮತ್ತು ಪ್ರೇರಕ ಜೈವಿಕ ವೈವಿಧ್ಯಗಳು, ಶರೀರದ ರಾಚನಿಕ ಸ್ವರೂಪ ಮತ್ತು ನಿಸರ್ಗದತ್ತ ಕಾರ್ಯವೈಖರಿಯ ಭಿನ್ನ ಹೊಣೆಗಾರಿಕೆಗಳು ಆ ಎರಡೂ ಲಿಂಗಗಳನ್ನು ಪರಸ್ಪರ ಭೇಧದ ಪರಿಧಿಗೆ ಚಂದು ನಿಲ್ಲಿಸಬೇಕಾಗಿಲ್ಲ. ಆದ್ದರಿಂದ ಮಹಿಳೆಯರನ್ನು ಕೇವಲ ಬದುಕಿನ ದೃಷ್ಟಿಯಿಂದ ಅಲ್ಲದೇ ಪ್ರತಿಯೊಂದು ಅವಳ ಬದುಕಿನ ಹೆಜ್ಜೆ ಹೆಜ್ಜೆಗಳಿಗೂ ಯಾವುದೇ ಶೋಷಣೆಯಿಲ್ಲದೇ ಬದುಕಬೇಕಾಗಿರುವುದು ಅನಿವಾರ್ಯವಾಗಬೇಕಾಗಿದೆ. ಈ ಎಲ್ಲರದಲ್ಲೂ ಅವಳು ಸ್ವತಂತ್ರ ಪಡೆಯಬೇಕಾದರೆ ಮೊದಲು ಸ್ವತಂತ್ರ ಹಾಗೂ ಸಾಮಾಜಿಕ ಬೆಂಬಲದ ಮೇರೆಗೆ ದುಡಿಯಲು ಪ್ರೋತ್ಸಾಹಿಸಬೇಕು.

ನಮ್ಮ ಕರ್ನಾಟಕದಲ್ಲಿ ರಾಜ್ಯಮಟ್ಟದಲ್ಲಿ ಒಟ್ಟು ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ಶೇ. ೩೫. ಆದರೆ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಅದರ ಪ್ರಮಾಣ ಶೇ.೩೯. ಈ ಮೇಲಿನ ಅಂಕಿಅಂಶಗಳನ್ನು ನೋಡಿದಾಗ ಪುರುಷರಿಗೆ ಮಹಿಳೆಯರಿಗೆ ತುಂಬಾ ವ್ಯತ್ಯಾಸವನ್ನು ಕಾಣಬಹುದಾಗಿದೆ ಕೇವಲ ೧೦೦ಕ್ಕೆ ೩೯.೧ ರಷ್ಟು ದುಡಿಮೆಯಲ್ಲಿ ತೊಡಗಿದವರ ಪ್ರಮಾಣ ಅಂದರೆ ಅಲ್ಲಿ ಮಹಿಳೆಯರುಇನ್ನು ದುಡಿಮೆಯಲ್ಲಿ ಪಾಲ್ಗೊಳ್ಳುವುದು ಅನಿವಾರ್ಯವಾಗಿದೆ.[21]

ಆದರೆ ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯ ಇರುವುದರ ಜೊತೆಗೆ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದೆ ವೇದಕಾಲೀನ ಸಮಾಜದಲ್ಲಿ ಸ್ತ್ರೀಯರಿಗೆ ಶೂಟಿಗಾಗಿ ಅಥವಾ ಸಂಬಳಕ್ಕಾಗಿ ದುಡಿಯಬೇಕಾದ ಸ್ಥಿತಿಯಿರಲಿಲ್ಲ. ಆದರೆ ಇಂದೂ ಎಲ್ಲಾ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದರೂ ಸಹ ಮಹಿಳೆಯರ ಆರ್ಥಿಕತೆ ಅಷ್ಟೊಂದು ಉತ್ತಮವಾಗಿಲ್ಲ. ಇದಕ್ಕೆಂದು ೧೮೮೨ರ ಶಿಕ್ಷಣ ಆಯೋಗವು ಮಹಿಳಾ ಅಧ್ಯಾಪಿಕೆಯರನ್ನು ಸೃಷ್ಟಿಸಲು ಮಹಿಳಾ ತರಭೇತಿ ಸಂಸ್ಥೆಗಳನ್ನು ಆರಂಭಿಸಲು ಶಿಫಾರಸ್ಸು ಮಾಡಿತ್ತು. ಅಂತಹ ಸಂಸ್ಥೆಗಳ ಸ್ಥಾಪನೆಚಿಯೊಂದಿಗೆ ಹಲವಾರು ಸ್ತ್ರೀಯರು (ಬಾಲ ವಿಧವೆಯರು ಕೂಡ) ಅಧ್ಯಾಪಕ ವೃತ್ತಿಗೆ ಸೇರಿಕೊಂಡರು. ಕಾಲಕ್ರಮೇಣ ಶಿಕ್ಷಿತ ಸ್ತ್ರೀಯರು ಆಸ್ಪತ್ರೆಗಳಲ್ಲಿ ದಾದಿಯರಾಗಿ, ಕಾರ್ಖಾನೆ, ಕಛೇರಿಗಳಲ್ಲಿ ಲೆಕ್ಕಿಗರಾಗಿ, ಕಾರಕೂನರುಗಳಾಗಿ, ಬೆರಳಚ್ಚುದಾರರಾಗಿ, ಶಾಲೆ-ಕಾಲೇಜುಗಳಲ್ಲಿ ಶಿಕ್ಷಕಿಯರಾಗಿ, ಕೈಗಾರಿಕೋದ್ಯಮದಲ್ಲಿ ಉದ್ಯೋಗಿಗಳಾಗಿ ಮತ್ತು ನಾನಾ ತೆರನಾದ ವೃತ್ತಿಗಳಲ್ಲಿ ದುಡಿಯ ತೊಡಗಿದರು. ಆದರೆ ಅವಳಿಗೆ ಸಿಗುತ್ತಿರುವ (ಸೊಷಿಯಲ್ ಸಪೋರ್ಟ್) ಸಾಮಾಜಿಕ ಒತ್ತಾಸೆಯ ಹಿನ್ನೆಲೆ ನೋಡಿದಾಗ ಅದು ಇನ್ನು ಸ್ವಲ್ಪ ಮಟ್ಟಿಗೆ ಕಡಿಮೆ ಎಂದೇ ಹೇಳಬಹುದು.

ಏಕೆಂದರೆ ಸುಶಿಕ್ಷಿತ ಮಹಿಳಾ ಶಿಕ್ಷಕಿಯೆಂದು ಮಹಿಳೆ ಉದ್ಯೋಗಕ್ಕೆ ಸೇರಿದಾಗ ಅಲ್ಲಿ ಅವಳಿಗೆ ಕೇವಲ ಸರ್ಕಾರಗಳಿಂದ ಸವಲತ್ತುಗಳನ್ನು ನೀಡಿದರೆ ಸಾಲದು ಪ್ರಮುಖವಾಗಿ ಸಾಮಾಜಿಕ ಬೆಂಬಲ ಅತಿಮುಖ್ಯವಾಗಿದೆ. ಈಗ ನಮ್ಮ ಸರ್ಕಾರವು ಪ್ರಸೂತಿಕಾ ಸೌಲಭ್ಯ ಕಾಯ್ದೆ (ದಿ ಮೆಟರ್ನಿಟಿ ಬೆನಿಫಿಟ್ ಆಕ್ಟ್ ಆಫ್ ೧೯೬೧) ಯಂತೆ ದುಡಿಯುವ ವಿವಾಹಿತ ಮಹಿಳೆಯರಿಗೆ ಹೆರಿಗೆ ಸಂಬಂಧವಾಗಿ ಸಂಬಳ ಸಹಿತ ರಜೆ ಪಡೆಯುವ ಸೌಲಭ್ಯವನ್ನು ನೀಡಿದರು ಸಹ ಅವಳಿಗೆ ಸಾಮಾಜಿಕವಾಗಿ ಬೆಂಬಲ ಸಿಗುತ್ತಿಲ್ಲ. ಮಹಿಳಾ ಶಿಕ್ಷಕಿಯೆಂದು ಉದ್ಯೋಗದಲ್ಲಿ ತೊಡಗಿರುವ ಮಹಿಳೆ ಕೆಲಸ ಮಾಡುವ ಪ್ರದೇಶದಲ್ಲಿ ಊರ ಜನರಿಗೆ ಅವಳು ಯಾವುದೋ ಕಾರಣಕ್ಕೆ ಬೇಡವಾಗಿದ್ದರೆ ಅದೇ ಕಾರಣವನ್ನು ಮುದ್ದಿಟ್ಟುಕೊಂಡು ಅವಳ ಕಾರ್ಯ ವೈಖರಿಯ ಬಗ್ಗೆ ಅಥವಾ ಕಾನೂನುಬದ್ಧವಾಗಿ ಪಡೆದುಕೊಂಡಿರುವ ರಜೆಯ ಬಗ್ಗೆ ಊರಿನ ಜನರು ಅಥವಾ ಸಮಾಜ ಎನ್ನುವುದು ಪ್ರಶ್ನಿಸಲು ಪ್ರಾರಂಭಿಸುತ್ತದೆ. ಆಗ ಅವಳಿಗೆ ಅಲ್ಲಿ ದುಡಿಯುವ ಚೈತನ್ಯದ ಬದಲು ಮಾನಸಿಕವಾಗಿ ಅಸ್ವಸ್ಥಳಾಗಿ ಪ್ರಾರಂಭಿಸುತ್ತಾಳೆ ಅಲ್ಲದೇ ಸಮಾಜದ ವಿರುದ್ಧ ಒಬ್ಬ ವೃತ್ತಿನಿರತಳಾದ ಮಹಿಳೆ ಹೋರಾಡಲು ಹೋದಾಗ ಅಲ್ಲಿ ಬೆಂಬಲಿಗರು ತೀರಾ ಕಡಿಮೆ

ಪ್ರಮಾಣದಲ್ಲಿ ಸಿಗುವುದರಿಂದ ಅಧೈರ್ಯ ಅವಳಲ್ಲಿ ಮೂಡಿ ಅವಳ ಸದೃಢ ಹಾಗೂ ಸ್ವಾಸ್ಥ ಉದ್ಯೋಗಸ್ತ ಜೀವನ ಶೈಲಿ ಏರುಪೇರಾಗಲು ಪ್ರಾರಂಭಿಸುವುದಲ್ಲದೇ ಅವಳಿಗೆ ಯಾವುದೇ ಸಾಮಾಜಿಕ ಒತ್ತಾಸೆ/ಬೆಂಬಲ ನಿರೀಕ್ಷಿಸಲು ಅಸಾಧ್ಯವಾಗುತ್ತದೆ. ಹೀಗಿದ್ದಾಗ ಉದ್ಯೋಗಸ್ಥೆ ಪರಿಪೂರ್ಣಳಾಗಿ ಮಹಿಳಾ ವೃತ್ತಿಪರ ಜೀವನ ನಡೆಸಲು ಅಸಾಧ್ಯವಾಗುತ್ತಿದೆ ಎಂದು ಹೇಳಬಹುದು.

ಅದೇ ರೀತಿಯಾಗಿ ಈ ರೀತಿಯ ಕೆಲವೊಂದು ವೃತ್ತಿಯ ಬಗೆಗಿರುವ ಕಾಲ್ಪನಿಕ್ವತೆಯ ವಿಚರಗಲನ್ನು ಕಡಿಮೆ ಮಾಡಿ ಮಹಿಳೆಯರುಮಾಡುವ ವ್ಲತ್ತಿಯ ಬಗ್ಗೆ ಸಾಮಾಜಿಕತೆಯಿಂದ ಮನ್ನಣೆ ಸಿಗುವಂತಗಬೇಕು. ಮಹಿಳೆಯರುಮಾಡುವ ಯಾವುದೇ ಕೆಲಸವು ಕೂಡಾ ಸಮಾಜದ ಒಳಿತಿಗೆ ಎಂಬುದನ್ನು ಗ್ರಹಿಸಿಕೊಂಡು ಅವಳ ತಾತ್ವಿಕ ನೆಲೆಗಳ ವಿಚಾರಗಳಿಗೂ ಹಾಗೂ ಮಹಿಳೆ ಕೈಗೊಳ್ಳುವ ಕಾರ್ಯಗಳಿಗೂ ನಾವು ಇರುವಂತ ಸಮಾಜ ಪ್ರೋತ್ಸಾಹಿಸಬೇಕು. ಉದ್ಯೋಗಸ್ಥ ಮಹಿಳೆಯುರೊಂದಿಗೆ ಕೆಲಸ ಮಾಡುವ ಪುರುಷ ಸಹೋದ್ಯೋಗಿಗಳಲ್ಲಿ ಯಾವುದೇ ವ್ಯಂಗ್ಯ ಭಾವನೆ ಅವಳ ಬಗ್ಗೆ ಇರದೇ ಅವಳನ್ನು ಪ್ರೋತ್ಸಾಹಿಸುವಂತೆ ಭಾವೆನೆ ಪುರುಷ ಸಹೋದ್ಯೋಗಿಗಳಲ್ಲಿ ಮೂಡಿಬರಬೇಕು.

ಸಾಮಾಜಿಕ ಬದಲಾವಣೆ ತರುವಲ್ಲಿ ಹಾಗೂ ಮಹಿಳೆಯು ಪುರುಷನಂತೇ ಸರಿಸಮಾನಿರಬೇಕು ಎಂಬುದರ ಕುರಿತು ಈ ಹಿಂದೆಯೇ ಸಮಾನತೆಯ ನೆಲೆಯಲ್ಲಿ ಸ್ತ್ರೀ ಪುರುಷರನ್ನು ಏಕರೂಪದಲ್ಲಿ ಗ್ರಹಿಸುವುದು ಅಂಬೇಡ್ಕರ್ ಚಿಂತನೆಯ ಪ್ರಧಾನ ನಿಲುವು ಆಗಿತ್ತು. ಅವರ ಮಾತುಗಳಲ್ಲಿ ಹೇಳಬೇಕಾದರೆ,

"Unity is meaningless without the accompaniment of women, education is fruitless without educated women and agitation is incomplete without the strenghth of women"

ಎಂಬುದಾಗಿ ಅಭಿಪ್ರಾಯ ಪಟ್ಟಿದ್ದಾರು ಎಂದರೆ ಅಂದಿನಿಂದಲೇ ಅಗಾಧವಾದ ಸ್ತ್ರೀ ಸಮಾನತೆಯ ಮನೋಭಾವ ಕಂಡುಬಂದಿದ್ದರೂ ಸಹ ನಮ್ಮ ಸಾಮಾಜಿಕತೆಯ ರೋಡಿ ಸಂಪ್ರದಾಯಗಳ ಜಾಡ್ಯದಿಂದಾಗಿಯೇ ಅವಳನ್ನು ಪೂರ್ಣ ಮಟ್ಟದಲ್ಲಿ ಸಮಾನತೆಯನ್ನು ಸಾಧಿಸಲು ಇನ್ನು ಸ್ವಲ್ಪ ಹಿಂದೆ ಬಿದ್ದಿದ್ದಾಳೆ ಎಂದರೆ ತಪ್ಪಾಗಲಾರದು.

ಆದರೂ ನಮ್ಮ ಸರ್ಕಾರಗಳು ಈ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಸಾಕಷ್ಟು ಯೋಜನಾ ಕಾರ್ಯಕ್ರಮಗಳನ್ನು ಮಾಡಿದರು. ಸಹ ಸಾಮಾಜಿಕ ಬೆಂಬಲ ಎಂಬುದು ಅವಳಿಗೆ ಸಿಗದೇ ಈ ಎಲ್ಲಾ ಯೋಜನೆಗಳು ಫಲಪ್ರದಾಯವಾಗಿಲ್ಲ. ಗ್ರಾಮಾಂತರ ಪ್ರದೇಶಗಳಲ್ಲಿ ಮಹಿಳಾ ಶಿಕ್ಷಕಿಯರಿಗೆ ಉಚಿತ ವಸತಿ ಸೌಕರ್ಯ, ಶಾಲಾ ಮಾತೆಯರ ನೇಮಕಾತಿ, ಮಹಿಳೆಯರಿಗೆ, ಸ್ಟೈಪೆಂಡ್, ಹಾಜರಾತಿ ಸ್ಕಾಲರ್ ಶಿಪ್, ಶಾಲಾ ಫೀ ಕಡಿತ ಪ್ರೌಢ ಶಾಲೆಯಲ್ಲಿ ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಹಾಸ್ಟೆಲ್‌ಗಳ ಸೌಲಭ್ಯ ಮುಂತಾದ ಸೌಲಭ್ಯಗಳನ್ನು ಮಾಡಿದ್ದರೂ ಸಹ ಇವೆಲ್ಲವೂ ಅಷ್ಟೊಂದು ಯಶಸ್ವೀಯಾಗಿ ಕಾರ್ಯಚರಣೆಗೆ ಬಂದಿಲ್ಲ ಎಂದೇ ಹೇಳಬಹುದು.

# ಗ್ರಂಥಋಣ


೭. ರೇಣುಕಾರ್ಯ ಸಿ.ಕೆ, ೨೦೦೦ ಅರ್ಥಶಾಸ್ತ್ರ, ಪಿ.ಯು,ಸಿ, ೨ನೇ ವರ್ಷ, ಪುಟ ೨೩೦-೨೩೧

೮. ಶ್ರೀಮತಿ ಹೆಚ್.ಎಸ್. ಶಿನಾನಂದ, ಕೃಷ್ಣ ಜೆ. ಸಂಪಾದಕರು, ೨೦೦೭, ಮಹಿಳಾ ಆರ್ಥಿಕತೆ, ಪುಟ ೬

೯. ರಿತುದಿವಾನ್, ೧೯೯೫, ಪುಟ೪೬-೪೭

೧೦. ಚಂದ್ರಶೇಖರ. ಟಿ.ಆರ್, ಮಹಿಳೆ ಮತ್ತು ಆರ್ಥಿಕತೆ ಮತ್ತು ಅಭಿವೃದ್ಧಿ, ಪುಟ ೩೦

೧೧. ರೇಣುಕಾರ್ಯ ಸಿ.ಕೆ, ಸಂಪಾದಕರು, ೨೦೦೬, ಪದವಿ ಪೂರ್ವ ಶಿಕ್ಷಣ ಇಲಾಖೆ ಅನುಮೋದಿಸಿದ ಪಠ್ಯ ಪುಸ್ತಕ, ಅರ್ಥಶಾಸ್ತ್ರ, ಪುಟ.೨೩೧

೧೨. ರೇಣುಕಾರ್ಯ ಸಿ.ಕೆ, ೨೦೦೦ ಅರ್ಥಶಾಸ್ತ್ರ, ೨೩೪

೧೩. ಬಸವಾ ಕೆ.ಡಿ, ೧೯೯೬, ಆಧುನಿಕ ಅರ್ಥಶಾಸ್ತ್ರ, ಪುಟ.೩೫೭-೩೫೮

೧೪. ಚಂದ್ರಶೇಖರ. ಟಿ.ಆರ್, ಮಹಿಳೆ ಮತ್ತು ಆರ್ಥಿಕತೆ ಮತ್ತು ಅಭಿವೃದ್ಧಿ, ಪುಟ ೫೫

೧೫. ಚಂದ್ರಶೇಖರ. ಟಿ.ಆರ್, ಮಹಿಳೆ ಮತ್ತು ಆರ್ಥಿಕತೆ ಮತ್ತು ಅಭಿವೃದ್ಧಿ, ಪುಟ ೫೫-೫೬

೧೬. ರೇಣುಕಾರ್ಯ ಸಿ.ಕೆ, ೨೦೦೦ ಅರ್ಥಶಾಸ್ತ್ರ, ೨೩೫

೧೭. ಶ್ರೀಮತಿ. ಎಸ್.ಎಸ್. ಶಿವನಂದ, ಎಸ್. ವಿರಕ್ತ ವ್ಮಠ, ಕೃಷ್ಣ ಜೆ, ಸಂಪಾದಕರು, ವರ್ಷ ೨೦೦೭, ಮಹಿಳೆ ದುಡಿಮೆ ಮತ್ತು ಬಿಡುವು, ಪುಟ.೭೫

೧೮. ಜ್ಯೋತಿ ಶಶಿಕುಮಾರ್, ವರ್ಷ ೨೦೦೭, ಮಹಿಳಾ ಸಾಮಾಜಿಕತೆ, ಪುಟ ೧೪೪-೧೪೫

೧೯. ಆರ್. ಇಂದಿರಾ, ಮಹಿಳೆ ಮತ್ತು ಸಂಸ್ಕೃತಿ, ಪುಟ ೮೧

೨೦. ಎಚ್ಚಾರ್ತೆ, ಭಾರತೀಯ ಆರ್ಹಿಕ ವ್ಯವಸ್ಥೆ, ಪುಟ ೧೭

೨೧. ಆರ್. ಇಂದಿರಾ, ಮಹಿಳೆ ಮತ್ತು ಸಂಸ್ಕೃತಿ, ಪುಟ ೮೧-೮೨

೨೨. ಎಚ್ಚಾರ್ತೆ, ಭಾರತೀಯ ಆರ್ಹಿಕ ವ್ಯವಸ್ಥೆ, ಪುಟ ೧೯

೨೩. ಇಂಗ್ಲೀಷ್ ಮೂಲ ಜೆರಾಲ್ಡಿನ್ ಫೋರ್ಬ್ಸ್ ಕನ್ನಡಕ್ಕೆ ಡಾ. ಹೆಚ್.ಹೆಸ್. ಶ್ರೀಮತಿ, ಆಧುಮಿಕ ಭಾರತದಲ್ಲಿ ಮಹಿಳೆ, ಪುಟ ೫೨-೫೩

೨೪. ಜ್ಯೋತಿ ಶಶಿಕುಮಾರ್, ವರ್ಷ ೨೦೦೭, ಮಹಿಳಾ ಸಾಮಾಜಿಕತೆ, ಪುಟ ೮೪

೨೫. ಜ್ಯೋತಿ ಶಶಿಕುಮಾರ್, ವರ್ಷ ೨೦೦೭, ಮಹಿಳಾ ಸಾಮಾಜಿಕತೆ, ಪುಟ ೮೪–೮೫

೨೬. ಆರ್. ಇಂದಿರಾ, ಮಹಿಳೆ ಮತ್ತು ಸಂಸ್ಕೃತಿ, ಪುಟ ೮೫

೨೭. Directorate of census operations Karnataka " Dist Population Booklet, Census of India 2001, Page No.5

೨೮. ಚಂದ್ರಶೇಖರ. ಟಿ.ಆರ್, ಮಹಿಳೆ ಮತ್ತು ಆರ್ಥಿಕತೆ ಮತ್ತು ಅಭಿವೃದ್ಧಿ, ಪುಟ ೭೧

೨೯. ಜ್ಯೋತಿ ಶಶಿಕುಮಾರ್, ವರ್ಷ ೨೦೦೭, ಮಹಿಳಾ ಸಾಮಾಜಿಕತೆ, ಪುಟ ೮೪–೮೫

೩೦. ಜ್ಯೋತಿ ಶಶಿಕುಮಾರ್, ವರ್ಷ ೨೦೦೭, ಮಹಿಳಾ ಸಾಮಾಜಿಕತೆ, ಪುಟ ೯೫

೩೧. ಹೆಚ್. ಎಂ. ಹೇಮಲತ, ಮಹಿಳಾ ಅಧ್ಯಯನ–೩ ( ಮಹಿಳೆ ಮತ್ತು ದುಡಿಮೆ ಮಹಿಳಾಭಿವೃದ್ಧಿ ಕಾರ್ಯ ಯೋಜನೆಗಳು, ಪುಟ ೯೪–೯೬

೩೨. ಜ್ಯೋತಿ ಶಶಿಕುಮಾರ್, ವರ್ಷ ೨೦೦೭, ಮಹಿಳಾ ಸಾಮಾಜಿಕತೆ, ಪುಟ ೯೪–೯೫

೩೩. ಸರ್ವಶಿಕ್ಷಣ ಅಭಿಯಾನ, ರಾಜ್ಯ ಯೋಜನೆ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮಾರ್ಗಸೂಚಿ ಕೈಪಿಡಿ ೨೦೦೮–೦೯, ಪುಟ ೪–೭

೩೪. ಸರ್ವಶಿಕ್ಷಣ ಅಭಿಯಾನ, ರಾಜ್ಯ ಯೋಜನೆ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮಾರ್ಗಸೂಚಿ ಕೈಪಿಡಿ ೨೦೦೮–೦೯, ಪುಟ ೮

೩೫. ಎಸ್.ಎಸ್. ಶಿವಾನಂದ, ಎಸ್. ವಿರಕ್ತ ಮಠ, ಕೃಷ್ಣ ಜೆ, ಸಂಪಾದಕರು, ವರ್ಷ ೨೦೦೪, ಮಹಿಳಾ ಅಧ್ಯಯನ, ಪುಟ.೭೫

೩೬. ವಿಜಯಶ್ರೀ ಸಂಬಂಧ, ವರ್ಷ ೨೦೦೫, ಮಹಿಳೆ ಶೋಷಣೆ ಸವಾಲುಗಳು, ಪುಟ ೧೦೯

೩೭. ಶಂಕರ್ ರಾವ್, ಹೆಚ್.ಎನ್. ವರ್ಷ ೨೦೦೨, ಭಾರತೀಯ ಸಮಾಜದ ಅಧ್ಯಯನ, ಪುಟ ೯೯–೧೦೦

## ೩.೧ ಮಹಿಳೆಯರ ವೃತ್ತಿಪರತೆ ನಡೆದು ಬಂದ ದಾರಿ

ಸಾವಿರಾರು ವರ್ಷಗಳ ಸುಧೀರ್ಘ ಮತ್ತು ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ನಮ್ಮ ಆಧುನಿಕ ಭಾರತವು ತನ್ನದೇ ಆದ ಮಹತ್ವವನ್ನು ಪಡೆದುಕೊಂಡು ಬಂದಿರುವುದರ ಜೊತೆಗೆ ಇಲ್ಲಿನ ಮಹಿಳೆಯರು ಕೂಡ ಅಷ್ಟೇ ವಿಶೇಷ ಗಮನ ಸೆಳೆಯುತ್ತಾರೆ. ಕಾರಣ ಇಲ್ಲಿನ ಸಾಂಸ್ಕೃತಿಕತೆ ಹಾಗೂ ಸಾಮಾಜಿಕತೆ ವ್ಯವಸ್ಥೆಯ ರೂಪುರೇಷೆಯಿಂದಾಗಿ ಅಷ್ಟೇ ವಿಶೇಷತೆಯ ಚರಿತ್ರೆಯನ್ನು ಕಂಡುಕೊಳ್ಳಬಹುದಾಗಿದೆ.

ಭಾರತದಲ್ಲಿ ಬ್ರಿಟೀಷರ ಕಾಲದಿಂದಲೇ ಮಹಿಳೆಯರಿಗೆ ಸ್ವಲ್ಪ ಮಟ್ಟದಲ್ಲಿ ಶಿಕ್ಷಣ ಪಡೆದುಕೊಳ್ಳಲು ಅವಕಾಶ ಸಿಕ್ಕಿತೆಂದರೆ ತಪ್ಪಾಗಲಾರದು. ಏಕೆಂದರೆ ಬ್ರಿಟೀಷ್ ಕಾಲದಲ್ಲಿ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಡಾಲ್‌ಹೌಸಿಯ ಕಾಲಕ್ಕೆ ತಂದಂತಹ ಬದಲಾವಣೆಗಳು ಇಂದಿಗೂ ಶಾಶ್ವತವಾಗಿ ಉಳಿದುಕೊಂಡಿವೆ. ಅಂದರೆ 1816 ರಲ್ಲಿ ಹಿಂದೂ ಕಾಲೇಜು ಆರಂಭಿಸಿದ ಬಳಿಕ ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ರೀತಿಯಲ್ಲಿ ಪ್ರೋತ್ಸಾಹ ನೀಡಿದ ಬ್ರಿಟೀಷ್ ಗವರ್ನರ್‌ಗಳು 1854 ರಲ್ಲಿ ಆದೇಶ ಹೊರಡಿಸಿದ ಹೊಸ ಶಿಕ್ಷಣ ನೀತಿಯು ಹೇಗೆ ಜಾರಿಗೊಳ್ಳಬೇಕೆಂಬ ವಿವರಗಳನ್ನು ಇದರಲ್ಲಿ ಹೇಳಲಾಗಿತ್ತು. ಇದರಿಂದಾಗಿಯೇ ಭಾರತದಲ್ಲಿ ಅಲ್ಪಸ್ವಲ್ಪ ಮಟ್ಟಿಗೆ ಮಹಿಳೆಯರು ಕೂಡ ಶಿಕ್ಷಣದೆಡೆಗೆ ಒಲವು ತೋರುವಂತಾಗಲು ಕಾರಣವಾಯಿತೆಂದರೆ ತಪ್ಪಾಗಲಾರದು. ಆದರೆ ಇದರಿಂದಾಗಿ ಭಾರತದಲ್ಲಿನ ಮಹಿಳೆಯರೆಲ್ಲರೂ ಶಿಕ್ಷಣ ಪಡೆದು ವಿಧ್ಯಾವಂ಼ಯರಾಗಲು ಸಾಧ್ಯವಾಗಲಿಲ್ಲ. ಆದರೆ ಇದಕ್ಕೆ ಸಂಪುರ್ಣವಾಗಿ ಒಂದು ಸ್ವರೂಪ ಕಂಡುಕೊಂಡಿದ್ದು ಜಗತ್ತಿನಾದ್ಯಂತ ಮಹಿಳಾ ಚಳುವಳಿಗಳು ಪ್ರಾರಂಭಿಸಿದ ಮೇಲೆಯೇ ಎಂದು ಹೇಳಬಹುದು. ಅಂದರೆ ಶಿಕ್ಷಣ ಪಡೆದುಕೊಂಡು ವಿಧ್ಯಾವಂತರಾದ ಮಹಿಳೆಯರೆಲ್ಲರೂ ಎಚ್ಚೆತ್ತುಕೊಂಡು ಪ್ರಪಂಚಾದ್ಯಂತ 1970 ರ ದಶಕದ ಆಸುಪಾಸಿನಲ್ಲಿ ಚಳುವಳಿಗಳಿಗೆ ಧುಮುಕಿದರು. ಮೊಟ್ಟಮೊದಲು ಅಮೇರಿಕಾದ ನ್ಯೂಯಾರ್ಕಿನ ಸೆನೇಕಾ ಫಾಲ್ಸ್‌ನಲ್ಲಿ ಮೊದಲು ಬಾರಿಗೆ ಮಹಿಳಾ ಚಳುವಳಿಯು ಉದ್ಘಾಟಿತಗೊಂಟಿತು. ಇಲ್ಲಿ ಇಬ್ಬರು ಮಹಿಳಾ ಸುಧಾರಣಾವಾದಿಗಳು ಸ್ಥಳೀಯ ಮಹಿಳಾ ಹಕ್ಕುಗಳನ್ನು ಕುರಿತು ಈ ಸಭೆಯಲ್ಲಿ ಪ್ರಸ್ತಾಪಿಸಿದರು. ಈ ಚಳುವಳಿಯು ರಾಜಕೀಯವಾಗಿ ಆರ್ಥಿಕವಾಗಿ ಸಮಾನತೆಗಳನ್ನು ಒಡೆಯುವ ಕಡೆಗೆ ಪ್ರೋತ್ಸಾಹ ನೀಡಿತು. ಈ ಸಭೆಯಲ್ಲಿ ಪ್ರಮುಖವಾಗಿ ವಿಚ್ಛೇದನಾ ಹಕ್ಕುಗಳು, ಮಕ್ಕಳ ಪ್ರೋಷಿತರಾಗುವ ಹಕ್ಕುಗಳ ಆಸ್ತಿ ಮೇಲಿನ ಹಕ್ಕು ಹಾಗೂ ನಿಯಂತ್ರಣ, ಮತದಾನದ ಹಕ್ಕು ಈ ಎಲ್ಲಾ ವಿಷಯಗಳ ಕುರಿತು

ಚರ್ಚಿಸಿತು. ಮುಂದೆ 1939 ರಲ್ಲಿ ಯುರೋಪ್ ಖಂಡದಲ್ಲಿ ಎರಡನೇ ಮಹಾಯುದ್ಧ ನಡೆದಾಗ ಆ ಖಂಡದ ಪುರುಷರೆಲ್ಲರೂ ಯುದ್ಧರಂಗಕ್ಕೆ ಹೋಗುವ ಅನಿವಾರ್ಯ ಉಂಟಾಗಿತ್ತು. ಇಲ್ಲಿ ಸುಮಾರು ಹದಿನೆಂಟು ವರ್ಷದಿಂದ ಹಿಡಿದು ಸುಮಾರು ಅರವತ್ತು ವರ್ಷದವರೆಗಿನ ಎಲ್ಲಾ ಪುರುಷರು ಯುದ್ಧದ ತರಬೇತಿ ಪಡೆದುಕೊಂಡು ಎರಡನೇ ಮಹಾಯುದ್ಧದಲ್ಲಿ ಕಡ್ಡಾಯವಾಗಿ ಭಾಗವಹಿಸಬೇಕಾದಂತಹ ಪರಿಸ್ಥಿತಿ ಉಂಟಾಯಿತು. ಆಗ ಅಲ್ಲಿನ ಹೆಂಗಸರೆಲ್ಲರೂ ಮನೆಯ ಹೊರಗಿನ ಕೆಲಸಗಳನ್ನು ನೋಡಿಕೊಳ್ಳುವ ಅನಿವಾರ್ಯ ಪರಿಸ್ಥಿತಿ ಎದುರಾದಾಗ ಮಹಿಳೆಯರು ಉತ್ಪಾದನಾ ಕ್ಷೇತ್ರ, ಸಾರ್ವಜನಿಕ ಸ್ಥಳಗಳಲ್ಲಿ ಅಂದರೆ ಉದ್ಯೋಗ ಕ್ಷೇತ್ರದಲ್ಲಿ ಶಿಕ್ಷಕರಾಗಿ, ಬ್ಯಾಂಕ್ ನೌಕರರಾಗಿ, ಹೋಟೆಲ್‌ಗಳನ್ನು ನಡೆಸುವ ಮಾಲೀಕರಾಗಿ ತಮ್ಮ ಕೆಲಸದಲಲಿ ತೊಡಗಿದರು. ಇದು ಮುಂದುವರಿದು ಯುದ್ಧಕ್ಕೆ ಹೋದ ಪುರುಷರೆಲ್ಲರೂ ಮರಳಿ ಮನೆಗಳಿಗೆ ಹಿಂದಿರುಗಿದಾಗ, ಪುರುಷರ ಮರಳಿ ಬರುವಿಕೆಯಿಂದಾಗಿ ಸಾರ್ವಜನಿಕ ಮತತು ಉತ್ಪಾದನಾ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಮಹಿಳೆಯರು ಪುನಃ ಮೊದಲಿನಂತೆ ನಾಲ್ಕು ಗೋಡೆಗಳ ಮಧ್ಯೆ ಹೊರಗಿನ ಕೆಲಸಗಳಿಂದ ವಂಚಿತರಾಗಿ ಕುಳಿತುಕೊಳ್ಳಲು ಇಷ್ಟವಿಲ್ಲದೆ ಆ ವ್ಯವಸ್ಥೆಯಿಂದ ಹೊರಬರಲು ಪ್ರತಿಭಟನೆಗೆ ಇಳಿದರು. ಇಂತಹ ಕೆಲವು ಪ್ರತಿಭಟನೆಗಳ ಗಾಳಿ ಭಾರತದ ಮೇಲೂ ಸಹ ಬೀಸಿತು. ಭಾರತದಲ್ಲಿದ್ದ ಮಹಿಳೆಯರೆಲ್ಲರೂ ಪ್ರಪಂಚದಾದ್ಯಂತ ಚಳುಗಳಿಗೆ ವ್ಯವಸ್ಥೆಯ ಕಪಿಮುಷ್ಠಿಯಿಂದ ಕವಿಮುಖಳಾಗಲು ಚಳುವಳಿಗಳಿಗೆ ಧುಮುಕಿದಳು. ಸುಮಾರು ಹತ್ತೊಂಭತ್ತು ಮತ್ತು ಇಪ್ಪತ್ತೇಳು ಶತಮಾನಗಳಲ್ಲಿ ಭಾರತದಲ್ಲಿ ಚಳುವಳಿಗಳು ಕಾಣಿಸಿಕೊಂಡವು. ಆದರೆ ಅದಕ್ಕೆ ಸರಿಯಾದ ಕಾಲ ಕೂಡಿ ಬಂದದ್ದು ಬ್ರಟೀಷರ ಕಾಲಕ್ಕೆ ಎಂದು ಹೇಳಬಹುದು.

ರಾಷ್ಟ್ರೀಯ ಸ್ವಾತಂತ್ರ್ಯ ಚಳುಗಳಿಗಳು ಮತ್ತು ಮಹಿಳಾ ಚಳುಗಳಿಗಳ ಸಂಬಂಧದ ಬಗ್ಗೆ ಚಚ?ಯಾಗುತ್ತಿರುವ ಸಂಗತಿ ಯುದ್ಧೋತರ ಸಂಧರ್ಭಗಳಲ್ಲಿ ಮಹತ್ವದ್ದು. ಏಕೆಂದರೆ ಅನೇಕ ದೇಶಗಳ ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರು ಸಕ್ರಿಯರಾಗಿ ಪಾಲ್ಗೊಂಡಿದ್ದರೂ ಸ್ವಾತಂತ್ರ್ಯ ನಂತರದಲ್ಲಿ ಮಹಿಳೆಯರ ಸ್ಥಿತಿಗತಿಗಳು ಹಾಗೇ ಉಳಿದಿವೆ. ಕಾನೂನು ಬದ್ಧ ಹಕ್ಕುಗಳು ಮಹಿಳೆಯರಿಗೆ ದೊರಕಿದ್ದರೂ ಅವು ನಿಜಕ್ಕೂ ಕಾರ್ಯಗತವಾಗಿ ಎಷ್ಟರ ಮಟ್ಟಿಗೆ ಮಹಿಳೆಯರಿಗೆ ಪ್ರಯೋಜನಕಾರಿಯಾಗಿವೆ ಎಂಬುದು ಪ್ರಶ್ನೆಯೇ.

ಕ್ರಾಂತಿಕಾರಕ ಸಂಧರ್ಭದಲ್ಲಿ ಮಹಿಳೆಯರ ಮಹತ್ವವು ಏಕಾಏಕಿ ಹೆಚ್ಚಾಗುತ್ತಿದೆ. ಕ್ರಾಂತಿಯಲ್ಲಿ ಸಕ್ರಿಯವಾಗಿ ಭಾಗವಹಿಸುವಂತಹ ವಿಚಾರವು ಮಹಿಳೆಯ ಸಾಮಾಜಿಕ. ಸ್ಥಾನಮಾನದಲ್ಲಿ ಬದಲಾವಣೆಗೆ ತರುತ್ತದೆ. ಆದರೆ ಅದಕ್ಕಿಂತಲೂ ಮುಖ್ಯವಾಗಿ ಮಹಿಳೆಯ ಪ್ರಾಮುಖ್ಯವನ್ನು ಆವಳ ಜನನ ಸಾಮರ್ಥ್ಯ ಎಂದು ತಿಳಿಯಲಾಗಿದೆ. ಭೂಮಿ ಹಾಗೂ ಮುಂದಿನ ಜನಾಂಗದ ಸೃಷ್ಟಿಕರ್ತಳಾದ ಆಕೆ ಸಮೃದ್ದಿಯ ಆಕರವಾಗಿದ್ದು ಸಂಸ್ಕೃತಿಯ ರಕ್ಷಣೆ ಎನ್ನುತ್ತಾಳೆ. ಆಗ ಸಾಮಾಜವಾದಿಗಳಿಂದಾಗಲೀ, ವಸಾಹತುಗಾರರಿಂದಾಗಲೀ ಭೂ ಆಕ್ರಮಣದ ಜೊತೆ ಮಹಿಳೆಯ ಮೇಲಿನ ನಿಯಂತ್ರಣವೂ ಗಮನಾರ್ಹ ಪ್ರಮಾಣದಲ್ಲಿ ನಡೆಯುತ್ತದೆ.

ಕ್ರಾಂತಿಪೂರ್ವ ಹಾಗೂ ಕ್ರಾಂತಿ ಸಂಧರ್ಭದ ಕಾರ್ಯವಿಧಾನ, ತಂತ್ರಯೋಜನೆಗೆ ಸ0ಬಂಧಪಟ್ಟ ಚರ್ಚಗಳಲ್ಲಿ ಮಹಿಳೆಯ ಬಿಡುಗಡೆಗೆ ಸಂಬಂಧಪಟ್ಟ ಪ್ರಶ್ನೆಗಳು ನಿರ್ಲಕ್ಷ್ಯಕ್ಕೆ ಒಳಪಟ್ಟವು. ಹೀಗಾಗಿ ಮಹಿಳಾ ಬಿಡುಗಡೆ ಮತ್ತು ಮಾನವತೆಯ ಒಟ್ಟು ಬಿಡುಗಡೆಯ ನಡುವಿನ ಸಂಬಂಧವು ಮುಖ್ಯವಾಗಲೇ ಇಲ್ಲ. ಕ್ರಾಂತೀಯ ಅನುಭವಗಳ ಪ್ರಾಯೋಗಿಕ ಪರಿಹಾರಗಳು ಮಸಹಿಳಾ ಪ್ರಶ್ನೆಗೆ ಸಂಬಂಧಿಸಿದಂತೆ ಸೂಚಿತವಾಗದೆ ಹಾಗೆಯೇ ಉಳಿದುಬಿಟ್ಟವು. ಅದಕ್ಕೆ ಬದಲಾಗಿ ಕ್ರಾಂತಿಯ ನಂತರ ಮತ್ತೆ ಪಿತೃಪ್ರಾಧಾನ್ಯ ಕುಟುಂಬ ಪದ್ದತಿಯನ್ನೇ ಪುನಃ ಸ್ಥಾಪಿಸುವ, ಸಾಂಪ್ರದಾಯಿಕವಾಗದ ಸ್ತ್ರೀ-ಪುರುಷ ಭೇಧವನ್ನು ದುಡಿಮೆಗೆ ಸಂಬಂಧಿಸಿದಂತೆ ಪಾಲಿಸುವ ಪ್ರಯತ್ನಗಳೇ ನಡೆದವು. ಮತ್ತೆ ಹೊಲದ ದುಡಿಮೆಯೊಂದಿಗೆ ಮಕ್ಕಳನ್ನು ಹೆರುವ, ಪಾಲಿಸುವ, ಗೃಹಕೃತ್ಯ ನಿರ್ವಹಿಸುವ ಕೆಲಸಕ್ಕೆ ಮಹಿಳೆ ಬದ್ದಳಾದಳು. ಗಂಡಸು ತನ್ನ ನಿಗದಿತ ಕೆಲಸದೊಂದಿಗೆ ಸಾಮಾಜಿಕ, ಆರ್ಥಿಕ, ರಾಜಕೀಯ ವಿಷಯಗಳಲ್ಲಿ ತೊಡಗುವುದು ನಡೆದು ಬಂತು.

ಇಂತಹ ಸನ್ನಿವೇಷದಲ್ಲಿ ಮಹಿಳೆಯರಿಗೆ ಸಮಾನ ಹಕ್ಕುಗಳ, ಸಮಾನ ವೇತನಗಳ, ಕುರಿತಾದ ಕಾನೂನುಗಳು ಜಾರಿಗೆ ಬಂದವು. ಮಹಿಳಾ ದಿನವನ್ನು ಜಾಗತಿಕ ಮಟ್ಟದಲ್ಲಿ ಆಚರಿಸುತ್ತಾ ವೇದಿಕೆಗಳಲ್ಲಿ ಮಹಿಳೆಯರ ಬಗ್ಗೆ ಮಾತನಾಡುತ್ತಲೇ ವಾಸ್ತವದಲ್ಲಿನ ಮಹಿಳೆಯ ದುಸ್ತಿತಿಯನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಗಿದೆ. ತೃಣಮೂಲ ನೆಲೆಯ ಬಹುಸಂಖ್ಯಾತ ಮಹಿಳೆಯ ದುಸ್ಥಿತಿಯಂತ ಪ್ರಕರಣ ಮುಂದುವರಿದಿದೆ. ಕ್ರಾಂತಿಯೋತ್ತರ ಮಹಿಳಾ ಚಿಂತನೆಗಳು ಮಹಿಳೆಯ ವಿಷಯಕ್ಕೆ ಸಂಬಂಧಿಸಿದಂತೆ ನಿಜಕ್ಕೂ ಆಶಾದಾಯಕವಾಗಿದೆ. ಮಹಿಳೆಯರ ದಮನಕ್ಕೆ ಪ್ರತಿಯಾಗಿ ಹೆಚ್ಚು ಹೆಚ್ಚು ಮಹಿಳೆಯರು ಕುಟುಂಬದಾಚೆಗಿನ

ವೇತನ ಆಧರಿಸಿ ಸಾಮಾಜಿಕ ಉತ್ಪಾದನೆಯಲ್ಲಿ ಭಾಗಿಯಾಗಬೇಕೆಂಬ ಯೋಚನೆ ರೂಪುಗೊಂಡಿತ್ತು. ಈ ವಿಚಾರವನ್ನು ಮಾರ್ಕ್ಸ್, ಏಂಗಲ್ಸ್ ಇವರು ಪ್ರಸ್ತಾಪಿಸಿದ್ದಾರೆ. ಇದರಿ ಕುರಿತಾಗಿ ಏಂಗಲ್ಸ್‌ನ ಚಿಂತೆಯು ಈ ಕೆಳಗಿನಂತಿದೆ.

ಮಹಿಳೆ ತನ್ನ ದುಡಿಮೆಗೆ ತಕ್ಕ ವೇತನವನ್ನು ಪಡೆಯಲು ಅರ್ಹಳು. ಸ್ವಂತ ದುಡಿಮೆಯುಳ್ಳ ಮಹಿಳೆ ಆರ್ಥಿಕ ಸ್ವಾವಲಂಬಿಯಾಗಿ ಗಂಡಸರ ದಬ್ಬಾಳಿಕೆಯಿಂದ ಮುಕ್ತಳಾಗಬಲ್ಲಳು. ಇದರಿಂದ ಶೋಷಣೆ ಆಧಾರದ ಮೇಲೆ ರೂಪುಗೊಂಡ ಮಹಿಳೆ ಬುಡಮೇಲು ಮಾಡಬಹುದು. ಇಡೀ ಸಮುದಾಯವನ್ನು ಸಾರ್ವಜನಿಕ ಉದ್ಯಮಕ್ಕೆ ತಂದರೆ ಮಾತ್ರ ಕುಟುಂಬದೊಳಗಿನ ಪತ್ನಿಯಾದ ಹೆಣ್ಣು ಬಿಡುಗಡೆಯನ್ನು ಹೊಂದಬಲ್ಲಳು. ಇದರಿಂದ ಸಮಾಜದ ಚಿಕ್ಕ ಆರ್ಥಿಕ ಘಟಕವಾದ ಏಕವ್ಯಕ್ತಿ ದುಡಿಮೆ ಹೊಂದಿದ ಕುಟುಂಬವು ಇಲ್ಲವಾಗುತ್ತದೆ. ಇವರ ಅಭಿಪ್ರಾಯದಂತೆ ಮನೆಗೆಲಸವು ಸಮಾಜೀಕರಣವಾಗುವುದರ ಮೂಲಕ ಮನೆಯಾಚೆ ಅದು ಚಲಿಸಬೇಕು. ಆದರೆ ಇದು ಸಾಧ್ಯವಾಗಿಲ್ಲ. ಹಾಗೂ ಹೊರಗಿನ ದುಡಿಮೆಯೊಂದಿಗೆ ಮಹಿಳೆ ಮತ್ತೆ ಮನೆಯೊಳಗೆಯೂ ದುಡಿಯಬೇಕಾದ ಪರಿಸ್ಥಿತಿಗೆ ಕಾರಣ ಇದು.

ಭಾರತದ ಮಹಿಳೆಯ ಹೋರಾಟವು ಕುಟುಂಬ ನಿರ್ವಹಣೆ, ಪಾಲನೆ, ಸಂತಾನೋತ್ಪತ್ತಿ ಇತ್ಯಾದಿಗಳ ನೆಲೆಯಿಂದಲೇ ಶುರುವಾಗುತ್ತದೆ. ಕುಟುಂಬದಾಚೆ ಬರುವುದು, ಸಾಮಾಜಿಕ ಪ್ರಕ್ರಿಯೆಯಲ್ಲಿ ದೊಡ್ಡ ರೀತಿಯಿಂದ ತೊಡಗುವುದು, ನಂತರದ ನೆಲೆಯ ಹೋರಾಟವಾಗುತ್ತದೆ. ಈ ಎರಡೂ ನೆಲೆಯ ಹೋರಾಟಗಳನ್ನು ಭಾರತದ ಚರಿತ್ರೆಯಲ್ಲಿ ಹಾಗೂ ಚರಿತ್ರೆ ಮಾಚಿದ ಕಥನಗಳಲ್ಲಿ ಗುರುತಿಸಬಹುದು.

ಸಮಾಜದ ಬಹು ಮುಖ್ಯ ಘಟಕವಾದ ಕುಟುಂಬದ ಪರಿಕಲ್ಪನೆಯು ಋಗ್ವೇದ ಸಂಹಿತೆಯಲ್ಲಿ ನಮಗೆ ದೊರೆಯುತ್ತದೆ. ಇದರ ಶ್ಲೋಕಗಳಲ್ಲಿ ವಿವಾಹಕ್ಕೆ ಸಂಬಂಧಿಸಿದ ಮೌಲ್ಯಾಚರಣೆಗಳ ವಿವರಗಳಿವೆ. ಆದರೆ ಮಾತೃಮಾಲ ಬಹುಪತ್ನಿತ್ವ ಪದ್ದತಿಯಲ್ಲಿ ಹೆಣ್ಣಿನ ಮೂಲಕ ಸಂತತಿಯನ್ನು ಗುರುತಿಸಲಾಗುತ್ತಿತ್ತು. ಅದರ ಜೊತೆಗೆ ಪಿತೃಮೂಲ ಬಹುಪತ್ನಿತ್ವ ಪದ್ದತಿಯು ಜಾರಿಯಲ್ಲಿದ್ದು, ಅದೇ ಕ್ರಮೇಣ ಪಿತೃಪ್ರಧಾನ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿತು.

ಕೃಷಿ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿಗೆ ಕೆಲವು ಸ್ಥಾನವಿದ್ದುದಾಗಿ ಮಾನವ ಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಜೀವದಾಯಕಳಾದ ಹೆಣ್ಣು ಫಲವಂತಿಕೆ, ಸಂವೃದ್ಧಿಯ ಸಂಕೇತವಾಗಿ ಇಲ್ಲಿ ಮುಖ್ಯಳಾಗುತ್ತಾಳೆ. ಪಿತೃ ಪ್ರಧಾನ ವ್ಯವಸ್ಥೆ ಜಾರಿಗೊಳ್ಳುವವರೆಗೂ ಹೆಣ್ಣು ಬಲವಂತಿಕೆಯ ಸಂಕೇತವಾಗಿ ಮುಖ್ಯಳಾದಳೇ ಹೊರತು ಲೈಂಗಿಕ ಕಾಮನೆಗಳನ್ನು ದಮನದಲ್ಲಿಡಲಾದ ಚಪಲೆಯಾಗಿ ಅಲ್ಲ. ಪಿತೃ ಪ್ರಧಾನ ವ್ಯವಸ್ಥೆ ಗಟ್ಟಿಗೊಂಡಂತೆಲ್ಲಾ ಆಕೆಯನ್ನು ನಿಯಂತ್ರಣದಲ್ಲಿಟ್ಟುಕೊಳ್ಳಬೇಕಾದ ಕಠಿಣ ನಿಯಮಾವಳಿಗಳ ಸಂಹಿತೆ ಸಿದ್ಧಗೊಂಡಿತ್ತು.

ನಾಗರೀಕ ಜನಪ್ರಿಯ ಸಂಸ್ಕೃತಿಯ ಹೆಣ್ಣನ್ನು ಲೋಲಪಳು ಸ್ವಾರ್ಥಿ ಮಾಯಾವಿನಿ ಎಂದು ಚಿತ್ರಿಸಿದರೆ ಜನಪದ ಸಂಸ್ಕೃತಿಯಲ್ಲಿ ಮಹಿಳೆಯ ಸಶಕ್ತ ಇತ್ಯಾತ್ಮಕ ಚಿತ್ರಣವಿದೆ. ಶಿಷ್ಟ ಸಂಸ್ಕೃತಿಯ ಪಠ್ಯಗಳು ಬ್ರಹ್ಮ, ವಿಷ್ಣು, ಶಿವರನ್ನು ಸೃಷ್ಟಿ ಸ್ಥಿತಿ ಲಯಗಳ ದೈವಗಳಾಗಿ ಪರಿಭಾವಿಸುತ್ತವೆ. ಆದರೆ ಜನಪದ ಸಂಸ್ಕೃತಿಯ ಕಥನಗಳಲ್ಲಿ ಸೃಷ್ಟಿ ಸ್ಥಿತಿ ಲಯಗಳ ಮೂರು ತತ್ವಗಳು ಮಹಿಳೆಯ ಮೂರು ಬಗೆಯ ಕಾರ್ಯವಿಧಾನಗಳಾಗಿ ಸಾಂಕೇತಿಕರಣಗೊಳ್ಳುತ್ತವೆ. ಹೀಗೆ ಮೊದಲಿಗೆ ಬರೀ ಫಲ ಸಂವೃದ್ದತೆಯ ಸಂಕೇತವಾಗಿದ್ದ ಸ್ತ್ರೀ ಶಕ್ತಿ ಕ್ರಮೇಣ ಯುದ್ದದೇವತೆಯಾಗಿಯೂ ಪುರುಷ ದೈವಗಳ ಪತ್ನಿ ತಾಯಿ ಮಗಳು ಪ್ರೇಯಸಿಯಾಗಿಯೂ ರೂಪಾಂತರಗೊಂಡಿದ್ದನ್ನು ಕಾಣಬಹುದು.

ಪುರುಷನ ತಾಳಕ್ಕೆಯೂ ಪಾರಮಾರ್ತಿಕ ಜೀವನಕ್ಕೂ ಹೆಣ್ಣಿನ ಅಗತ್ಯ ಬೇಕೇಬೇಕು ಎಂದೇನೋ ಮನುಧರ್ಮ ಶಾಸ್ತ್ರ ಹೇಳುತ್ತದೆ. ಇಲ್ಲಿ ಹೆಣ್ಣು ಕೇವಲ ಉಪಯುಕ್ತ ವಸ್ತು ಮಾತ್ರಳು. ಮನು ಅತ್ಯಂತ ಸ್ಪಷ್ಟವಾಗಿ ಹೆಣ್ಣನ್ನು ಕ್ಷೇತ್ರವೆಂದು ಗಂಡು ಬೀಜ ಬಿತ್ತಿ ಬೆಳೆಗೆ ವಾರಸುದಾರನಾಗುವನೆಂದು ಹೇಳಿದ್ದಾರೆ.

ಜ್ಞಾನಸಾಧನೆಯ ಕ್ಷೇತ್ರದಲ್ಲಿ ಹೆಣ್ಣಿನ ಪ್ರವೇಶಕ್ಕೆ ನಿಷೇದವಿತ್ತು. ಸೆರಗು ಪರದೆಗಳು ಗಂಡಸಿನ ಲೋಕ ಹಾಗೂ ಹೆಣ್ಣಿನ ಲೋಕವೆಂಬ ಪ್ರತ್ಯೇಕತೆಯನ್ನು ಸೃಷ್ಟಿಸುತ್ತವೆ. ಜ್ಞಾನಲೋಕದೊಳಗೆ ಅವಕಾಶ ಕೊಡದೆ ಹಾಗೆಯೇ ಹೆಣ್ಣನ್ನು ಕುಟುಂಬ, ಪಾಲನೆ, ದೈವಿಕ ತೆಗೆಳ ಪರದೆಯೊಳಗೆ ಇಡುವ ವ್ಯವಸ್ಥಿತ ಸಂಚು ನಡೆದಿತ್ತು. ಭಕ್ತಿ ಪಂತದ ಸಾಧಕರು ಅಧಿಕಾರದ ಕುತರ್ಕವನ್ನು ಹೊಡೆದು ಹಾಕಿದವರು. ಭಕ್ತಿ ಪಂಥವು ಮಹಿಳಾ ಸಾಧಕಿಯರನ್ನು ಅತ್ಯಂತ ಗೌರವದಿಂದ ನಡೆಸಿಕೊಂಡಿತು. ಅಕ್ಕಮಹಾದೇವಿ, ಮೀರಾಬಾಯಿ, ಲಲ್ಲೋಶ್ವರಿಯವರು ತನ್ನ ಜೀವಿತಾ ಕಾಲದಲ್ಲೇ ಜನ ಸಾಮಾನ್ಯರಿಂದ ಮನ್ನಣೆ ಪಡೆದವರಾಗಿದ್ದರು.

ಭಾರತದ ಮಹಿಳೆಯರ ಚರಿತ್ರೆಯ ಅಧಿಕೃತ ದಾಖಲೆಗಳು ದೊರಕುವುದು ವಸಾಹತು ಯುಗದಲ್ಲಿಯೇ. 19ನೆಯ ಶತಮಾನದಲ್ಲಿ ಹುಟ್ಟಿಕೊಂಡ ಪುರುಷ ಸಮಾಜ ಸುಧಾರಣಾ ಪ್ರಯತ್ನಗಳು ಭಾರತೀಯ ಮಹಿಳೆಯರ ಚರಿತ್ರೆಯ ದೃಷ್ಟಿಯಿಂದ ಬಹಳ ಮುಖ್ಯವಾದುದು. ಪಿತೃ ಪ್ರಧಾನ ವ್ಯವಸ್ಥೆಯೊಳಗೆ ಮಹಿಳೆಯರು ಕೊಂಚ ಅವಕಾಶಗಳನ್ನು ಪಡೆಯುವಂತದ್ದು. ಮಹಿಳೆಯರ ಬದುಕಿನಲ್ಲಿ ಬದಲಾವಣೆ ತರಬೇಕಾದ ಕಾಲ ಬಂದಿದೆ ಎಂಬುದು ಪುರುಷರ ನಿರ್ಧಾರದಿಂಲೇ. ಈ ಬದಲಾವಣೆ ಕಿಡಿಯನ್ನು ಹೊತ್ತಿಸಿದ್ದು, ಬ್ರಿಠೀಷರು. ಭಾರತೀಯ ಸಮಾಜದಲ್ಲಿ ಅವರು ತರಬಯಸಿದ ಬಹಳಷ್ಟು ಬದಲಾವಣೆಗಳು ಆಡಳಿತಾನುಕೂಲಕರವಾಗಿದ್ದುದೇ ಹೊರತು ಭಾರತೀಯ ತೀವ್ರ ಅಗತ್ಯಗಳಿಗೆ ಸಂಬಂಧಿಸರಲಿಲ್ಲ.

ಸುಧಾರಣಾವಾದಿ ಚಳುವಳಿಯು ಸ್ತ್ರೀಯ ಪಾರಂಪಾರಿಕ ಪಾತ್ರ ಕಲ್ಪನೆಯನ್ನು ಉಳಿಸಿಕೊಂಡೇ ಸುಧಾರಿತ ಸ್ತ್ರೀಯ ಪಾತ್ರದ ಮಾದರಿಯನ್ನು ಹೊಸತಾಗಿ ರೂಪಿಸಿತು. ಶಿಕ್ಷಣವನ್ನು ಪಡೆದ ಮಹಿಳೆ ತನ್ನ ಕೌಟುಂಬಿಕ ಕರ್ತವ್ಯಗಳನ್ನು ಮತ್ತೂ ಚೆನ್ನಾಗಿ ನಿರ್ವಹಿಸಲು ಶಕ್ತಳೆಂಬ ಅಭಿಪ್ರಾಯವು ಹೆಚ್ಚು ಜನರಿಂದ ಸ್ವೀಕೃತವಾಯಿತು.

1929 ರಲ್ಲಿ ಹುಟ್ಟಿಕೊಂಡ ಅಖಿತ ಭಾರತ ಸ್ತ್ರೀಯ ಸಮಾವೇಶದ ಅಧ್ಯಕ್ಷೆಯಾದ ಸರೋಜಿನಿ ನಾಯ್ಡು ರವರು ರಾಜಕೀಯೇತರ ಸಂಘಟನೆಯಾಗಿ ಅದನ್ನು ಬೆಳೆಸುವಲ್ಲಿ ಆಸಕ್ತರಾದರು. ಏಕೆಂದರೆ ಆ ಹೊತ್ತಿನ ಪಕ್ಷ ರಾಜಕಾರಣದಲ್ಲಿ ದೇಶದ ಸ್ವಾತಂತ್ರ್ಯದ ಪ್ರಶ್ನೆ ಪ್ರಮುಖವಾಗಿ ಮಹಿಳೆಯರ ಸಮಸ್ಯೆಗಳು ಗೌಣ ನೆಲೆಯನ್ನು ಹೊಂದಲಾರಂಭಿಸಿತು. ಆಗಾಗಿ ರಾಜಕೀಯ ಪಕ್ಷಗಳ ಅಭಾವದಿಂದ ಆಚೆ ಬಂದು ಮಹಿಳೆಯರ ಸಾಮಾಜಿಕ ಉನ್ನತಿಗೆ ಕಾರಣವಾಗುವಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕೆಂಬ ಯೋಜನೆ ಸರೋಜಿನಿ ನಾಯ್ಡು ಅವರದು. ರಾಜಕಾರಣದಲ್ಲಿ ಮಹಿಳೆಯು ಭಾಗವಹಿಸುವುದನ್ನು ಕುರಿತು ಸರೋಜಿನಿ ನಾಯ್ಡು ರವರು ಕಟ್ಟಿಕೊಂಡ ತಾತ್ವಿಕತೆ ಗಾಂಧೀವಾದದಿಂದ ಪ್ರೇರಿತವಾದುದು. ಆಧುನಿಕ ಮಹಿಳೆ ಸ0ಸ್ಕೃತಿಯ ಬೇರುಗಳಿಂದ ಸಶಕ್ತಳಾಗಬೇಕೆಂಬ ಆದರ್ಷವನ್ನು ಹೇಳುತ್ತಲೇ ಅದಕ್ಕೆ ಹೊಸ ಆಯಾಮವನ್ನು ಆಕೆ ಕಟ್ಟಿಸಿದಳು. ಭಾರತೀಯರಲ್ಲಿ ರಾಷ್ಟ್ರೀಯತೆಯನ್ನು ಬಿತ್ತಲು ಬಳಕೆಯಾದ ಮನೆ ಮಾತೆ ಮಕ್ಕಳು ಪರಿಕಲ್ಪನೆಯ ಮೂಲಕ ಮಹಿಳೆಗೆ ರಾಷ್ಟ್ರವೆಂಬ ವಿಶಾಲ ಮನೆಯ ಉದ್ದಾರಕ್ಕಾಗಿ ದುಡಿಯುವ ಅವಕಾಶವನ್ನು ಕಲ್ಪಿಸಿಕೊಡಲಾಯಿತು. ಮನೆಯೆಳಗಿನ ಸ್ತ್ರೀಮಾತ್ಮಕ ಗುಣಗಳು ಹೊರಗಿನ ಸಾಮಾಜಿಕ ಕಾರ್ಯಕ್ಷೇತ್ರದಲ್ಲಿ ಸಕ್ರಿಯವಾಗಿ ಬಳಕೆಯಾಗಬೇಕೇ ಹೊರತು ಕೇವಲ

ಆದರ್ಶವಾಗಿ ಉಳಿಯಬಾರದೆಂಬ ಪ್ರಗತಿಪರ ದೋರಣೆಯು ಸರೋಜಿನಿ ನಾಯ್ಡುರವರದ್ದಾಗಿತ್ತು. 1929 ರಿಂದ ಆರಂಭವಾದ ಅಸಹಕಾರ ಚಳುವಳಿಯಲ್ಲಿ ಮಹಿಳೆಯರು ಪಾಲ್ಗೊಂಡರು. ದಂಡಿಯ ಉಪ್ಪಿನ ಸತ್ಯಾಗ್ರಹಕ್ಕೆ ಮಹಿಳೆಯರನ್ನು ಸೇರಿಸಿಕೊಳ್ಳಲು ಗಾಂಧಿ ಮೊದಲು ಒಪ್ಪಿರಲಿಲ್ಲ. ಈ ಬಗ್ಗೆ ಗಾಂಧಿಯವರನ್ನೇ ಕಮಲ ನೇರವಾಗಿ ಕೇಳಿದರು. ಅಕ್ರಮವಾಗಿ ತಯಾರಾದ ಉಪ್ಪನ್ನು ಮಾರಿದ ಕಾರಣಕ್ಕಾಗಿ ಜೈಲು ವಾಸ ಜುಲ್ಮಾನೆ ಶಿಕ್ಷೆಗೆ ಅವರು ಒಳಗಾದರು. 1934 ರ ಹೊತ್ತಿಗೆ ಅವರ ರಾಜಕೀಯ ಧ್ಯೇಯ ಧೋರಣೆಗಳು ಮತ್ತಷ್ಟು ಸ್ಪಷ್ಟಗೊಂಡವು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಯಾದ ಕೆಲವು ಮಹಿಳೆಯರನ್ನು ಬಿಟ್ಟರೆ ಅಸಂಖ್ಯಾತ ಮಹಿಳೆಯರ ಭಾಗವಹಿಸುವಿಕೆಯ ಬಗ್ಗೆ ಸರಿಯಾದ ಮಾಹಿತಿ ದಾಖಲಾತಿ ಆಗಿಲ್ಲ. ಹಾಗಾಗಿ ಸ್ವತ0ತ್ರ್ಯ ಸಂಗ್ರಾಮದಲ್ಲಿನ ಪುರುಷರ ಸಾಧನೆಯನ್ನು ಮಾತ್ರ ಗುರುತಿಸುತ್ತಾ ಮಹಿಳೆಯರ ಸಾಧನೆಯ ಬಗ್ಗೆ ಮೌನವಾಗಿರುವ ಸಂಪ್ರದಾಯವು ನಮ್ಮ ಚರಿತ್ರಾಕಾರರಿಗೆ ರೂಢಿಯಾಗಿ ಹೋಗಿದೆ. ಸ್ವತಂತ್ರ್ಯ ಆಂದೋಲನದ ಪ್ರಮುಖ ದಾರಿಯಾದ ತೀವ್ರಗಾಮಿ ರಾಷ್ಟ್ರೀಯತಾ ವಾದವು ಗಾಂಧೀವಾದಕ್ಕಿಂತ ಭಿನ್ನವಾದ ತಾತ್ವಿಕತೆಯನ್ನ ಹೊಂದಿತ್ತು. ಸ್ವಾತಂತ್ರ್ಯ ಗಳಿಕೆಯ ಮಾರ್ಗೋಪಾಯ ಹಿಂಸೆಯನ್ನು ಬಳಸುವ ತೀರ್ಮಾನವನ್ನು ಕ್ರಾಂತಿಕಾರಿ ರಾಷ್ಟ್ರೀಯ ವಾದಿಗಳು ಹೊಂದಿದ್ದರು. ಕ್ರಾಂತಿಕಾರಿ ಹೋರಾಟಗಾರರಲ್ಲಿ ಮಹಿಳೆಯರೂ ಇದ್ದರು.

ಉಳಿದೆಲ್ಲಾ ಕ್ಷೇತ್ರಗಳಲ್ಲಿನಂತೆ ಉದ್ಯೋಗ ಕ್ಷೇತ್ರದಲ್ಲಿ ಕೂಡ ಸಮಕಾಲೀನ ಪಿತೃ ಪ್ರಧಾನವಾದ ಮಹಿಳೆಯ ವಿಚಾರವಾಗಿ ತನ್ನದೇ ಆದ ಸಂಸಚನಾತ್ಮಕ ಹೊಂದಾಣಿಕೆಯೊಂದನ್ನು ಏರ್ಪಡಿಸಿಕೊಂಡಿದೆ. ಮಹಿಳೆಯ ಉದ್ಯೋಗಾವಕಾಶ ಎಂಬ ಅಂಶವನ್ನು ಉದಾರವಾದಿ, ಪ್ರಗತಿಪರ, ಕ್ರಾಂತಿಕಾರಕ ಮುನ್ನಡೆಯೆಂದು ವಿವರಿಸಿಕೊಳ್ಳುತ್ತಲೇ ತನ್ನ ಯಜಮಾನನಾದ ಬೇರುಗಳನ್ನು ಸಡಿಲಪಡಿಸಿಕೊಂಡಿದೆ. ಪಿತೃ ಪ್ರಧಾನ ಸಮಾಜದ ಬದಲಾವಣೆಯ ಅಗತ್ಯಕ್ಕನುಗುಣವಾಗಿ ಮಹಿಳೆ ಉದ್ಯೋಗಾವಕಾಶವನ್ನು ನಿಯಮಿತವಾಗಿ ವಿಸ್ತರಿಸುತ್ತಾ ಹೋಗುವುದು. ಪುರುಷನು ತೆರವುಗೊಳಿಸಬೇಕಾದ ಸ್ಥಳಗಳನ್ನು ಮಹಿಳೆಯರ ಅತ್ಯುತ್ತಮ ಅವಕಾಶಗಳೆಂದು ನಂಬಿಸಿ ಪ್ರೋತ್ಸಾಹಿಸುವುದು ಅದರ ಒಂದು ಬಗೆಯಾದರೆ ತನ್ನ ಪ್ರತಿನಿಧಿಯಾಗಿ ಅವಳನ್ನು ಪ್ರತಿಷ್ಟಾಪಿಸುವುದು ಇನ್ನೊಂದು ಬಗೆಯಾಗಿದೆ. ಹಾಗೂ ಈ ಎರಡೂ ಅಂಶಗಳು ಮಹಿಳೆಯ ಉದ್ಯೋಗ ಕ್ಷೇತ್ರವೊಂದನ್ನು ಸದಾಕಾಲ

ನಿರ್ದೇಶಿಸುತ್ತಿದ್ದು, ಅದರ ಮೇಲೆ ಎಲ್ಲಾ ಬಗೆಯ ನಿಯಂತ್ರಣವನ್ನು ಹೊಂದಿದೆ. ಹಾಗಾಗಿ ಉದ್ಯೋಗಿ ಸಂಬಂಧಿತವಾದ ಮಹಿಳೆಯ ಪ್ರಗತಿ ಅವನತಿಗಳೆರಡೂ ಲಕ್ಷ್ಮಣರೇಖೆಯೊಳಗಿನ ಸಂಗತಿಗಳಾಗಿವೆ.

ಮಹಿಳಾ ಚಳುವಳಿಗಳ ಲಕ್ಷ್ಯವನ್ನು ಕದಲಿಸುವ ರೀತಿಯಲ್ಲಿ ವರಮಾನ ತೆರಿಗೆಯಲ್ಲಿ ವಿನಾಯಿತಿ, ಅರೆಕಾಲಿಕ ಉದ್ಯೋಗ ಅವಕಾಶ, ಮನೆಗಳಲ್ಲಿ ಮಾಡಬಹುದಾದ ತುಂಡು ತುಂಡು ಕೆಲಸಗಳು ಇತ್ಯಾದಿ ಮಹಿಳೆಯರಿಗೆ ಅತ್ಯುಪಯುಕ್ತವಾದವು ಎಂಬುದನ್ನು ಕಲ್ಯಾಕಾರಿ ಸಮಾಜ ಮೌಲ್ಯವು ಬಿತ್ತುತ್ತಿದೆ. ಇಲ್ಲಿ ಎಲ್ಲಿಯಾದರೂ ಒಂದು ಕಡೆ ಅಲ್ಪ ಪ್ರಮಾಣದಲ್ಲಿ ಕುಟುಂಬ ಸಂಸ್ಥೆಗೆ ನೆರವಾದಂತೆ ಕಂಡು ಬರುವುದಾದರೂ ಮಹಿಳೆಯ ವ್ಯಕ್ತಿತ್ವ ಬೆಳವಣಿಗೆಯಲ್ಲಲ್ಲ. ವರಮಾನ ತೆರಿಗೆಯ ವಿನಾಯಿತಿ ಸವಲತ್ತು ಯಾವ ವರ್ಗದ ಮಹಿಳೆಯರನ್ನು ಕುರಿತದ್ದಾಗಿದೆಯೆಂಬ ಪ್ರಶ್ನೆಯನ್ನು ಬಿಟ್ಟುಕೊಟ್ಟರೂ ಉದ್ಯೋಗಸ್ತ ಮಹಿಳೆಯ ಆರ್ಥಿಕ ಸ್ವಾತಂತ್ರ್ಯದ ವಿಚಾರವು ಹಲವಾರು ಅನುಮಾನಗಳಿಗೆ ಎಡೆ ಮಾಡಿದೆ. ಮಹಿಳೆಯ ಉದ್ಯೋಗಕ್ಕೂ ಕುಟುಂಬಕ್ಕೂ ಆರ್ಥಿಕ ಚೇತರಿಸುವಿಕೆಗೂ ಇರುವಷ್ಟರ ಮಟ್ಟಿಗಿನ ನೇರ ಸಂಬಂಧ ಮಹಿಳೆಯ ಆರ್ಥಿಕ ಸ್ವಾತಂತ್ರ್ಯದೊಂದಿಗಿಲ್ಲ. ಹಾಗಾಗಿ ಇಂತಹ ಸೌಲಭ್ಯಗಳು ಕುಟುಂಬದ ನೆಲೆಯಲ್ಲಿ ಹೆಚ್ಚು ಉಪಯುಕ್ತವಾಗಬಹುದಾಗಿದ್ದು, ಅದರ ಅಂಶವಾಗಿ ಮಾತ್ರ ತಲುಪಬಹುದು. ಮಹಿಳೆಯನ್ನು ಕುಟುಂಬಕ್ಕೆ ಸೀಮಿತಗೊಳಿಸಲಾಗದ ಕುಟುಂಬವನ್ನು ಸಂಪೂರ್ಣವಾಗಿ ಆಧುನೀಕರಣಗೊಳಿಸಲು ಮನಸ್ಸಿಲ್ಲದ ಸ್ಥಿತಿಯ ಪರಿಹಾರವಾಗಿ ಮಹಿಳೆಯರಿಗೆ ಅರೆ ಕಾಲಿಕ ಉದ್ಯೋಗಗಳು ಅತ್ಯುತ್ತಮವೆಂದು ಪ್ರತಿಪಾದಿಸಲಾಗುತ್ತಿದೆ. ಏಕೆಂದರೆ ಅರೆಕಾಲಿಕ ಉದ್ಯೋಗಗಳಲ್ಲಿರುವ ಮಹಿಳೆಯರನ್ನು ಅತ್ಯಂತ ಸುಲಭವಾಗಿ ತನಗೆ ಬೇಕೆಂದಾಗ ಕುಟುಂಬದೊಳಗೆ ಸೆಳೆದುಕೊಳ್ಳುವ ಅಥವಾ ದುಡಿಮೆಗೆ ಹಚ್ಚುವ ಅವಕಾಶಗಳಿರುತ್ತವೆ. ಇದರಿಂದಾಗಿ ಉದ್ಯೋಗಸ್ಥ ಮಹಿಳೆಯ ಗುರುತೊಂದು ಬಲವಾದ ರಾಜಕೀಯ ಇಚ್ಛಾಶಕ್ತಿಯೊಂದಿಗೆ ಸಮಾಜದಲ್ಲಿ ಉಗಮಗೊಳ್ಳುವುದಿಲ್ಲ.

## ೩.೨ ವೃತ್ತಿ ನಿರತ ಮಹಿಳೆಯರ ಬದಲಾದ ಸ್ಥಾನಮಾನ

ಜೀವನವೆಂದರೆ ನಿರಂತರ ಪರಿವರ್ತನೆ, ಹಳೆಯದನ್ನು ಸಂರಕ್ಷಿಸಬೇಕು ಹಾಗೂ ಬೇಡದ್ದನ್ನು ಬದಲಾಯಿಸಬೇಕು.ಬದಲಾವಣೆಯ ಮೂಲಕ ಸಮತೋಲನವನ್ನು ಸಮನ್ವಯತೆಯನ್ನು ಕಾಪಾಡಿಕೊಳ್ಳಬೇಕು. ಇದರೊಂದಿಗೆ ಔಚಿತ್ಯ, ವಿವೇಕ, ಅವಿವೇಕ ಎಲ್ಲವೂ ಒಳಗೊಂಡಿರುತ್ತದೆ. ಹಳೆಯ ಜೀವನ, ಹೊಸತಿಗೆ ದಾರಿ ಮಾಡಿಕೊಡುತ್ತದೆ. ಹಾಗೆಯೇ ಎಲ್ಲವನ್ನೂ ಹುಡುಕುವ, ಸಂಶೋಧಿಸುವ, ನೆಲೆಬೆಲೆ ಕೊಡುವ ಪ್ರಕ್ರಿಯೆ ಆರಂಭವಾಗುತ್ತಿದೆ. ಭಾರತದ ಸಂವಿಧಾನ, ಕಾನೂನು ಶಾಸನ ರಚನೆಗಳಲ್ಲಿ ಸ್ತ್ರೀಪರವಾದ ಅಂಶಗಳನ್ನು ಜೋಡಿಸುವುದು, ಸರ್ಕಾರದ ಯೋಜನೆ ಮತ್ತು ಕಾರ್ಯಕ್ರಮಗಳಲ್ಲಿ ಸ್ತ್ರೀ ಸಮುದಾಯಕ್ಕೆಂದೇ ಗಣನೀಯ ಭಾಗವನ್ನು ಮೀಸಲಿಡುವುದು ಈಗ ಅನಿಯವಾರ್ಯವಾಗಿದೆ. ಕೇವಲ ಇಷ್ಟು ಮಾತ್ರದಿಂದ ಮಹಿಳೆಯರ ಸ್ಥಿತಿಗತಿ ಸುಧಾರಣೆಯಾಗಿ ಸ್ಥಾನಮಾನ ಮೇಲೇರುವುದಿಲ್ಲ. ಆದರೆ ಹೋರಾಟದ ಮುಂದೆ ಹಂತಕ್ಕೆ ಇದು ಆಧಾರವಾಗುವುದು ಸ್ಪಷ್ಟ. ಆದರೆ ಇದರಿಂದ ಮೂಲಭೂತ ಸಮಸ್ಯೆಗಳ ಪರಿಹಾರವಾಗುವುದಿಲ್ಲ. ಇಡೀ ಸಮಾಜದ ಪಿತೃ ಪ್ರಧಾನ ವ್ಯವಸ್ಥೆಯ ಪ್ರವೃತ್ತಿಗಳಲ್ಲಿಯೇ ಮೂಲಭೂತ ಪರಿವರ್ತನೆಗಳನ್ನು ತರುವುದು ಖಂಡಿತಾ ಸುಲಭವಾದ ಕಾರ್ಯವಲ್ಲ. ಆದರೂ ಸರ್ಕಾರವನ್ನು ಒಳಗೊಂಡು ಎಲ್ಲಾ ಸಾರ್ವಜನಿಕ ವಲಯಗಳಲ್ಲಿ ಸ್ತ್ರೀ ಸಮುದಾಯವು ಎದುರಿಸುತ್ತಿರುವ ತಾಂತ್ರಿಕ ಸಮಸ್ಯೆಗಳನ್ನು ಹೋರಾಟದಿಂದ ಪರಿಹಾರಿಸಿಕೊಳ್ಳಲು ಸಾಧ್ಯವಿದೆ.

ಮಹಿಳಾ ಸಾಕ್ಷರತೆಯಲ್ಲಿ ನಿರೀಕ್ಷಿಸಿದಷ್ಟು ಪ್ರಗತಿ ಸಾಧಿಸದಿದ್ದರೂ ಸಾಕಷ್ಟು ಮಾರ್ಪಾಡು ಕಂಡು ಬರುತ್ತದೆ. ಮಹಿಳೆಯರು ಸಾಧಿಸಿದ ಪ್ರಗತಿ 102 ಪ್ರಮುಖ ದೇಶಗಳ ಪೈಕಿ ಭಾರತ 95 ನೇ ಸ್ಥಾನದಲ್ಲಿದೆ. ದೇಶದ ವಯಸ್ಕ ಮಹಿಳೆಯರ ಸಾಕ್ಷರತೆ ಕೇವಲ ಶೇ. 37.7 ರಷ್ಟಿದೆ ಎಂದರೆ ಶಿಕ್ಷಣ ಕ್ಷೇತ್ರದಲ್ಲಿ ಮಹಿಳೆಯರ ಮುನ್ನಡೆ ಇನ್ನೂ ಕಡಿಮೆ ಇದ್ದು, ಸಾಕಷ್ಟು ಒತ್ತಡ, ಒತ್ತಾಸೆಯ ಮೂಲಕ ಸಾಕ್ಷರತೆಯನ್ನು ಸಾಧಿಸಬೇಕಾಗಿದೆ. ಉನ್ನತ ಶಿಕ್ಷಣ ವೃತ್ತಿಪರ ವ್ಯಾಸಂಗಗಳಲ್ಲಿ ಯುವತಿಯರು ಅತ್ಯಂತ ವೇಗವಾಗಿ ಹುಡುಗರನ್ನು ಮೀರಿಸಿ ಮುಂದುವರೆದಿದ್ದಾರೆ. ಇಂಜಿನಿಯರಿಂಗ್ ಕಂಪ್ಯೂಟರ್ ಕ್ಷೇತ್ರಗಳಲ್ಲಿ ಮಹಿಳೆಯರು ದಾಪುಗಾಲು ಇಟ್ಟಿದ್ದಾರೆ. ಅದರ ಪರಿಣಾಮವಾಗಿ ವಿವಾಹ, ಕುಟುಂಬ ಮುಂತಾದ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಈಗ ಆಯ್ಕೆ, ಪ್ರಾಶಸ್ತ್ಯ ಹೆಚ್ಚಾಗಿದೆ. ಮುಖ್ಯವಾಗಿ ಸ್ವಾವಲಂಭಿ ತರಹ ಈಗ ಮಹಿಳೆಯರಲ್ಲೂ ಸಹ ಮೂಡಿದೆ. ಹಾಗಾಗಿ ಅದಕ್ಕೆ ಬೇಕಾದ ದೃಢ ಮನೋಭಾವ

ಪರಿಶ್ರಮವನ್ನು ಪ್ರಯತ್ನಿಸುತ್ತಿದ್ದಾರೆ. ಇದರ ಪರಿಣಾಮವಾಗಿ ಸಾವಿರಾರು ರೂಪಾಯಿಗಳ ಹಣಗಳಿಕೆ, ಆತ್ಮಬಲ ಸ್ವಾಭಿಮಾನವನ್ನು ತಂದುಕೊಟ್ಟಿದೆ. ವಿವಾಹ ಕೂಡ ಹುಡುಗಿಯರ ಆಯ್ಕೆಯಂತೆ ನಡೆಯುವ ಪ್ರಸಂಗಗಳು ಹೆಚ್ಚಿವೆ. ಗ್ರಾಮಾಂತರ ಪ್ರದೇಶಗಳ ಕ್ಷಿಪ್ರಗತಿಯ ಮಹಿಳಾ ಆರ್ಥಿಕ ಸಬಲತೆ ಇಲ್ಲವಾದರೂ ಮಾಧ್ಯಮಗಳ ಮೂಲಕ ಅಲ್ಲಿಯೂ ಸಾಕಷ್ಟು ಜಾಗ್ರತೆ ಮೂಡುತ್ತಿದೆ. ಕೇವಲ ಗಗನಸಖಿಯರಾಗಿ ನೇಮಕ ಹೊಂದುತ್ತಿದ್ದ ಮಹಿಳೆಯರು ಅದರಲ್ಲೂ ಪರಿಶಿಷ್ಟ ಜಾತಿ ಪಂಗಡ ಹಿಂದುಳಿದ ವರ್ಗಗಳಿಗೆ ಸೇರಿದ ಯುವತಿಯರು ವಿಮಾನ ಚಾಲಕರಾಗುವ ಅವಕಾಶ ಒದಗಿದೆ. ಪುರುಷ ಕೇಂದ್ರಿತ ಮೀಸಲು ಪೊಲೀಸ್ ಪಡೆಯಲ್ಲಿ ಮೊದಲ ಬಾರಿಗೆ ಮಹಿಳಾ ಪಡೆ ಆರಂಭವಾಗಿದೆ. ವಿಶ್ವಸಂಸ್ಥೆಯ 21ನೇಯ ಶತಮಾನ ಆರಂಭಗೊಳ್ಳುವ ಮೊದಲೇ ಪ್ರಪಂಚದಾದ್ಯಂತ ಲಿಂಗಬೇಧಕ್ಕೆ ವಿದಾಯ ಹೇಳಬೇಕೆಂದು ಕರೆ ನೀಡಿತ್ತು.

ಮಹಿಳೆಯು ವೃತ್ತಿಯಲ್ಲಿ ನಿರತಳಾಗಿರುವುದರ ಜೊತೆಗೆ ಹೆಂಡತಿ, ತಾಯಿ ಎಂಬ ಗೃಹಿಣಿ ಕರ್ತವ್ಯಗಳನ್ನು ನಿರ್ವಹಿಸುತ್ತೇವೆ. ಮಹಿಳೆಯರ ದುಡಿಮೆಯನ್ನು ಕುರಿತು ಮೇಲೆ ಹೇಳಿದ ರೀತಿಯ ಸ್ಮೃತಿ ಚಿತ್ರಗಳು ವಿವರಗಳಲ್ಲಿ ದೊರೆಯುವುದು ಬಹಳ ಅಪರೂಪ. ೧೯ನೇ ಶತಮಾನದಲ್ಲಿ ಕೂಡ ಮಹಿಳೆಯರ ದುಡಿಮೆಯನ್ನು ಕುರಿತ ಮಾಹಿತಿಗಳು ತೀರಾ ಅಸ್ಪಷ್ಟವಾಗಿದ್ದು, ಅವುಗಳ ಸುಕ್ತ ವಿಶ್ಲೇಷಣೆ ಎಂಬುವಂತೂ ಏನೇನೂ ನಡೆದಿಲ್ಲವೆಂಬ ಸಂಗತಿ ದುರದೃಷ್ಟಕರ. ದುಡಿಯುವ ಮಹಿಳೆಯರ ಮೇಲೆ ವಸಾಹತು ಆಡಳಿತ ಪರಿಣಾಮಗಳ್ಳ ಯಾವ ಸ್ವರೂಪವಾಗಿದ್ದ ಎಂಬುದನ್ನು ಶೋಧಿಸಲು ಹೊರಟ ಇತಿಹಾಸ ಸಂಶೋಧಕರಿಗೆ ಈ ಕುರಿತು ನಂಬಲರ್ಹವಾದ ಮಾಹಿತಗಳನ್ನು ದೊರಕಿಸಿಕೊಳ್ಳುವುದೇ ಒಂದು ದೊಡ್ಡ ಸಮಸ್ಯೆಯಾಗಿ ಬಿಡುತ್ತದೆ.

ಮಹಿಳೆಯರಿಗೆ ವೃತ್ತಿಗಳಲ್ಲಿ ಅವಕಾಶಗಳು ತೆರೆದು ನಗರದ ಉದ್ಯಮ ಕ್ಷೇತ್ರಗಳಲ್ಲಿ ಅವರಿಗೆ ಉದ್ಯೋಗಾವಕಾಶಗಳು ದೊರೆಯತೊಡಗಿದ್ದು ಮಾತ್ರ ಬ್ರಿಟೀಷ್ ಅಧಿಪತ್ಯದ ಪರಿಣಾಮದಿಂದಲೇ ಎಂಬುದಂತೂ ನಿಜ ವಸಹಾತು ಆಡಳಿತವು ಸಾಂಪ್ರದಾಯಿಕ ಆರ್ಹಿಕ ವ್ಯವಸ್ಥೆಯನ್ನೇ ಪರಿವರ್ತನೆ ಒಳಪಡಿಸಿ ಬಿಟ್ಟಿತು. ಈ ಪ್ರಕ್ರಿಯೆಯಲಿ ಕೃಷಿಯೇತರ ಮತ್ತು ಗ್ರಾಮೀಣ ಆರ್ಥಿಕತೆಯನ್ನು ವ್ಯತ್ಯಯಗೊಳಿಸಿತು. ಸ್ಥಳೀಯ ಆರ್ಥಿಕತೆಯು ದುರ್ಬಲಗೊಳ್ಳುತ್ತಾ ಹೋದಂತೆ, ಚಿಕ್ಕ ಪುಟ್ಟ ಸೇವಾ ಕ್ಷೇತ್ರಗಳಲ್ಲೂ ಉದ್ಯೋಗದಲ್ಲಿದ್ದ

ಮಹಿಳೆಯರುನಿರುದ್ಯೋಗಿಗಳಾಗ ತೊಡಗಿದರು. ಈ ಮೊದಲು ಮಹಿಳೆಯರು ಚಿಕ್ಕ ಪುಟ್ಟ ದುಡಿಮೆ ಕ್ಷೇತ್ರಗಳಲ್ಲಿನ ಬಹುವ್ಯಾಪ್ತಿಯ ಎಲ್ಲ ಕೆಲಸಗಳನ್ನು ಮಾಡುತ್ತಿದ್ದರು.

**ಆಧುನಿಕ ಕಾಲದಲ್ಲಿ ಮಹಿಳೆ**

ವಸಹಾತು ಆಡಳಿತದ ಪರಿಣಾಮವಾಗಿ ರೂಪುಗೊಂಡ ಆಧುನಿಕ ಆರ್ಥಿಕ ಕ್ಷೇತ್ರವು ಮಹಿಳೆಯರಿಗೆ ಹೊಸ ಉದ್ಯೋಗಾವಕಾಶಗಲನ್ನು ಒದಗಿಸಿತು. ಉದಾಹರಣೆಗೆ ಶಿಕ್ಷಣ ಹಾಗ್ ವೈದ್ಯಕೀಯ ಕ್ಷೇತ್ರಗಳಲ್ಲಿ ಹಲ ಕೆಲವು ಮಹಿಳೆಯರುವೃತಿನಿರತವಾಗುವುದು ಸಾಧ್ಯಯಾಯಿತು. ಕಾರ್ಖಾನೆಗಳು, ಗಣಿಗಳು ಹಾಗೂ ಪ್ಲಾಂಟೆಷನ್ಗಳಲ್ಲಿಯೂ ಅಪಾರ ಸಂಖ್ಯೆಯ ಮಹಿಳೆಯರುದುಡಿಯತೊಡಗಿದರು. ಆದರೆ ಈ ಕ್ಷೇತ್ರಗಲಲ್ಲಿ ದುಡಿಯುವ ಸಂದರ್ಭಗಳು ಮಾತ್ರ ತೀರಾ ಶೋಚನೀಯ ಹಾಗೂ ಕಷ್ಟದಾಯಕ ಸ್ಥಿತಿಗಳಿಗೆ ಆಗಿದ್ದವು, ಹಾಗಾಗಿ ಈ ಕ್ಷೇತ್ರಗಳಲ್ಲಿನ ದುಡಿಮೆಯ ಅವಕಾಶಗಳನ್ನು ಸಕಾರಾತ್ಮಕವೆಂದು ಪರಿಗಣಿಸುವುದು ಸಾಧ್ಯವಾಗಲಾರದು.

೧೯೨೦ ಹಾಗೂ ೩೦ರ ದಶಕದಲ್ಲಿ ಮಹಿಳಾ ಸಂಸ್ಥೆಗಳು ಶಿಕ್ಷಣ ಹಾಗೂ ವೈದ್ಯಕೀಯ ಸೇವಾ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಅವಕಾಶಗಳು ದೊರೆಯಬೇಕೆಂದು ಒತ್ತಾಯಿಸತೊಡಗಿದವು. ಇದು ಸಾಧ್ಯಬೇಕದರೆ ಈ ಕ್ಷೇತ್ರಗಳಲ್ಲಿನ ಮಹಿಳೆಯರಿಗೆ ಪ್ರತ್ಯೇಕ ಸಂಸ್ಥೆಗಳನ್ನು ಸ್ಥಾಪಿಸುವುದು ಅವಶ್ಯವಾಗಿತ್ತು.

ಹೇಗೂ ಮಹಿಳೆಯರಿಗೆಂದೇ ಪ್ರತ್ಯೇಕವಾದ ಸಂಸ್ಥೆಗಳನ್ನು ಸ್ಥಾಪಿಸುವುದು ಸೂಕ್ತ ಎಂದು ಮಹಿಳಾ ನೇತಾರರು ಒತ್ತಾಯಿಸಿದರು. ಇಲ್ಲಿ ಸೃಷ್ಟಿಚಾದ ನೌಕರಿಗಳಾದ ಕೂಡ. ಈ ನೈತಾರರಿಗೆ ಅನುಗುಣವಾಗಿಯೇ ಹಾಗೂ ಸ್ತ್ರೀ ಪುರುಷರೆಂಬ ಬೇದವಿಲ್ಲದೆ ಎಲರೊಡನೆಯೂ ಸುಲಭವಾಗಿ ಬೆರೆಯಬಲ್ಲವರೂ ಆದವರು. ೧೯ ನೇ ಶತಮಾನದ

ಪೂರ್ವಾರ್ಧಕ ವೇಳೆಗೆ ಭಾರತೀಯ ನಾರಿಯರಿಗೆ ತೆಗೆದುಕೊಂಡ ಹೊಸ ಉದ್ಯೋಗಾವಕಾಶಗಳಲ್ಲಿ ವೈದ್ಯಕೀಯ ಕ್ಷೇತ್ರವೂ ಒಂದು.

**ಕಾರ್ಖಾನೆ ನೌಕರಿಗಳು**

೧೮೫೦ ರ ದಶಕದ ಸುಮಾರಿಗೆ ಆ ರಂಭಗೊಂಡ ಹತಿ ಮತ್ತು ಸೆನಸಿನ ಗಿರಣಿಗಳು ಮಹಿಳೆಯರಿಗೆ ನೌಕರಿಗಳನ್ನು ಕೊಟ್ಟಿದ್ದಾರೆ. ಆದರೆ ಈ ಬಗ್ಗೆ ೧೯೧೧ ರಿಂದಾಚೆಗಷ್ಟೆ ಖಚಿತವಾದ ದಾಖಲೆಗಳು ದೊರೆಯುವುದು. ೧೮೯೧ರ ದಶಕದಲ್ಲಿ ಮುಂಬಯಿ ಬಟ್ಟೆ ಕಾರ್ಖಾನೆಗಳು ಸುಮಾರು ಒಂದು ಲಕ್ಷದಷ್ಟು ಕೆಲಸಗರರನ್ನು ನೇಮಿಸಿಕೊಂಡಿದ್ದವು ಎಂದು ಅಂದಾಜು ಮಾಡಲಾಗಿದೆ. ಈ ಪೈಕಿ ಪ್ರತಿಶತ ೨೦–೨೫ ರಷ್ಟು ಮಹಿಳೆಯರುಇವರಲ್ಲಿ ಮುಕ್ಕಾಲು ಪಾಲು ಪೂರ್ನಾಅವಾಧಿ ಕೆಲಸಗಾರರು. ಈ ವೇಳೆಯಲ್ಲಿ ಬಂಗಾಲದ ಸೆಣಸಿನ ಗಿರಣಿಗಳಲ್ಲಿ ಸುಮಾರು ಹದಿನಾಲ್ಕು ಸಾವಿರ ಮಹಿಳೆಚುರಿದ್ದರು. ಇವರೂ ಕೂಡ ತಜ್ನತೆ ಬೇರಿಲ್ಲದ ಭಾಗದ ಕೆಲಸಗಳನ್ನಷ್ಟೇ ಮಾಡುತ್ತಿದರು.

**ಗಣಿಗಳಲ್ಲಿ ಕೆಲಸ**

೧೯೨೦ ರ ದಶಕದ ಮಧ್ಯದ ವೇಳೆಗೆ ಗ್ವಣಿ ಕೆಲಸಗಾರರ ೩ ನೇ ೧ ಭಾಗದಲ್ಲಿ ಮಹಿಳೆಯರುಇದ್ದರು. ಮಧ್ಯ ಪ್ರಾಂತ್ಯಗಳಲ್ಲಿ ಗಣಿ ಕೆಲಸಗಾರರಲ್ಲಿ ಪ್ರತಿಶತ ೫೬.೬ ರಷ್ಟು ಮಹಿಳೆಯರಿದ್ದು ಈ ಪೈಕಿ ಶೇ. ೪೭ ರಷ್ಟು ಮಹಿಳೆಯರು ಗಣಿಗಳ ನೆಲದಾಳದಲ್ಲಿ ಕೆಲಸಮಾಡುತ್ತಿದ್ದರು. ಬಂಗಾಳದ ಗಣಿಗಳಲ್ಲಿ ೩೫ ಪ್ರತಿಶತ ಮಹಿಳಾ ಕೆಲಸಗಾರರಾಗಿದ್ದು, ನೆಲದಾಳದಲ್ಲಿ ಕೆಲಸ ಮಾಡುವವರಲ್ಲಿ ಪ್ರತಿಶತ ೩೪ ಮಹಿಳೆಯರಿದ್ದರು. ಇನ್ನಿತರ ಪ್ರಾಂತ್ಯಗಳ ಗಣಿ ಕಾರ್ಮಿಕರಲ್ಲಿ ಮಹಿಳೆಯರುಸಂಖ್ಯೆ ಕಡಿಮೆಯೇ ಇತ್ಾದರೂ ಅವರಲ್ಲಿ

ಮೂರನೆಯ ಒಂದು ಭಾಗದಷ್ಟು ಮಹಿಳೆಯರುನೆಲದಾಲದಲ್ಲಿ ಕೆಲಸ ಮಾಡುತ್ತಿದ್ದರೆಂಬುದು ಗಮನಿಸಬೇಕಾದ ಸಂಗತಿ.

**ಮಹಿಳಾ ಸಂಸ್ಥೆಗಳು ಹಾಗೂ ಕಾರ್ಮಿಕ ವಿಷಯಗಳು**

ರಾಯಲ್ ಕಮಿಷನ್ ಪದೇ ಪದೇ ನಡೆಸುತ್ತಿದ್ದು ವಿಚಾರಣೆಗಳಿಗೆ ಹಗೂ ಐ.ಎಲ್.ಒ. ನೀಡುತ್ತಿದ್ದ ಪ್ರೋತ್ಸಾಹ ಬೆಂಬಲಗಳಿಗೆ ಪ್ರತಿಯಾಗಿ ಮಹಿಳಾ ಸಂಸ್ಥೆಗಳು ಕಾರ್ಖಾನೆಗಳ ಮಹಿಳಾ ಕಾರ್ಮಿಕರ ಬಗೆಗೆ ವಿಶೇಷ ಆಸಕ್ತಿ ತಳೆಯ ತೊಡಗಿದವು. ಹೀಗೆ ಹೊರಗಿನ ಪ್ರೇರಣೆಗಳು ದೊರೆಯುವ ಮೊದಲಿಂತೂ ಈ ಸಂಸ್ಥೆಗಳು ತಮಗೆ ಮಹತ್ವದವೆನಿಸಿದ ನಾಗರಿಕ ಹಕ್ಕುಗಳು, ಶಿಕ್ಷಣ, ಸಾಮಾಜಿಕ ಪರಿಸರಗಳೆಂಬುತ್ತದೆ ವಿಷಯಗಳನ್ನಷ್ಟೇ ಕಾಡುವುದು ಎಂದು ಅವರು ನಂಬಿದ್ದರು.

ಸ್ವತ: ಅವರಿಗಂತೂ ಸಂಬಳ ಸಾರಿಗೆಗಳ ಅಗತ್ಯಕ್ಕಾಗಿ ಕೆಲಸ ಮಾಡುವುದು ಎಂದರೇನೆಂಬುದೇ ಅನುಭವಕ್ಕೆ ಬಂದಿರಲಿಲ್ಲ. ಮಧ್ಯಮ ವರ್ಗದ ಮಹಿಳೆಯರಲ್ಲೂ ದುಡಿಯುಇವವರ ಸಂಖ್ಯೆ ಶೇಕಡಾ ೨ರಷ್ಟು ಕವಾಡ ಇರಲಿಲ್ಲ. ಇನ್ನು ಶ್ರೀಮಂತ ಮಹಿಳೆಯರಿಗಂತೂ ದುಡಿದುಗಳಿಸುವ ಸಂಧರ್ಭದ ಕಲ್ಪನೆಯೂ ಇರಲಿಲ್ಲ.

**೩.೩ ವೃತ್ತಿನಿರತ ಮಹಿಳಾ ಸಮಸ್ಯೆಗಳು**

ಭಾರತೀಯ ಮಹಿಳೆ ಮಧ್ಯಮ ಯುಗದಲ್ಲಿ ಅನುಭವಿಸಿದ ಸ್ಥಾನಮಾನಗಳ ಅಧೋಗತಿಯ ಕಥೆ ಕರುಣಾಜನಕವಾಗಿದೆ. ಅಂದಿನ ಮಹಿಳಾ ಜೀವನ ಸಮಸ್ಯೆಗಳ ಆಗರವಾಗಿತ್ತು. ಸಮಸ್ಯೆಗಳಿಂದ ತುಂಬಿ ತುಳುಕುತ್ತಿತ್ತು. ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಧಾರ್ಮಿಕ ಮುಂತಾದ ಆಂದೋಲನಗಳ ಪಲದಿಂದ, ಅಲ್ಲದೇ ಕೈಗಾರಿಕಾಕರಣ, ನಗರೀಕರಣ, ಪಾಶ್ಚಾತ್ಯಕರಣ, ಆಧುನಿಕರಣ ಮೊದಲುದ ಬೆಳವಣಿಗೆಗಳೀಂದ ಅಂದಿನ

ಸಮಸ್ಯೆಗಳು ಇಂದು ಕ್ಷಣ್ಮರೆಯಾಗಿವೆ ಎಂಬುದು ಸತ್ಯ ಸಂಗ್ತಿತಿಯಾಗಿದೆ. ಆದರೆ ಭಾರತೀಯ ಮಹಿಳೆ ಇಂದು ಸಮಸ್ಯೆಗಳಿಂದ ಸಂಪೂರ್ನ ಮುಕ್ತಳಾಗಿದ್ದಾಳೆ.

ಸಾಮಾಜಿಕವಾಗಿ ಮಹಿಳೆಯರ ಸ್ಥಾನಮಾನ ಮತ್ತು ಸ್ವಾತಂತ್ರ್ಯ ಇನ್ನೂ ಕೆಳಮಟ್ಟದಲ್ಲಿವೆ. ಗಾಂಧೀಜಿವರು ಹೇಳಿದಂತೆ ನಡುರಾತ್ರಿಯಲ್ಲಿ ಮಹಿಳೆಯರು ಒಬ್ಬಂಟಿಯಾಗಿ ತಿರುಗಾಡುವ ಅವಕಾಶವಿದ್ದಂತೆ, ಅದು ನಿಜವಾದ ಸ್ವಾತಂತ್ರ್ಯ ಪ್ರಾಯಶ: ಮಹಿಳೆಗೆ ದುರ್ಬಲವೆನಿಸುತ್ತದೆ. ಏಕೆಂದರೆ ಹಾಡು ಹಗಲಿನಲ್ಲಿ ಅತ್ಯಾಚಾರ, ಮಾನನಷ್ಟ ಮಾಡುವ, ಆಸಿಡ್ ಎರಚಿ ಕ್ರೌರ್ಯತೆ ತೋರುವ ಮೃಗಿಯ ಪುರುಷ ಶಕ್ತಿಗಳಿರುವಾಗ ಮಹಿಳೆಯ ಬದುಕು ಎಷ್ಟು ಸುರಕ್ಷಿತ? ಹೀಗಾಗಿ ಸಂಕಷ್ಟಗಳ ಸುಡುಮಳೆಯೇ ಇದೆ. ಶಿಶು ಹತ್ಯೆ, ಶಾಲೆ ಬಿಡುವುದು, ಹೆಣ್ಣು ಮಕ್ಕಳ ಬಗ್ಗೆ ತಾತ್ಸಾರ, ಬಾಲಾಪರಾಧ, ಬಾಲ ಕಾರ್ಮಿಕ ಪದ್ಧತಿ, ಅಪಹರನ, ಮಾರಾಟ, ಬಾಲ ವೇಶ್ಯಾವಾಟಿಕೆ, ಬಾಲ್ಯ ವಿವಾಹ ಮುಂತಾದ ಎಲ್ಲಾ ಸಮಸ್ಯೆಗಳು ಮಹಿಳೆಯರನ್ನೇ ಸುತ್ತಿಕೊಂಡಿದೆ. ಇವುಗಳನ್ನು ಪರಿಹಾರವಾಗುವ ಬಗೆ ಹೇಗೆ? ಇನ್ನು ಬಡತನ, ವೇತನ, ಅತಾರಮನ್ಯ ಲೈಂಗಿಕ ಕಿರುಕುಳ, ಕೌಟುಂಬಿಕ ಹಿಂಸೆ, ವರದಕ್ಷಣೆ ಪಿಡುಗು, ದೇವದಾಸಿ , ಸಮೂಹ ಮಾಧ್ಯಮಗಳಲ್ಲಿ ದುರ್ಬಳಕೆ, ಧಾರ್ಮಿಕ ಹಿನ್ನೆಲೆಯಲ್ಲಿ ಶೋಷಣೆ, ಇನ್ನೂ ಲ್ತಿಯಲ್ಲಿರುವ ಸತಿ ಪದ್ಧತಿ ಇವೆಲ್ಲವೂ ಕಂಟಕಪ್ರಾಯವಾಗಿದೆ. ಕೆಲಸದ ಸ್ಥಳಗಳಲ್ಲಿ ದೌರ್ಜನ್ಯ, ಕೀಳರಿಮೆ, ಸಹೋದ್ಯೋಗಿಗಳು ಕಿರುಕುಳ, ಅಧಿಕಾರಿಗಳ ವರ್ತನೆ, ಕೆಲಸದ ಸ್ಥಳಗಳು ದೂರವಿರುವುದು, ಮಕ್ಕಳ ಚಿಂತೆ; ಎಲ್ಲಕ್ಕಿಂತ ಹೆಚ್ಚಾಗಿ ಉದ್ಯೋಗ ಹಾಗೂ ಕುಟುಂಬ ಎರಡೂ ಸ್ಥಳಗಳಲ್ಲಿ ಸಮರ್ಥವಾಗಿ ನಿರ್ವಹಿಸಬೇಕಾದ ದ್ವಂದ್ವ ಪಾತ್ರ, ದ್ವಂದ್ವ ನೀತಿ ದುಡಿದುದನ್ನು ಕಿತ್ತುಕೊಳ್ಳುವ ಪುರುಷ ವರ್ಗ, ಪರಿತ್ಯಕ್ತ ಮಹಿಳೆಯರು, ಹೀಗೆ ಒಂದೇ ಎರಡೇ ಮಹಿಳೆಯ ಜೀವನದುದ್ದಕ್ಕೂ ಕೇವಲ ಪ್ರಶ್ನೆಗಳು, ಸವಾಲುಗಳು ಎದುರಾಗುತ್ತಲೇ ಇರುತ್ತವೆ. ಇವೆಲ್ಲದರ ನಡುವೆ ತನ್ನ ಹೋರಾಟವನು ತಾನೇ ಮುಂದುವರಿಸಿ ಸ್ವಾವಲಂಭಿಯಾಗಿ ಅಸ್ತಿತ್ವವನ್ನು ನಲೆಯೂರಿಸಿಕೊಳ್ಳುವ ಪ್ರಭಲತೆ

ಮಹಿಳೆಯರಲ್ಲಿ ಉಂಟಾಗಬೇಕು. ಅದಕ್ಕೆ ಅಗತ್ಯವಾದ ಪ್ರತಿಭೆ, ಅ:ತಶಕ್ತಿ, ವಿವೇಚನೆ ಆಕೆಗಿರುತ್ತದೆ. ನೆರವಾಗಲು ಬರುವ ವ್ಯಕ್ತಿಗಳು, ಸಂಸ್ಥೆ ಸರ್ಕಾರ ಎಲ್ಲದರ ಮೂಲಕ ಮಹಿಳೆ ಸಬಲೆಯಾಗಿ ನಿಲ್ಲಬೇಕು.

# ಗ್ರಂಥಋಣ

೩೮. ಇಂಗ್ಲೀಷ್ ಮೂಲ ಜೆರಾಲ್ಡಿನ್ ಫೋರ್ಬ್ಸ್ ಕನ್ನಡಕ್ಕೆ ಡಾ. ಹೆಚ್.ಹೆಸ್. ಶ್ರೀಮತಿ, ಆಧುನಿಕ ಭಾರತದಲ್ಲಿ ಮಹಿಳೆ, ಪುಟ ೩೭೯

೩೯. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ೨೦೦೨, ಪುಟ೩೨೦

೪೦. ಶ್ರೀಮತಿ. ಹೆಚ್.ಎಸ್., ಸ್ತ್ರೀವಾದ, ಕನ್ನಡ ವಿ.ವಿ. ಹಂಪಿ, ೨೦೦೩

೪೧. ಶ್ರೀಮತಿ. ಎಸ್.ಎಸ್. ಶಿವನಂದ, ಎಸ್. ಪಿರಕ್ತ ಮ್ಮಠ, ಕೃಷ್ಣ ಜೆ, ಸಂಪಾದಕರು, ವರ್ಷ ೨೦೦೭, ಮಹಿಳೆ ದುಡಿಮೆ ಮತ್ತು ಬಿಡುವು, ಪುಟ.೬೩–೬೪

೪೨. ಜ್ಯೋತಿ ಶಶಿಕುಮಾರ್, ವರ್ಷ ೨೦೦೭, ಮಹಿಳಾ ಸಾಮಾಜಿಕತೆ, ಪುಟ ೧೪೪–೧೪೫

೪೩. ಆರ್. ಇಂದಿರಾ, ಮಹಿಳೆ ಮತ್ತು ಸಂಸ್ಕೃತಿ, ಪುಟ ೧೭೭

# ಕ್ಷೇತ್ರ ಕಾರ್ಯ ಸಮೀಕ್ಷೆ

ತಖ್ತೆ 1 : ಮೆರಿಟಲ್ ಸ್ಟೇಟಸ್

| ಮೆರಿಟಲ್ ಸ್ಟೇಟಸ್ | ಸಂದರ್ಶನಕಾರರ ಸಂಖೆ | ಸರಾಸರಿ |
|---|---|---|
| ವಿವಾಹಿತೆ | 34 | 68 |
| ಅವಿವಾಹಿತೆ | 16 | 32 |
| ವಿಚ್ಛೇದಿತೆ | 0 | 0 |
| ವಿಧವೆ | 0 | 0 |



ತಖ್ತೆ 2 : ಕುಟುಂಬದ ಸಾಂಪ್ರದಾಯಿಕ ವೃತ್ತಿ

| ವೃತ್ತಿ | ಸಂದರ್ಶನಕಾರರ ಸ0ಖೆ | ಸರಾಸರಿ |
|---|---|---|
| ವ್ಯವಸಾಯ | 18 | 36 |
| ವ್ಯಾಪಾರ | 12 | 24 |
| ಕರಾಲಿ | 8 | 16 |
| ಇತರೆ | 12 | 24 |



### ತಖ್ತೆ 3 : ಉನ್ನತ ಶಿಕ್ಷಣದ ಗುರಿ

| ಅಭಿಪ್ರಾಯ | ಸಂದರ್ಶನಕಾರರ ಸಂಖೆ | ಸರಾಸರಿ |
|---|---|---|
| ಸಾಂಪ್ರದಾಯಿಕವಾಗಿರುವಂತೆ ರೂಢಿಸಿರುವುದು | 4 | 8 |
| ಆಧುನಿಕ ಜೀವನಕ್ಕೆ ಹೊಂದಿಕೊಳ್ಳಲು ಸಹಕಾರಿ | 28 | 56 |
| ಉದ್ಯೋಗ ಪಡೆಯಲು ಸಹಾಯ | 18 | 36 |

ಉನ್ನತ ಶಿಕ್ಷಣದ ಗುರಿ




ಸಾಂಪ್ರದಾಯಿಕವಾಗಿರುವಂತೆ ರೂಢಿಸಿರುವುದು
ಆಧುನಿಕ ಜೀವನಕ್ಕೆ ಹೊಂದಿಕೊಳ್ಳಲು ಸಹಕಾರಿ
ಉದ್ಯೋಗ ಪಡೆಯಲು ಸಹಾಯ

ಪಟ್ಟಿ 4 : ಸುಶಿಕ್ಷಿತ ಮಹಿಳೆಯು ಆದರ್ಶ ಹೆಂಡತಿಯಾಗಿರುತ್ತಾಳೆಯೇ

| ಪ್ರತಿಕ್ರಿಯೆ | ಸಂದರ್ಶನಕಾರರ ಸಂಖೆ | ಸರಾಸರಿ |
|---|---|---|
| ಹೌದು | 42 | 84 |
| ಇಲ್ಲ | 3 | 6 |
| ಗೊತ್ತಿಲ್ಲ | 5 | 10 |

ಸುಶಿಕ್ಷಿತ ಮಹಿಳೆಯು ಆದರ್ಶ ಹೆಂಡತಿಯಾಗಿರುತ್ತಾಳೆಯೇ



ಪಟ್ಟಿ 5 : ಸುಶಿಕ್ಷಿತ ಮಹಿಳೆಯು ಕುಟುಂಬವನ್ನು ಸರಾಸರಿ ನಿರ್ವಹಣೆ ಮಾಡುತ್ತಾಳೆಯೇ

| ಪ್ರತಿಕ್ರಿಯೆ | ಸಂದರ್ಶನಕಾರರ ಸ0ಖೆ | ಸರಾಸರಿ |
|---|---|---|
| ಹೌದು | 35 | 70 |
| ಇಲ್ಲ | 11 | 22 |
| ಗೊತ್ತಿಲ್ಲ | 4 | 8 |
| | | |



ಪಟ್ಟಿ 6 : ಸುಶಿಕ್ಷಿತ ಮಹಿಳೆಯು ಬದಲಾವಣೆಯನ್ನು ಸ್ವೀಕರಿಸುತ್ತಾಳೆಯೇ

| ಪ್ರತಿಕ್ರಿಯೆ | ಸಂದರ್ಶನಕಾರರ ಸಂಖ್ಯೆ | ಸರಾಸರಿ |
|---|---|---|
| ಹೌದು | 24 | 48 |
| ಇಲ್ಲ | 16 | 32 |
| ಗೊತ್ತಿಲ್ಲ | 10 | 20 |

ಸುಶಿಕ್ಷಿತ ಮಹಿಳೆಯು ಬದಲಾವಣೆಯನ್ನು ಸ್ವೀಕರಿಸುತ್ತಾಳೆಯೇ



ತಃಖ್ತೆ 7 : ಉದ್ಯೋಗ ಪಡೆಯಲು ಕುಟುಂಬದಲ್ಲಿ ಸ್ಪೂರ್ತಿದಾಯಕರಾರು

| ಸ್ಪೂರ್ತಿದಾಯಕರು | ಸಂದರ್ಶನಕಾರರ ಸ0ಖೆ | ಸರಾಸರಿ |
|---|---|---|
| ಪೋಷಕರು | 30 | 60 |
| ಅತ್ತೆ ಮಾವ | – | 00 |
| ಗಂಡ | 12 | 24 |
| ಇತರರು | 8 | 16 |

ಉದ್ಯೋಗ ಪಡೆಯಲು ಕುಟುಂಬದಲ್ಲಿ ಸ್ಪೂರ್ತಿದಾಯಕರಾರು



**ತಃಖ್ತೆ 8 : ಉದ್ಯೋಗಸ್ಥ ಮಹಿಳೆಯು ಜೀವನದಲ್ಲಿ ಹೊಣೆಗಾರಿಕೆಯ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾಳೆಯೇ**

| ಪ್ರತಿಕ್ರಿಯೆ | ಸಂದರ್ಶನಕಾರರ ಸ0ಖ್ಯೆ | ಸರಾಸರಿ |
|---|---|---|
| ಗಣನೀಯವಾಗಿ | 26 | 52 |
| ಸ್ವಲ್ಪವಾಗಿ | 20 | 40 |
| ಇಲ್ಲವೇ ಇಲ್ಲ | 4 | 8 |

ಉದ್ಯೋಗಸ್ಥ ಮಹಿಳೆಯು ಜೀವನದಲ್ಲಿ ಹೊಣೆಗಾರಿಕೆಯ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾಳೆಯೇ




■ ಗಣನೀಯವಾಗಿ □ ಸ್ವಲ್ಪವಾಗಿ ■ ಇಲ್ಲವೇ ಇಲ್ಲ

ತಃಖ್ತೆ 9 : ಉದ್ಯೋಗಕ್ಕೆ ಸೇರುವಲ್ಲಿ ಮಹಿಳೆ ಎದುರಿಸುವ ಸಮಸ್ಯೆಗಳು

| ಸಮಸ್ಯೆಗಳು | ಸಂದರ್ಶನಕಾರರ ಸ0ಖೆ | ಸರಾಸರಿ |
|---|---|---|
| ಕುಟುಂಬ ಸದಸ್ಯರ ಪ್ರೋತ್ಸಾಹ ಇಲ್ಲದೇ ಇರುವುದು | – | – |
| ಹಣಕಾಸಿನ ತೊಂದರೆ | 24 | 48 |
| ಸಮಾಜದ ರೂಢಿ ಸಂಪ್ರದಾಯಗಳು | 16 | 32 |
| ಇತರೆ | 10 | 20 |



ತಃಖ್ತೆ 10 : ಉದ್ಯೋಗಸ್ಥ ಮಹಿಳೆಯು ತೆಗೆದುಕೊಳ್ಳುವ ನಿರ್ಧಾರದ ಬಗ್ಗೆ ಕುಟುಂಬ ಸದಸ್ಯರ ವರ್ತನೆ ಬದಲಾಗಿದೆಯೇ ?

| ಸದಸ್ಯರು | ಗಣನೀಯವಾಗಿ | | ಸ್ವಲ್ಪವಾಗಿ | | ಇಲ್ಲ | |
|---|---|---|---|---|---|---|
| | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ |
| ಗಂಡ | 14 | 28 | 16 | 32 | 20 | 40 |
| ಪೋಷಕರು | 26 | 53 | 16 | 32 | 8 | 16 |
| ಅತ್ತೆ ಮಾವ | – | – | 32 | 64 | 18 | 36 |
| ಇತರರು | 32 | 64 | 18 | 36 | – | – |

ಪಟ್ಟಿ 11 : ಕುಟುಂಬಕ್ಕೆ ಸಂಬಂಧಿಸಿದ ವಿಷಯಗಳ ಕುರಿತು ನಿರ್ಧಾರ ಕೈಗೊಳ್ಳುವಾಗ ಇತರ ಸದಸ್ಯರನ್ನು ವಿಚಾರಿಸುತ್ತೀರಾ

| ಸದಸ್ಯರು | ಗಣನೀಯವಾಗಿ | | ಸ್ವಲ್ಪವಾಗಿ | | ಇಲ್ಲ | |
|---|---|---|---|---|---|---|
| | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ |
| ಗಂಡ | 25 | 50 | 17 | 34 | 8 | 16 |
| ಪೋಷಕರು | 22 | 44 | 20 | 40 | 8 | 16 |
| ಅತ್ತೆ ಮಾವ | 10 | 20 | 14 | 28 | 26 | 52 |
| ಇತರರು | 4 | 8 | 10 | 20 | 36 | 72 |

ತಃಖ್ತೆ 12 : ಉದ್ಯೋಗವು ಸರಿಯಾದ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳಲು ನೆರವಾಗುತ್ತದೆಯೇ

| ಪ್ರತಿಕ್ರಿಯೆ | ಸಂದರ್ಶನಕಾರರ ಸ0ಖೆ | ಸರಾಸರಿ |
|---|---|---|
| ಹೌದು | 34 | 68 |
| ಇಲ್ಲ | 12 | 24 |
| ಗೊತ್ತಿಲ್ಲ | 4 | 8 |



ತಃಖ್ತೆ 13 : ಕುಟುಂಬ ಸದಸ್ಯರೊಂದಿಗಿನ ಸಂಬಂಧ

| ಸದಸ್ಯರು | ಸಂಬಂಧ | | | | | | | |
|---|---|---|---|---|---|---|---|---|
| | ಬಹಳ ಚೆನ್ನಾಗಿದೆ | | ಚೆನ್ನಾಗಿದೆ | | ಸಾದಾರಣವಾಗಿದೆ | | ಚೆನ್ನಾಗಿಲ್ಲ | |
| ಪೋಷಕರು | 36 | 72 | 9 | 18 | 5 | 10 | – | – |
| ಗಂಡ | 30 | 60 | 11 | 22 | 9 | 18 | – | – |
| ಅತ್ತೆ–ಮಾವ | 20 | 40 | 16 | 32 | 6 | 12 | 8 | 16 |
| ಇತರರು | 30 | 60 | 12 | 24 | 8 | 16 | – | – |

ಪಟ್ಟಿ 14 : ಕುಟುಂಬದಲ್ಲಿ ಉದ್ಯೋಗಸ್ಥ ಮಹಿಳೆಯು ಇತರೆ ಸದಸ್ಯರೊಂದಿಗೆ ಹೊಂದಿಕೊಂಡು ಇರಲು ಸಾಧ್ಯವಿಲ್ಲ

| ಪ್ರತಿಕ್ರಿಯೆ | ಸಂದರ್ಶನಕಾರರ ಸ0ಖೆ | ಸರಾಸರಿ |
|---|---|---|
| ಹೌದು | 32 | 64 |
| ಇಲ್ಲ | 18 | 36 |

| ಕಾರಣಗಳು | ಸಂದರ್ಶನಕಾರರ ಸ0ಖೆ | ಸರಾಸರಿ |
|---|---|---|
| ಉದ್ಯೋಗದ ಒತ್ತಡ | 20 | 62.5 |
| ಮನೆಯ ಸದಸ್ಯರ ಅಸಹಕಾರ | 6 | 18.75 |
| ಮನೆಯಿಂದ ಬೇರೆಯಾಗುವ ವಿಚಾರ | 6 | 18.75 |
| ಉದ್ಯೋಗದಲ್ಲಿರುವುದು ಮನೆಯವರಿಗೆ ಇಷ್ಟವಿಲ್ಲ | 0 | 00 |

ಕುಟುಂಬದಲ್ಲಿ ಉದ್ಯೋಗಸ್ಥ ಮಹಿಳೆಯು ಇತರೆ ಸದಸ್ಯರೊಂದಿಗೆ ಹೊಂದಿಕೊಂಡು ಇರಲು ಸಾಧ್ಯವಿಲ್ಲ




ಉದ್ಯೋಗದ ಒತ್ತಡ ■ ಮನೆಯ ಸದಸ್ಯರ ಅಸಹಕಾರ □ ಮನೆಯಿಂದ ಬೇರೆಯಾಗುವ ವಿಚಾರ □ ಉದ್ಯೋಗದಲ್ಲಿರುವುದು ಮನೆಯವರಿಗೆ ಇಷ್ಟವಿಲ್ಲ

ಪಟ್ಟಿ 15 : ಪ್ರತಿ ತಿಂಗಳ ವೇತನವನ್ನು ಸದ್ಭಳಕೆ ಮಾಡುವಲ್ಲಿ ಸ್ವಾತಂತ್ರ ಇದೆಯೇ

| ಪ್ರತಿಕ್ರಿಯೆ | ಸಂದರ್ಶನಕಾರರ ಸಂಖೆ | ಸರಾಸರಿ |
|---|---|---|
| ಇದೆ | 28 | 56 |
| ಇಲ್ಲ | 22 | 44 |

| ಕಾರಣಗಳು | ಸಂದರ್ಶನಕಾರರ ಸಂಖೆ | ಸರಾಸರಿ |
|---|---|---|
| ಮನೆಯ ಯಜಮಾನನ ಕೈಗೆ ಕೊಡುವುದು | 12 | 43.00 |
| ಗಂಡನ ಒಪ್ಪಿಗೆ ಮುಖ್ಯ | 4 | 14.5 |
| ಇತರರ ಸದಸ್ಯರ ಒಪ್ಪಿಗೆಗೆ ಕಾಯುವುದು | 4 | 14.5 |
| ಸರ್ವ ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳಲು ಸಾಧ್ಯವಿಲ್ಲ | 8 | 28.00 |

ಪ್ರತಿ ತಿಂಗಳ ವೇತನವನ್ನು ಸದ್ಬಳಕೆ ಮಾಡುವಲ್ಲಿ ಸ್ವಾತಂತ್ರ ಇದೆಯೇ




- ಮನೆಯ ಯಜಮಾನನ ಕೈಗೆ ಕೊಡುವುದು
- ಗಂಡನ ಒಪ್ಪಿಗೆ ಮುಖ್ಯ
- ಇತರರ ಸದಸ್ಯರ ಒಪ್ಪಿಗೆಗೆ ಕಾಯುವುದು
- ಸರ್ವ ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳಲು ಸಾಧ್ಯವಿಲ್ಲ

ತಃಖ್ತೆ 16 : ವೇತನವನ್ನು ಯಾವ ಯಾವ ಅಂಶಗಳ ಮೇಲೆ ಖರ್ಚು ಮಾಡಲು ಸ್ವತಂತ್ರವಿದೆ.

| ಅಂಶಗಳು | ಸಂದರ್ಶನಕಾರರ ಸಂಖೆ | ಸರಾಸರಿ |
|---|---|---|
| ಬಟ್ಟೆ, ಆಭರಣ, ಹಾಗೂ ಸೌಂದರ್ಯ ವರ್ದಕಗಳು | 34 | 68 |
| ಗೃಹೋಪಕರಣಗಳು | 34 | 68 |
| ಮಕ್ಕಳಿಗಾಗಿ ಉಳಿತಾಯ | 28 | 56 |
| ಐಚಲಿ, ಈ.ಆ. ಇತ್ಯಾದಿ | 30 | 60 |
| ಉಡುಗೊರೆ | 32 | 64 |
| ಪೋಷಕರ ಹಾಗೂ ಸ್ವಂತ ಆರೋಗ್ಯ, ಸಹೋದರ, ಸಹೋದರಿಯರ ವಿದ್ಯಾಭ್ಯಾಸ ಇತರೆ | 34 | 68 |

ವೇತನವನ್ನು ಯಾವ ಯಾವ ಅಂಶಗಳ ಮೇಲೆ ಖರ್ಚು ಮಾಡಲು ಸ್ವತಂತ್ರವಿದೆ




- ಬಟ್ಟೆ, ಆಭರಣ, ಹಾಗೂ ಸೌಂದರ್ಯ ವರ್ದಕಗಳು
- ಗೃಹೋಪಕರಣಗಳು
- ಮಕ್ಕಳಿಗಾಗಿ ಉಳಿತಾಯ
- ಐಚಲಿ, ಈ.ಆ. ಇತ್ಯಾದಿ
- ಉಡುಗೊರೆ
- ಪೋಷಕರ ಹಾಗೂ ಸ್ವಂತ ಆರೋಗ್ಯ, ಸಹೋದರ, ಸಹೋದರಿಯರ ವಿದ್ಯಾಭ್ಯಾಸ ಇತರೆ

ಪಟ್ಟಿ – 17 : ದಿನನಿತ್ಯದ ಯಾವ ಯಾವ ಕೆಲಸಗಳಲ್ಲಿ ನಿಮ್ಮ ಕುಟುಂಬದ ಸದಸ್ಯರು ಸಹಾಯ ಮಾಡುತ್ತಾರೆ

| ಕೆಲಸ | ಪೋಷಕರು | | ಗಂಡ | | ಅತ್ತೆ–ಮಾವ | | ಕೆಲಸದವರು | |
|---|---|---|---|---|---|---|---|---|
| | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ |
| ಅಡುಗೆ ತಯಾರಿಕೆ | 26 | 52 | 9 | 18 | 8 | 16 | 7 | 14 |
| ಸ್ವಚ್ಛತೆ | 30 | 60 | 7 | 14 | 6 | 12 | 7 | 14 |
| ಕೊಂಡುಕೊಳ್ಳುವಿಕೆ | 15 | 30 | 22 | 44 | 13 | 26 | – | – |
| ಅತಿಥಿ ಸಂಬಂಧಿಕರನ್ನು ನೋಡಿಕೊಳ್ಳುವುದು | 20 | 40 | 20 | 40 | 10 | 20 | – | – |
| ಮಕ್ಕಳ ಲಾಲನೆ/ಪಾಲನೆ | 16 | 32 | 14 | 28 | 20 | 40 | – | – |

ತಃಖ್ತೆ – 18 : ಉದ್ಯೋಗಸ್ಥ ಮಹಿಳೆಯರು ಇತರೆ ನಿರುದ್ಯೋಗಿ ಸದಸ್ಯರನ್ನು ತಾತ್ಸಾರದಿಂದ ನೋಡುತ್ತಾರೆಯೇ

| ಪ್ರತಿಕ್ರಿಯೆ | ಸಂದರ್ಶನಕಾರರ ಸಂಖೆ | ಸರಾಸರಿ |
|---|---|---|
| ಸಂಪೂರ್ಣವಾಗಿ | 5 | 10 |
| ಸ್ವಲ್ಪಮಟ್ಟಿಗೆ | 15 | 30 |
| ಒಪ್ಪುವುದಿಲ್ಲ | 30 | 60 |

ಉದ್ಯೋಗಸ್ಥ ಮಹಿಳೆಯರು ಇತರೆ ನಿರುದ್ಯೋಗಿ ಸದಸ್ಯರನ್ನು ತಾತ್ಸಾರದಿಂದ ನೋಡುತ್ತಾರೆಯೇ




ಸಂಪೂರ್ಣವಾಗಿ ಸ್ವಲ್ಪಮಟ್ಟಿಗೆ ಒಪ್ಪುವುದಿಲ್ಲ

ಪಟ್ಟಿ 19: ಕೌಟುಂಬಿಕ ವಿಷಯಗಳಲ್ಲಿ ಉದ್ಯೋಗಸ್ಥ ಮಹಿಳೆ ಮತ್ತು ಗಂಡನ ನಡುವೆ ಭಿನ್ನಾಭಿಪ್ರಾಯಗಳಿರುತ್ತವೆ.

| ಪ್ರತಿಕ್ರಿಯೆ | ಸಂದರ್ಶನಕಾರರ ಸಂಖ್ಯೆ | ಸರಾಸರಿ |
|---|---|---|
| ಹೌದು | 16 | 32 |
| ಇಲ್ಲ | 20 | 40 |
| ಗೊತ್ತಿಲ್ಲ | 14 | 28 |

| ಕಾರಣಗಳು | ಸಂದರ್ಶನಕಾರರ ಸಂಖ್ಯೆ | ಸರಾಸರಿ |
|---|---|---|
| ಕುಟುಂಬದ ನಿರ್ವಹಣೆಗೆ ಬೇಕಾದಷ್ಟು ಹಣ ನೀಡುವುದಿಲ್ಲ | 4 | 25.00 |
| ಗಂಡನ ಬಗ್ಗೆ ಕಾಳಜಿ ಇಲ್ಲ | 5 | 31 |
| ಕುಟುಂಬದ ಬಗ್ಗೆ ಹಿತಾಸಕ್ತಿ ಇಲ್ಲ | 3 | 19 |
| ಮಕ್ಕಳ ಬಗ್ಗೆ ತಾತ್ಸಾರ | 4 | 25 |

ಕೌಟುಂಬಿಕ ವಿಷಯಗಳಲ್ಲಿ ಉದ್ಯೋಗಸ್ಥ ಮಹಿಳೆ ಮತ್ತು ಗಂಡನ ನಡುವೆ ಭಿನ್ನಾಭಿಪ್ರಾಯಗಳಿರುತ್ತವೆ




■ ಕುಟುಂಬದ ನಿರ್ವಹಣೆಗೆ ಬೇಕಾದಷ್ಟು ಹಣ ನೀಡುವುದಿಲ್ಲ □ ಗಂಡನ ಬಗ್ಗೆ ಕಾಳಜಿ ಇಲ್ಲ ■ ಕುಟುಂಬದ ಬಗ್ಗೆ ಹಿತಾಸಕ್ತಿ ಇಲ್ಲ ▣ ಮಕ್ಕಳ ಬಗ್ಗೆ ತಾತ್ಸಾರ

## ಪಟ್ಟಿ 20: ಕರ್ತವ್ಯ ನಿರ್ವಹಿಸುವಲ್ಲಿ ಎದುರಿಸುವ ಸಮಸ್ಯೆಗಳು

| ಸಮಸ್ಯೆಗಳು | ಸಂದರ್ಶನಕಾರರ ಸ0ಖೆ | ಸರಾಸರಿ |
|---|---|---|
| ರಾಜಕೀಯ ಒತ್ತಡ | 6 | 12 |
| ಸಹೋದ್ಯೋಗಿಗಳ ಅಸಹಕಾರ | 4 | 8 |
| ಮೇಲಾಧಿಕಾರಿಗಳ ದಬ್ಬಾಳಿಕೆ | 8 | 16 |
| ಕೆಲಸದ ಒತ್ತಡ | 32 | 64 |

ಕರ್ತವ್ಯ ನಿರ್ವಹಿಸುವಲ್ಲಿ ಎದುರಿಸುವ ಸಮಸ್ಯೆಗಳು




ರಾಜಕೀಯ ಒತ್ತಡ
ಸಹೋದ್ಯೋಗಿಗಳ ಅಸಹಕಾರ
ಮೇಲಾಧಿಕಾರಿಗಳ ದಬ್ಬಾಳಿಕೆ
ಕೆಲಸದ ಒತ್ತಡ

ಪಟ್ಟಿ 21: ಮಹಿಳೆಯು ಯಾರೊಂದಿಗೆ ಧಕ್ಷತೆಯಿಂದ ಕೆಲಸ ನಿರ್ವಹಿಸುತ್ತಾಳೆ

| | ಅತ್ಯಂತ ದಕ್ಷತೆ | | ದಕ್ಷತೆ | | ಅಧಕ್ಷತೆ | |
|---|---|---|---|---|---|---|
| ಗಂಡಸು | 26 | 52 | 13 | 26 | 11 | 22 |
| ಹೆಂಗಸು | 29 | 58 | 21 | 42 | – | – |

ಪಟ್ಟಿ 22: ಕಛೇರಿಯಲ್ಲಿ ಮಹಿಳೆಯರ ಬಗೆಗಿನ ಉನ್ನತಾಧಿಕಾರ ವರ್ತನೆ

| ವರ್ತನೆ | ಚೆನ್ನಾಗಿದೆ | | ಪರವಾಗಿಲ್ಲ | | ಇಲ್ಲ | |
|---|---|---|---|---|---|---|
| | ಸಂದರ್ಶನಕಾರರ ಸಂಖ್ಯೆ | ಸರಾಸರಿ | ಸಂದರ್ಶನಕಾರರ ಸಂಖ್ಯೆ | ಸರಾಸರಿ | ಸಂದರ್ಶನಕಾರರ ಸಂಖ್ಯೆ | ಸರಾಸರಿ |
| ಸಹಾಯ ಮತ್ತು ಸಹಕಾರ | 33 | 66 | 17 | 34 | – | – |
| ಸಮಾನತೆ | 24 | 48 | 14 | 28 | 12 | 24 |
| ಗೌರವ ಮತ್ತು ಸಹಾನುಭೂತಿ | 33 | 66 | 14 | 28 | – | – |

ಪಟ್ಟಿ 23: ಗಂಡಸರಿಗೆ ಹೋಲಿಸಿದಂತೆ ಮಹಿಳೆಯು ಯಾವ ರೀತಿಯಲ್ಲಿ ಕೆಲಸದ ನಿರ್ವಹನೆಯನ್ನು ಮಾಡುತ್ತಾಳೆ

| ಅಂಶಗಳು | ಹೆಚ್ಚು | | ಸಮ | | ಕಡಿಮೆ | |
|---|---|---|---|---|---|---|
| | ಸಂದರ್ಶನಕಾರರ ಸಂಖ್ಯೆ | ಸರಾಸರಿ | ಸಂದರ್ಶನಕಾರರ ಸಂಖ್ಯೆ | ಸರಾಸರಿ | ಸಂದರ್ಶನಕಾರರ ಸಂಖ್ಯೆ | ಸರಾಸರಿ |
| ಸಮಯ ಪಾಲನೆ | 29 | 58 | 19 | 38 | 2 | 4 |
| ದಕ್ಷತೆ | 35 | 70 | 10 | 20 | 5 | 10 |
| ಸ್ನೇಹಯುತ ದೃಢತೆ | 14 | 28 | 20 | 40 | 16 | 32 |

### ಪಟ್ಟಿ 24: ಸಹೋದ್ಯೋಗಿಗಳ ವರ್ತನೆ ಹೇಗಿದೆ

| ವರ್ತನೆ | ಚೆನ್ನಾಗಿದೆ | | ಪರವಾಗಿಲ್ಲ | | ಇಲ್ಲ | |
|---|---|---|---|---|---|---|
| | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ |
| ಗೌರವ ಮತ್ತು ಸಹಾನುಭೂತಿ | 40 | 80 | 10 | 20 | – | – |
| ಸಹಕಾರ ಮತ್ತು ಸಹಾಯ | 30 | 60 | 14 | 28 | 6 | 12 |
| ಸಮಾನತೆ | 11 | 22 | 9 | 18 | 30 | 60 |

### ಪಟ್ಟಿ 25: ಕಛೇರಿಗೆ ಸಂಬಂಧಿಸಿದ ಸಮಾರಂಭಗಳಲ್ಲಿ ಯಾವ ರಿತಿ ಭಾಗವಹಿಸುತ್ತೀರಿ

| ಸಮಾರಂಭ | ಪದೇ ಪದೇ | | ಕಡಿಮೆ ಭಾರಿ | | ವಿರಳ | |
|---|---|---|---|---|---|---|
| | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ | ಸಂದರ್ಶನಕಾರರ ಸಂಖೆ | ಸರಾಸರಿ |
| ವರ ಸಂಚಾರ | 6 | 12 | 34 | 68 | 10 | 20 |
| ಬೀಳ್ಕೊಡುಗೆ ಮತ್ತು ವಾರ್ಷಿಕ ಸಮಾರಂಭಗಳು | 18 | 36 | 22 | 44 | 10 | 20 |
| ಹುಟ್ಟುಹಬ್ಬಗಳು ಮತ್ತು ಮದುವೆ | 8 | 16 | 34 | 68 | 8 | 16 |

ಪಟ್ಟಿ 26: ಉದ್ಯೋಗ ಪಡೆಯಲಿಕ್ಕೆ ಮುಖ್ಯ ಉದ್ದೇಶಗಳು

| ಕಾರಣಗಳು | ಸಂದರ್ಶನಕಾರರ ಸ೦ಖೆ | ಸರಾಸರಿ |
|---|---|---|
| ಸ್ವಂತ ನೆರವಿಗೆ | 16 | 32 |
| ಕುಟುಂಬದ ಏಳಿಗೆಗೆ | 28 | 56 |
| ಆರ್ಥಿಕ ಸ್ವಾವಲಂಬನೆಗೆ | 6 | 12 |

ಉದ್ಯೋಗ ಪಡೆಯಲಿಕ್ಕೆ ಮುಖ್ಯ ಉದ್ದೇಶಗಳು




ತಖ್ತೆ ೧ ರಲ್ಲಿ ಪ್ರತಿಕ್ರಿಯಾ ಶೀಲ ವ್ಯಕ್ತಿಯ (ಸಂದರ್ಶನಕಾರರ) ವಿವಾಹ ಸ್ಥಿತಿಯನ್ನು ವಿಶ್ಲೇಷಿಸಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಒಟ್ಟು ಸಂದರ್ಶನಕಾರರಲ್ಲಿ ೩೪ (೬೮%) ಮಹಿಳೆಯರು ವಿವಾಹವಾಗಿದ್ದು ಉಳಿದ ೧೬ (೩೨%) ಮಹಿಳೆಯರು ಅವಿವಾಹಿತರಾಗಿದ್ದಾರೆ. ಉಳಿದಂತೆ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಮಹಿಳೆಯರಲ್ಲಿ ಯಾವುದೇ ವಿಚ್ಛೇದಿತೆ ಅಥವಾ ವಿಧವೆಯರು ಕಂಡುಬರುವುದಿಲ್ಲ. ಇದರಿಂದ ವ್ಯಕ್ತವಾಗುವುದೇನೆಂದರೆ ಮಹಿಳೆಯರಲ್ಲಿ ಸರ್ಕಾರಿ ಉದ್ಯೋಗಕ್ಕೆ ಸೇರುವ ಪ್ರವೃತ್ತಿ ಇತ್ತೀಚಿನ ವರ್ಷಗಳಲ್ಲಿ ಹೆಚ್ಚಾಗಿರುವುದು ಕಂಡು ಬಂದಿರುತ್ತದೆ. ಚಿತ್ರದಲ್ಲಿ ಕೂಡ ವಿವಾಹ ಸ್ಥಿತಿಯನ್ನು ನೋಡಬಹುದಾಗಿದೆ.

ಮಹಿಳೆಯರ ಕುಟುಂಬದ ಸಾಂಪ್ರದಾಯಿಕ ವೃತ್ತಿಯನ್ನು ತಖ್ತೆ ೨ ಹಾಗೂ ಚಿತ್ರದಲ್ಲಿ ಗಮನಿಸಬಹುದು. ಪಟ್ಟಿಯಿಂದ ವ್ಯಕ್ತವಾಗುವಂತೆ ಸರಾಸರಿ ೩೬ ರಷ್ಟು ಮಹಿಳೆಯರು ರೈತ ಕುಟುಂಬದಿಂದ ಬಂದವರಾಗಿದ್ದಾರೆ. ಉಳಿದಂತೆ ಸರಾಸರಿ ೨೪ ರಷ್ಟು ಮಹಿಳೆಯರ ಸಾಂಪ್ರದಾಯಿಕ ವೃತ್ತಿಯು ವ್ಯಾಪಾರ ಹಾಗೂ ಇತರೆ (ಸಂಬಳ......) ಆಗಿದ್ದು ಹಾಗೂ ಶೇಕಡ ೧೬ ರಷ್ಟು ಮಹಿಳೆಯರ ಸಾಂಪ್ರದಾಯಿಕ ವೃತ್ತಿಯು ಕೂಲಿಯಾಗಿದೆ.

ಪಟ್ಟಿ ೩ ರಲ್ಲಿ ಮಹಿಳೆಯರ ಅಭಿಪ್ರಾಯದಂತೆ ಉನ್ನತ ಶಿಕ್ಷಣದ ಗುರಿಯನ್ನು ಕಾಣಬಹುದಾಗಿದೆ. ಶೇಕಡ ೫೬ ರಷ್ಟು ಮಹಿಳೆಯರು ಆಧುನಿಕ ಜೀವನಕ್ಕೆ ಹೊಂದಿಕೊಳ್ಳಲು ಸಹಕರಿಸುವುದು ಉನ್ನತ ಶಿಕ್ಷಣದ ಗುರಿಯಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಶೇಕಡ ೮ ರಷ್ಟು ಮಹಿಳೆಯರು ಸಾಂಪ್ರದಾಯಿಕವನ್ನು ರೂಢಿಸುವುದು ಉನ್ನತ ಶಿಕ್ಷಣದ ಗುರಿಯಾಗಿದೆ ಎಂದು ತಿಳಿಸಿದ್ದಾರೆ. ಇದನ್ನು ಚಿತ್ರದಲ್ಲಿ ಸಹ ಗಮನಿಸಬಹುದು.

ಪಟ್ಟಿ ೪ ರಲ್ಲಿ ಗೋಚರಿಸುವಂತೆ ಶೇಕಡ ೮೪ ರಷ್ಟು ಮಹಿಳೆಯರು ಸುಶಿಕ್ಷಿತ ಮಹಿಳೆಯು ಆದರ್ಶ ಹೆಂಡತಿಯಾಗುತ್ತಾಳೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಶೇಕಡ ೧೦ ರಷ್ಟು ಮಹಿಳೆಯರು ಯಾವುದೇ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದಿಲ್ಲ. ಹಾಗೂ ಶೇ. ೬ ರಷ್ಟು ಮಹಿಳೆಯರು ಸುಶಿಕ್ಷಿತ ಮಹಿಳೆಯು ಒಬ್ಬ ಆದರ್ಶ ಹೆಂಡತಿಯಾಗಿರಲು ಸಾಧ್ಯವಿಲ್ಲ ಎಂದಿದ್ದಾರೆ. ಇದನ್ನು ಚಿತ್ರದಲ್ಲಿ ಕೂಡ ಕಾಣಬಹುದಾಗಿದೆ.

ಪಟ್ಟಿ ೫ ರಲ್ಲಿ ಸುಶಿಕ್ಷಿತ ಮಹಿಳೆಯು ಸರಿಯಾಗಿ ಕುಟುಂಬವನ್ನು ನಿರ್ವಹಣೆ ಮಾಡುತ್ತಾಳೆಯೇ ಎನ್ನುವ ಕುರಿತಾಗಿನ ಮಹಿಳಾ ಅಭಿಪ್ರಾಯವನ್ನು ಕಾಣಬಹುದಾಗಿದೆ. ಶೇ ೭೦ ರಷ್ಟು ಮಹಿಳೆಯರು ಸುಶಿಕ್ಷಿತ ಮಹಿಳೆಯು ಕುಟುಂಬವನ್ನು ಸರಿಯಾಗಿ ನಿರ್ವಹಣೆ ಮಾಡುತ್ತಾಳೆ ಎಂದಿದ್ದಾರೆ. ಹಾಗೆಯೇ ಶೇ. ೨೨ ರಷ್ಟು ಸಂದರ್ಶನಕಾರರು ಇದಕ್ಕೆ ವಿರುದ್ಧವಾಗಿ ಹೇಳಿಕೆಯನ್ನು ನೀಡಿದ್ದಾರೆ. ಮತ್ತು ಶೇ ೮ ರಷ್ಟು ಮಹಿಳೆಯರು ಯಾವುದೇ ಅಭಿಪ್ರಾಯವನ್ನು ನೀಡಲು ವಿಫಲರಾಗಿದ್ದಾರೆ. ಈ ಎಲ್ಲಾ ಅಂಶಗಳನ್ನು ಚಿತ್ರದಲ್ಲಿ ಕಾಣಬಹುದಾಗಿದೆ.

ಸುಶಿಕ್ಷಿತ ಮಹಿಳೆಯು ಬದಲಾವಣೆಯನ್ನು ಸ್ವೀಕರಿಸುತ್ತಾಳೆಯೇ ಎನ್ನುವುದರ ಮೇಲಿನ ಮಹಿಳಾ ಸಂದರ್ಶನಕಾರರ ಅಭಿಪ್ರಾಯವನ್ನು ತಖ್ತೆ ೬ ಹಾಗೂ ಚಿತ್ರದಲ್ಲಿ ಕಾಣಬಹುದಾಗಿದೆ. ಶೇಕಡಾ ೪೮ ಮಹಿಳೆಯರು ಒಬ್ಬ ಸುಶಿಕ್ಷಿತ ಮಹಿಳೆಯ ಬದಲಾವಣೆಗೆ ಬೇಗನೆ ಹೊಂದಿಕೊಳ್ಳುತ್ತಾಳೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಶೇ. ೩೨ ಮಹಿಳೆಯರು ಇದಕ್ಕೆ ವಿರುದ್ಧವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ ಹಾಗೂ ಶೇ. ೨೦ ರಷ್ಟು ಮಹಿಳೆಯರು ಗೊತ್ತಿಲ್ಲ ಎಂದಿದ್ದಾರೆ.

ತಖ್ತೆ ೭ ರಲ್ಲಿ ಮಹಿಳೆಯರು ಉದ್ಯೋಗ ಪಡೆಯುವಲ್ಲಿನ ಸ್ಫೂರ್ತಿದಾಯಕರನ್ನು ಕಾಣಬಹುದಾಗಿದೆ. ಶೇಕಡಾ ೬೦ ರಷ್ಟು ಮಹಿಳೆಯರು ತಾವು ಉದ್ಯೋಗ ಪಡೆಯಲು ತಮ್ಮ ಪೋಷಕರು ಸ್ಫೂರ್ತಿದಾಯಕರಾಗಿದ್ದಾರೆ ಎಂದಿದ್ದಾರೆ. ಶೇ. ೨೪ ರಷ್ಟು ಮಹಿಳೆಯರು ತಾವು ಉದ್ಯೋಗ ಪಡೆಯಲು ಗಂಡ ಸ್ಫೂರ್ತಿದಾಯಕರು ಹಾಗೂ ಶೇ. ೧೬ ರಷ್ಟು ಮಹಿಳೆಯರು ಇತರರು ಅಂದರೆ ಗೆಳೆಯರು, ಸಹೋದರ/ಸಹೋದರಿಯರು ಸ್ಫೂರ್ತಿದಾಯಕರಾಗಿದ್ದಾರೆ ಎಂದಿದ್ದಾರೆ. ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಚಿತ್ರದಲ್ಲಿ ಕೂಡ ಇದನ್ನು ನೋಡಬಹುದಾಗಿದೆ.

ತಖ್ತೆ ೮ ಹಾಗೂ ಚಿತ್ರ ೮ ರಲ್ಲಿ ಉದ್ಯೋಗಸ್ಥ ಮಹಿಳೆಯು ಜೀವನದಲ್ಲಿ ಹೊಣೆಗಾರಿಕೆಯ ನಿರ್ದಾರಗಳನ್ನು ತೆಗೆದುಕೊಳ್ಳುತ್ತಾಳೆಯೇ ಎನ್ನುವ ಅಂಶವನ್ನು ಕಾಣಬಹುದಾಗಿದೆ. ಶೇಕಡಾ ೫೨ ರಷ್ಟು ಮಹಿಳೆಯರಲ್ಲಿ ಉದ್ಯೋಗಸ್ಥ ಮಹಿಳೆಯರು ತಮ್ಮ ಜೀವನದಲ್ಲಿ ಗಣನೀಯವಾಗಿ ಹೊಣೆಗಾರಿಕೆಯ ನಿರ್ದಾರಗಳನ್ನು ತೆಗೆದುಕೊಳ್ಳುತ್ತಾಳೆ ಎಂದು ಹೇಳಿದ್ದಾರೆ. ಶೇ. ೪೦ ರಷ್ಟು ಮಹಿಳೆಯರಲ್ಲಿ ಉದ್ಯೋಗಸ್ಥ ಮಹಿಳೆಯು ತಮ್ಮ ಜೀವನದಲ್ಲಿ ಸ್ವಲ್ಪವಾಗಿ ಹೊಣೆಗಾರಿಕೆಯ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾಳೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅಂದರೆ ಮಹಿಳೆಯರು ಯಾವುದೇ ನಿರ್ಧಾರ ಕೈಗೊಳ್ಳುವಾಗ ಇತರರ ಅಭಿಪ್ರಾಯವನ್ನು ತೆಗೆದುಕೊಳ್ಳುತ್ತಾಳೆ ಎಂದು

ಹೇಳಬಹುದು ಹಾಗೂ ಶೇ ೮ ರಷ್ಟು ಮಹಿಳೆಯರಲ್ಲಿ ಉದೋಗಸ್ಥ ಮಹಿಳೆಯು ಹೊಣೆಗಾರಿಕೆಯ ನಿರ್ಧಾರಗಳನ್ನು ತೆಗೆದುಕೊಳ್ಳುವುದಿಲ್ಲ ಎಂದಿದ್ದಾರೆ. ಅಂದರೆ ಮಹಿಳೆಯು ಯಾವುದೇ ನಿರ್ಧಾರಗಳನ್ನು ತೆಗೆದುಕೊಳ್ಳದೇ ಅದಕ್ಕೆ ಪುರುಷರ ಮೇಲೆ ಅವಲಂಭಿಸಿರುತ್ತಾರೆ.

ಉದ್ಯೋಗ ಸೇರುವಲ್ಲಿ ಮಹಿಳೆ ಎದುರಿಸುವ ಸಮಸ್ಯೆಯನ್ನು ತಖ್ತೆ ೯ ರಲ್ಲಿ ತೋರಿಸಲಾಗಿದೆ. ಶೇ ೪೮ ರಷ್ಟು ಮಹಿಳೆಯರು ತಾವು ಉದ್ಯೋಗ ಪಡೆಯುವಲ್ಲಿ ಹಣಕಾಸಿನ ತೊಂದರೆಯನ್ನು ಎದುರಿಸುತ್ತಿದ್ದಾರೆ. ಅಂದರೆ ತಮ್ಮ ಕುಟುಂಬದಲ್ಲಿನ ಬಡತನವು ತಾವು ಓದಲಿಕ್ಕೆ ಮತ್ತು ಉದ್ಯೋಗ ಪಡೆಯುವಲ್ಲಿ ತೊಂದರೆಯಾಗುತ್ತದೆ. ಶೇ ೩೨ ರಷ್ಟು ಮಹಿಳೆಯರು ಸಮಾಜದ ಕಟ್ಟುಪಾಡುಗಳು ಹಾಗೂ ಶೇ ೨೦ ರಷ್ಟು ಮಹಿಳೆಯರು ಇತರೆ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇದನ್ನು ಚಿತ್ರದಲ್ಲಿ ಯೂ ಸಹ ಕಾಣಬಹುದಾಗಿದೆ.

ತಖ್ತೆ ೧೦ ಹಾಗೂ ಚಿತ್ರ ೧೦ ರಲ್ಲಿ ಉದ್ಯೋಗಸ್ಥ ಮಹಿಳೆಯು ತೆಗೆದುಕೊಳ್ಳುವ ನಿರ್ಧಾರದ ಬಗ್ಗೆ ಕುಟುಂಬ ಸದಸ್ಯರ ವರ್ತನೆಯುನ್ನು ಕಾಣಬಹುದಾಗಿದೆ. ಮೇಲಿನ ಪಟ್ಟಿಯು ತೋರಿಸುವುದೇನೆಂದರೆ, ಶೇ ೪೦ ರಷ್ಟು ಮಹಿಳೆಯರು ಗಂಡನ ವರ್ತನೆಯು ಬದಲಾಗಿಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಶೇ ೩೨ ರಷ್ಟು ಮಹಿಳೆಯರು ಗಂಡನ ವರ್ತನೆಯು ಮಹಿಳೆ ತೆಗೆದುಕೊಳ್ಳುವ ನಿರ್ಧಾರದ ಕುರಿತಾಗಿ ಸ್ವಲ್ಪವಾಗಿ ಬದಲಾಗಿದೆ ಎಂದಿದ್ದಾರೆ. ಅದೇ ರೀತಿ ಶೇ. ೨೮ ರಷ್ಟು ಮಹಿಳೆಯರ, ಗಂಡನ ವರ್ತನೆಯ ಗಣನೀಯವಾಗಿ ಬದಲಾಗಿದೆ ಎಂದಿದ್ದಾರೆ. ಮಹಿಳೆಯರ ನಿರ್ಧಾರದ ಬಗ್ಗೆ ಪೋಷಕರ ವರ್ತನೆ ಬಗ್ಗೆ ಕೇಳಿದಾಗ ಶೇ ೫೨ ರಷ್ಟು ಮಹಿಳೆಯರ ಪೋಷಕರ ವರ್ತನೆಯು ಗಣನೀಯವಾಗಿ ಬದಲಾಗಿದೆ. ಶೇ ೩೨ ರಷ್ಟು ಮಹಿಳೆಯರು ಸ್ವಲ್ಪವಾಗಿ ಬದಲಾಗಿದೆ ಹಾಗೂ ಶೇ ೧೬ ರಷ್ಟು ಮಹಿಳೆಯರು ಯಾವುದೇ ಬದಲಾವಣೆಯಾಗಿಲ್ಲ ಎಡಂದು ಹೇಳಿದ್ದಾರೆ. ಈ ಮೇಲಿನ ಪಟ್ಟಿಯ ಆಧಾರದ ಮೇಲೆ ತಿಳಿಯುವುದೇನೆಂದರೆ ಗಂಡನ ಮತ್ತು ಅತ್ತೆ&ಮಾವರ ವರ್ತನೆಯು ಮಹಿಳೆ ತೆಗೆದುಕೊಳ್ಳುವ ನಿರ್ಧಾರದ ಕುರಿತಾಗಿ ಬದಲಾಗಬೇಕಿದೆ.

ಪಟ್ಟಿ ೧೧ ರಲ್ಲಿ ಕುಟುಂಬಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ನಿರ್ಧಾರ ಕೈಗೊಳ್ಳುವಾಗ ಇತರ ಸದಸ್ಯರನ್ನು ವಿಚಾರಿಸುವ ಕುರಿತಾಗಿ ಕಾಣಬಹುದಾಗಿದೆ. ಶೇ ೫೦ ಮಹಿಳೆಯರು ತಾವು ನಿರ್ಧಾರ ಕೈಗೊಳ್ಳುವಾಗ ತಮ್ಮ ಗಂಡನ ಅಭಿಪ್ರಾಯವನ್ನು ಗಣನೀಯವಾಗಿ ಕೇಳುತ್ತಾರೆ. ಶೇ ೩೪ ರಷ್ಟು ಮಹಿಳೆಯರು ನಿರ್ಧಾರ ಕೈಗೊಳ್ಳುವಾಗ ಸ್ವಲ್ಪವಾಗಿ ತಮ್ಮ ಗಂಡನ ಅಭಿಪ್ರಾಯವನ್ನು ತೆಗೆದುಕೊಳ್ಳುತ್ತಾರೆ. ಶೇ ೪೪ ಮಹಿಳೆಯರು ಗಣನೀಯವಾಗಿ ತಮ್ಮ ಪೋಷಕರನ್ನು ವಿಚಾರಿಸುತ್ತಾರೆ. ಹಾಗೂ ಶೇ ೫೨ ರಷ್ಟು ಮಹಿಳೆಯರು ಕುಟುಂಬಕ್ಕೆ ಸಂಬಂಧಿಸಿದ ವಿಷಯಗಳನ್ನು ನಿರ್ಧಾರ ಕೈಗೊಳ್ಳುವಾಗ ತಮ್ಮ ಅತ್ತೆ – ಮಾವರ ಅಭಿಪ್ರಾಯಗಳನ್ನು ತೆಗೆದುಕೊಳ್ಳುವುದಿಲ್ಲ.

ತಖ್ತೆ ೧೨ ರಲ್ಲಿ ಉದ್ಯೋಗವು ಸರಿಯಾದ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವಲ್ಲಿ ನೆರವಾಗುತ್ತದೆಯೇ ಎನ್ನುವ ಮಹಿಳೆಯರ ಅಭಿಪ್ರಾಯವನ್ನು ಕಾಣಬಹುದು. ಶೇ ೬೮ ರಷ್ಟು ಮಹಿಳೆಯರು ಉದ್ಯೋಗವು ಸರಿಯಾದ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳಲು ನೆರವಾಗುತ್ತದೆ ಎಂದು ಹೇಳಿದ್ದಾರೆ ಹಾಗೂ ಶೇ ೨೪ ರಷ್ಟು ಮಹಿಳೆಯರು ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳಲು ಉದ್ಯೋಗವು ನೆರವಾಗುವುದಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಮತ್ತು ಶೇ ೮ ರಷ್ಟು ಮಹಿಳೆಯರು ಯಾವುದೇ ಅಭಿಪ್ರಾಯವನ್ನು ನೀಡಲು ನಿರಾಕರಿಸಿದ್ದಾರೆ. ಚಿತ್ರದಲ್ಲಿಯೂ ಸಹ ಇದನ್ನು ಕಾಣಬಹುದಾಗಿದೆ.

ಪಟ್ಟಿ ೧೩ ಹಾಗೂ ಚಿತ್ರ ೧೩ ರಲ್ಲಿ ಉದ್ಯೋಗಸ್ಥ ಮಹಿಳೆ ಮತ್ತು ಕುಟುಂಬ ಸದಸ್ಯರ ನಡುವಿನ ಸಂಬಂಧವನ್ನು ನೋಡಬಹುದು. ಶೇಕಡಾ ೭೨ ರಷ್ಟು ಮಹಿಳೆಯರ ಸಂಬಂಧವು ತಮ್ಮ ಪೋಷಕರೊಡನೆ ಬಹಳ ಚೆನ್ನಾಗಿರುವುದನ್ನು ಹಾಗೂ ಶೇ ೧೮ ರಷ್ಟು ಮಹಿಳೆಯರ ಸಂಬಂಧವು ಚೆನ್ನಾಗಿರುವುದನ್ನು ಕಾಣಬಹುದಾಗಿದೆ. ಅದೇ ರೀತಿಯಾಗಿ ಶೇ ೬೦ ರಷ್ಟು ಮಹಿಳೆಯರ ಸಂಬಂಧವು ಗಂಡನೊಡನೆ ಬಹಳ ಚೆನ್ನಾಗುದೆ ಮತ್ತು ಶೇ ೨೨ ರಷ್ಟು ಮಹಿಳೆಯರ ಸಂಬಂಧವು ಚನ್ನಾಗಿರುವುದು ತೋರುತ್ತದೆ. ಅತ್ತೆ–ಮಾವರೊಡನೆ ಉದ್ಯೋಗಸ್ಥ ಮಹಿಳೆಯರ ಸಂಬಂಧವನ್ನು ಗಮನಿಸಿದಾಗ ಶೇ. ೪೦ ರಷ್ಟು ಮಹಿಳೆಯರ ಸಂಬಂಧವು ಬಹಳ ಚನ್ನಾಗಿರುವುದು ಹಾಗೂ ಶೇ ೩೨ ರಷ್ಟು ಮಹಿಳೆಯರ ಸಂಬಂಧವು ಚೆನ್ನಾಗಿರುವುದು ತೋರುತ್ತದೆ. ಹಾಗೂ ಶೇ ೧೬ ರಷ್ಟು ಮಹಿಳೆಯರ ಸಂಬಂಧವು

ಅತ್ತೆ-ಮಾವರರೊಡನೆ ಚೆನ್ನಾಗಿಲ್ಲದಿರುವುದು ತೋರುತ್ತದೆ. ಇತರರು ಅಂದರೆ ಸ್ನೇಹಿತರು, ಇತರ ಸಂಬಂಧಿಕರು ಹಾಗೂ ಉದ್ಯೋಗಸ್ಥ ಮಹಿಳೆಯರ ನಡುವಿನ ಸಂಬಂಧವನ್ನು ಗಮನಿಸಿದಾಗ ಶೇ. ೬೦. ರಷ್ಟು ಮಹಿಳೆಯರ ಸಂಬಂಧವು ಸ್ನೇಹಿತರೊಡನೆ ಬಹಳ ಚೆನ್ನಾಗಿದೆ. ಹಾಗೂ ಶೇ ೨೪ ರಷ್ಟು ಮಹಿಳೆಯರ ಸಂಬಂಧವು ಚೆನ್ನಾಗಿದೆ.

ಪಟ್ಟಿ ೧೪ ರಲ್ಲಿ ಉದ್ಯೋಗಸ್ಥ ಮಹಿಳೆ ಹಾಗೂ ಕುಟುಂಬದ ಸದಸ್ಯರ ಹೊಂದಾಣಿಕೆಯನ್ನು ಗಮನಿಸಬಹುದು. ಶೇ ೬೪ ರಷ್ಟು ಮಹಿಳೆಯರು ಉದ್ಯೋಗಸ್ಥ ಮಹಿಳೆ ಹಾಗೂ ಇತರ ಬಸದಸ್ಯರು ಹೊಂದಿಕೊಂಡು ಇರಲು ಸಾಧ್ಯವಿಲ್ಲ ಎಂದಿದ್ದಾರೆ. ಅದೇ ರೀತಿಯಾಗಿ ಶೇಕಡಾ ೩೬ ರಷ್ಟು ಮಹಿಳೆಯರು ಹೊಂದಾಣಿಕೆ ಸಾಧ್ಯ ಎಂದಿದ್ದಾರೆ., ಸಂಬಂಧ ಸರಿಯಾಗಿರದಿರಲು ಕಾರಣಗಳನ್ನು ನೋಡಿದಾಗ ಶೇ ೬೨.೫ ರಷ್ಟು ಮಹಿಳೆಯರು ಉದ್ಯೋಗದ ಒತ್ತಡದಿಂದ ಇತರ ಸದಸ್ಯರೊಂದಿಗೆ ಸರಿಯಾಗಿ ಹೊಂದಿಕೊಂಡು ಇರಲು ಸಾಧ್ಯವಿಲ್ಲ ಎಂದಿದ್ದಾರೆ ಶೇ ೧೮.೫ ರಷ್ಟು ಮಹಿಳೆಯರು ಸದಸ್ಯರ ಅಸಹಕಾರ ಹಾಗೂ ಮನೆಯಿಂದ ಬೇರೆ ಹೋಗುವ ವಿಚಾರದಿಂದ ಇತರ ಸದಸ್ಯರೊಂದಿಗೆ ಸರಿಯಾಗಿ ಹೊಂದಿಕೊಂಡು ಇರಲು ಸಾಧ್ಯವಿಲ್ಲ ಎಂದಿದ್ದಾರೆ. ಚಿತ್ರದಲ್ಲಿ ಯೂ ಸಹ ಕಾಣಬಹುದು.

ಪಟ್ಟಿ ೧೫ ಹಾಗೂ ಚಿತ್ರದಲ್ಲಿ ಗಮನಿಸಿದಾಗ ಶೇ ೫೬ ರಷ್ಟು ಉದ್ಯೋಗಸ್ಥ ಮಹಿಳೆಯರು ತಮ್ಮ ತಿಂಗಳ ವೇತನವನ್ನು ಸದ್ಭಳಕೆ ಮಾಡುವಲ್ಲಿ ಸ್ವತಂತ್ರ ಹೊಂದಿದ್ದಾರೆ. ಹಾಗೂ ಶೇ ೪೪ ರಷ್ಟು ಮಹಿಳೆಯರು ತಮ್ಮ ವೇತನವನ್ನು ಸದ್ಭಳಕೆ ಮಾಡುವಲ್ಲಿ ಸ್ವತಂತ್ರ ಇರದೆ ಇತರ ಸದಸ್ಯರನ್ನು ಅವಲಂಭಿಸಿದ್ದಾರೆ. ಉದ್ಯೋಗಸ್ಥ ಮಹಿಳೆಯರು ತಮ್ಮ ವೇತನವನ್ನು ಸದ್ಭಳಕೆ ಮಾಡುವಲ್ಲಿ ಮನೆಯ ಇತರ ಸದಸ್ಯರ ಒಪ್ಪಿಗೆಯನ್ನು ತೆಗೆದುಕೊಳ್ಳಬೇಕಾಗುತ್ತದೆ. ಕಾರಣ ತಮ್ಮ ವೇತನವನ್ನು ಬಳಕೆ ಮಾಡುವಲ್ಲಿ ಸ್ವತಂತ್ರವಿರುವುದಿಲ್ಲ. ಶೇಕಡಾ ೪೩ ರಷ್ಟು ಮಹಿಳೆಯರು ತಮ್ಮ ವೇತನವನ್ನು ಮನೆಯ ಯಜಮಾನನ ಕೈಗೆ ಕೊಡುವ ಪದ್ಧತಿ ಇರುವುದರಿಂದ ಅವರಿಗೆ ಸ್ವತಂತ್ರವಿರುವುದಿಲ್ಲ. ಅದೇ ರೀತಿಯಾಗಿ ಶೇ ೨೮ ರಷ್ಟು ಮಹಿಳೆಯರು ತಮ್ಮ ವೇತನವನ್ನು ಸದ್ಭಳಕೆ ಮಾಡುವಲ್ಲಿ ಸಾದ್ಯವಿಲ್ಲ ಎಂದಿದ್ದಾರೆ. ಶೇ ೧೪ ರಷ್ಟು ಮಹಿಳೆಯರು ಇತರ ಸದಸ್ಯರ ಒಪ್ಪಿಗೆಗೆ ಕಾಯುವುದು ಹಾಗೂ ಗಂಡನ ಒಪ್ಪಿಗೆ ಮುಖ್ಯ ಎಂದಿದ್ದಾರೆ.

ತಖ್ತೆ ೧೬ ರಲ್ಲಿ ಉದ್ಯೋಗಸ್ಥ ಮಹಿಳೆಯರು ತಮ್ಮ ವೇತನವನ್ನು ಯಾವ ಯಾವ ಅಂಶಗಳ ಮೇಲೆ ವೆಚ್ಚ ಮಾಡಲು ಸ್ವತಂತ್ರ ಹೊಂದಿದ್ದಾರೆ. ಎನ್ನುವುದನ್ನು ನೋಡಬಹುದಾಗಿದೆ. ಶೇ ೬೮ ರಷ್ಟು ಉದ್ಯೋಗಸ್ಥ ಮಹಿಳೆಯರು ತಮ್ಮ ವೇತನವನ್ನು, ಗೃಹೋಪಕರಣಗಳನ್ನು ಕೊಳ್ಳಲು ಬಟ್ಟೆ, ಆಭರಣ, ಸೌಂದರ್ಯ ವರ್ಧಕಗಳು, ಪೋಷಕರ ಮತ್ತು ಸ್ವಂತ ಆರೋಗ್ಯ ಹಾಗೂ ತಮ್ಮ ಸಹೋದರ/ ಸಹೋದರಿಯರ ವಿದ್ಯಾಭ್ಯಾಸದ ಮೇಲೆ ವೆಚ್ಚ ಮಾಡಲು ಸ್ವತಂತ್ರ ಹೊಂದಿದ್ದಾರೆ. ಶೇ ೬೦ ರಷ್ಟು ಮಹಿಳೆಯರು ತಮ್ಮ ವೇತನವನ್ನು ಬೇರೆ ಬೇರೆ ರೀತಿಯಲ್ಲಿ ಠೇವಣಿ ಇಡಲು ಸ್ವಾತಂತ್ರ್ಯ ಹೊಂದಿದ್ದರೆ ಶೇ ೬೪ ರಷ್ಟು ಮಹಿಳೆಯರು ಉಡುಗೊರೆ ಇತ್ಯಾದಿಗಳ ಮೇಲೆ ವೆಚ್ಚ ಮಾಡಲು ಸ್ವತಂತ್ರ ಹೊಂದಿದ್ದಾರೆ. ಈ ಎಲ್ಲಾ ಅಂಶಗಳನ್ನು ಚಿತ್ರದಲ್ಲಿಯೂ ಕೂಡ ಗಮನಿಸಬಹುದಾಗಿದೆ.

ಪಟ್ಟಿ ೧೭ ಮತ್ತು ಚಿತ್ರದಲ್ಲಿ ಮನೆಯ ಸದಸ್ಯರು ಉದ್ಯೋಗಸ್ಥ ಮಹಿಳೆಗೆ ದಿನ ನಿತ್ಯದ ಯಾವ ಯಾವ ಕೆಲಸಗಳಲ್ಲಿ ಸಹಾಯ ಮಾಡುತ್ತಾರೆ ಎನ್ನುವುದನ್ನು ಕಾಣಬಹುದು. ಅಡುಗೆ ತಯಾರಿಕೆಯಲ್ಲಿ ಶೇ ೫೨ ರಷ್ಟು ಮಹಿಳೆಯರಿಗೆ ಪೋಷಕರು ಸಹಾಯ ಮಾಡುತ್ತಾರೆ. ಅದೇ ರೀತಿಯಾಗಿ ಶೇ ೧೮ ಮಹಿಳೆಯರಿಗೆ ಅವರ ಗಂಡಂದಿರು, ಶೇ ೧೬ ರಷ್ಟು ಮಹಿಳೆಯರಿಗೆ ಅತ್ತೆ-ಮಾವ ಹಾಗೂ ಶೇ ೧೪ ರಷ್ಟು ಮಹಿಳೆಯರಿಗೆ ಕೆಲಸದವರು ಸಹಾಯ ಮಾಡುತ್ತಾರೆ. ದಿನನಿತ್ಯದ ಸ್ವಚ್ಛತೆಯಲ್ಲಿ ಶೇ ೬೦ ರಷ್ಟು ಮಹಿಳೆಯರಿಗೆ ಅವರ ಪೋಷಕರು ಶೇ ೧೪ ರಷ್ಟು ಮಹಿಳೆಯರಿಗೆ ಅವರ ಗಂಡಂದಿರು ಶೇ ೧೨ ರಷ್ಟು ಮಹಿಳೆಯರಿಗೆ ಅತ್ತೆ-ಮಾವ ಹಾಗೂ ಶೇ ೧೪ ರಷ್ಟು ಮಹಿಳೆಯರಿಗೆ ಕೆಲಸದವರು ನೆರವಾಗುತ್ತಾರೆ, ಅತಿಥಿ/ಸಂಬಂಧಿಕರನ್ನು ನೋಡಿಕೊಳ್ಳುವಲ್ಲಿ ಶೇ ೪೦ ರಷ್ಟು ಮಹಿಳೆಯರಿಗೆ ಪೋಷಕರು ಹಾಗೂ ಗಂಡಂದಿರು, ಶೇ ೨೦ ರಷ್ಟು ಮಹಿಳೆಯರಿಗೆ ಅವರ ಅತ್ತೆ-ಮಾವ ಸಹಾಯ ಮಾಡುತ್ತಾರೆ. ಮಕ್ಕಳ ಲಾಲನೆ/ಪಾಲನೆಯಲ್ಲಿ ಶೇ ೩೨ ರಷ್ಟು ಮಹಿಳೆಯರಿಗೆ ಪೋಷಕರು ಶೇ ೪೦ ರಷ್ಟು ಮಹಿಳೆಯರಿಗೆ ಅತ್ತೆ-ಮಾವ ಹಾಗೂ ಶೇ೨೮ ರಷ್ಟು ಮಹಿಳೆಯರಿಗೆ ಅವರ ಗಂಡಂದಿರು ನೆರವಾಗುತ್ತಾರೆ.

ಪಟ್ಟಿ ೧೮ ಹಾಗೂ ಚಿತ್ರದಲ್ಲಿ ಉದಯೋಗಸ್ಥ ಮಹಿಳೆಯು ನಿರುದ್ಯೋಗಿ ಸದಸ್ಯರನ್ನು ತಾತ್ಸಾರದಿಂದ ನೋಡುತ್ತಾಳೆಯೇ ಎನ್ನುವ ಅಂಶವನ್ನು ಗಮನಿಸಬಹುದು. ಶೇ ೬೦ ರಷ್ಟು ಯಾವುದೇ ತಾರತಮ್ಯ ಮಾಡದೆ ಎಲ್ಲರನ್ನೂ ಸರಿಯಾಗಿ ನೋಡಿಕೊಳ್ಳುತ್ತಾರೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಶೇ ೩೦ ರಷ್ಟು ಮಹಿಳೆಯರು ಇದಕ್ಕೆ ಸ್ವಲ್ಪ ಮಟ್ಟಿಗೆ ಒಪ್ಪುತ್ತಾರೆ ಅದೇ ರೀತಿಯಾಗಿ ಶೇ ೧೦ ರಷ್ಟು ಮಹಿಳೆಯರು ಇದನ್ನು ಸಂಪೂರ್ಣವಾಗಿ ಒಪ್ಪುತ್ತಾರೆ. ಇದರಿಂದ ಗೋಚರವಾಗುವುದೇನೆಂದರೆ ಉದ್ಯೋಗಸ್ಥ ಮಹಿಳೆಯರು ಕಡಿಮೆ ತಾರತಮ್ಯ ಮಾಡುತ್ತಾರೆ.

ಉದ್ಯೋಗಸ್ಥ ಮಹಿಳೆ ಮತ್ತು ಗಂಡನ ನಡುವೆ ಕೌಟುಂಬಿಕ ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳಿರುತ್ತವೆಯೇ ಎನ್ನುವುದನ್ನು ಪಟ್ಟಿ ೧೯ ಹಾಗೂ ಚಿತ್ರದಲ್ಲಿ ಕಾಣಬಹುದಾಗಿದೆ. ಶೇ ೪೦ ರಷ್ಟು ಮಹಿಳೆಯರು ಭಿನ್ನಾಭಿಪ್ರಾಯಗಳಿರುತ್ತವೆ ಎಂದಿದ್ದಾರೆ. ಶೇ ೩೨ ರಷ್ಟು ಮಹಿಳೆಯರು ಯಾವುದೇ ಭಿನ್ನಾಭಿಪ್ರಾಯಗಳಿರುವುದಿಲ್ಲ ಎಂದಿದ್ದಾರೆ. ಹಾಗೂ ಶೇ ೨೮ ರಷ್ಟು ಮಹಿಳೆಯರು ಯಾವುದೇ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದಿಲ್ಲ. ಭಿನ್ನಾಭಿಪ್ರಾಯಗಳಿಗೆ ಕಾರಣಗಳನ್ನು ವೀಕ್ಷಿಸಿದಾಗ ಶೇ. ೩೧ ರಷ್ಟು ಮಹಿಳೆಯರು ಗಂಡನ ಬಗ್ಗೆ ಕಾಳಜಿ ಇರುವುದಿಲ್ಲ ಎನ್ನುವ ವಿಚಾರ ಕುರಿತಾಗಿ ಭಿನ್ನಾಭಿಪ್ರಾಯಗಳು ಬರುತ್ತವೆ. ಎಂದು ಅಭಿಪ್ರಾಯ ಪಟ್ಟಿದ್ದಾರೆ. ಶೇ ೨೫ ರಷ್ಟು ಮಹಿಳೆಯರು ಮಕ್ಕಳ ಬಗ್ಗೆ ತಾತ್ಸಾರ ಹಾಗೂ ಕುಟುಂಬದ ನಿರ್ವಹಣೆಗೆ ಬೇಕಾದಷ್ಟು ಹಣ ನೀಡದಿರುವುದು ಭಿನ್ನಾಭಿಪ್ರಾಯಕ್ಕೆ ಕಾರಣವಾಗುತ್ತದೆ ಎಂದಿದ್ದಾರೆ. ಹಾಗೂ ಶೇ ೧೯ ರಷ್ಟು ಮಹಿಳೆಯರು ಕುಟುಂಬದ ಬಗ್ಗೆ ಹಿತಾಸಕ್ತಿ ಇಲ್ಲದಿರುವುದು ಭಿನ್ನಾಭಿಪ್ರಾಯಕ್ಕೆ ಕಾರಣವಾಗುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಪಟ್ಟಿ ೨೦ ಹಾಗೂ ಚಿತ್ರದಲ್ಲಿ ಉದ್ಯೋಗಸ್ಥ ಮಹಿಳೆಯರು ತಾವು ಕರ್ತವ್ಯ ನಿರ್ವಹಿಸುವಲ್ಲಿ ಎದುರಿಸುವ ಸಮಸ್ಯೆಗಳನ್ನು ಕಾಣಬಹುದು. ಶೇ ೬೪ ರಷ್ಟು ಮಹಿಳೆಯರು ಕರ್ತವ್ಯ ನಿರ್ವಹಿಸುವಲ್ಲಿ ಕೆಲಸದ ಒತ್ತಡವನ್ನು ಎದುರಿಸುತ್ತಿದ್ದಾರೆ ಶೇ ೧೬ ರಷ್ಟು ಮಹಿಳೆಯರು ಕರ್ತವ್ಯ ನಿರ್ವಹಿಸುವಲ್ಲಿ ಮೇಲಾಧಿಕಾರಿಗಳ ದಬ್ಬಾಳಿಕೆಯನ್ನು ಎದುರಿಸುತ್ತಿದ್ದಾರೆ. ಅದೇ ರೀತಿಯಾಗಿ ಶೇ ೧೨ ರಷ್ಟು ಮಹಿಳೆಯರು ತಮ್ಮ ಕರ್ತವ್ಯ ನಿರ್ವಹಿಸುವಲ್ಲಿ ರಾಜಕೀಯ ಒತ್ತಡವನ್ನು ಎದುರಿಸುತ್ತಿದ್ದರೆ, ಶೇ ೮ ರಷ್ಟು ಮಹಿಳೆಯರು ಸಹೋದ್ಯೋಗಿಗಳ ಅಸಹಕಾರದ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ.

ಪಟ್ಟಿ ೨೧ ರಲ್ಲಿ ಉದ್ಯೋಗಸ್ಥ ಮಹಿಳೆಯು ಯಾರೊಂದಿಗೆ ದಕ್ಷತೆಯಿಂದ ಕೆಲಸ ನಿರ್ವಹಿಸುತ್ತಾಳೆ ಎನ್ನುವುದನ್ನು ಗಮನಿಸಬಹುದು. ಶೇ ೫೨ ರಷ್ಟು ಮಹಿಳೆಯರು ಗಂಡಸರೊಂದಿಗೆ ಹಾಗೂ ಶೇ ೫೮ ರಷ್ಟು ಮಹಿಳೆಯರು ಹೆಂಗಸರೊಂದಿಗೆ, ಉದ್ಯೋಗಸ್ಥ ಮಹಿಳೆಯು ಅತ್ಯಂತ ದಕ್ಷತೆಯಿಂದ ಕೆಲಸ ನಿರ್ವಹಿಸುತ್ತಾಳೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಶೇ ೪೨ ರಷ್ಟು ಮಹಿಳೆಯರು ಹಾಗೂ ಶೇ ೨೬ ರಷ್ಟು ಮಹಿಳೆಯರು ಗಂಡಸರೊಂದಿಗೆ, ಹಾಗೂ ಹೆಂಗಸರೊಂದಿಗೆ ಉದ್ಯೋಗಸ್ಥ ಮಹಿಳೆಯು ಧಕ್ಷತೆಯಿಂದ ಕೆಲಸ ನಿರ್ವಹಿಸುತ್ತಾರೆ ಎಂದಿದ್ದಾರೆ. ಹಾಗೂ ಶೇ ೨೨ ರಷ್ಟು ಮಹಿಳೆಯರು ಗಂಡಸರೊಂದಿಗೆ ಸರಾಸರಿಯಾಗಿ ಕೆಲಸ ನಿರ್ವಹಿಸುತ್ತಾಳೆ.

ಪಟ್ಟಿ ೨೨ ರಲ್ಲಿ ಮಹಿಳೆಯರ ಬಗೆಗಿನ ಉನ್ನತಾಧಿಕಾರಿಗಳ ವರ್ತನೆಯನ್ನು ಕಾಣಬಹುದಾಗಿದೆ. ಸಹಾಯ ಮತ್ತು ಸಹಕಾರಕ್ಕೆ ಸಂಬಂಧಿಸಿದಂತೆ ಶೇ ೬೬ ರಷ್ಟು ಉನ್ನತಾಧಿಕಾರಿಗಳ ವರ್ತನೆಯು ಚನ್ನಾಗಿದೆ. ಮತ್ತು ಶೇ ೩೪ ರಷ್ಟು ಅಧಿಕಾರಿಗಳ ವರ್ತನೆಯು ಸರಾಸರಿಯಾಗಿ (ಪರವಾಗಿಲ್ಲ) ಇದೆ. ಸಮಾನತೆಗೆ ಸಂಬಂಧಿಸಿದಂತೆ ನೋಡಿದಾಗ ಶೇ ೪೮ ರಷ್ಟು ಉನ್ನತಾಧಿಕಾರಿಗಳು ಮಹಿಳೆಯರನ್ನು ಸಂಪೂರ್ಣ ಸಮಾನತೆಯಿಂದ ಕಾಣುತ್ತಾರೆ. ಶೇ ೨೮ ರಷ್ಟು ಅಧಿಕಾರಿಗಳು ಮಹಿಳೆಯರನ್ನು ಕೆಲ ಮಟ್ಟಿಗೆ ಸಮಾನತೆಯಿಂದ ಕಾಣುತ್ತಾರೆ. ಹಾಗೂ ಶೇ ೨೪ ರಷ್ಟು ಅಧಿಕಾರಿಗಳು ಮಹಿಳೆಯರಿಗೆ ಸಮಾನತೆಯನ್ನು ನೀಡದೆ ತಾರತಮ್ಯ ಮಾಡುತ್ತಾರೆ. ಗೌರವ ಮತ್ತು ಸಹಾನುಭೂತಿಯನ್ನು ನೋಡಿದಾಗ ಶೇ ೬೬ ಅಧಿಕಾರಿಗಳು ಮಹಿಳೆಯರನ್ನು ತುಂಬು ಗೌರವದಿಂದ ಕಾಣುತ್ತಾರೆ ಹಾಗೂ ಶೇ ೩೮ ರಷ್ಟು ಅಧಿಕಾರಿಗಳು ಮಹಿಳೆಯರನ್ನು ಸಾಧಾರಣವಾಗಿ ಗೌರವದಿಂದ ಕಾಣುತ್ತಾರೆ.

ಪಟ್ಟಿ ೨೩ ರಲ್ಲಿ ಗಂಡಸರಿಗೆ ಹೋಲಿಸಿದಂತೆ ಮಹಿಳೆಯು ಯಾವ ರೀತಿಯಲ್ಲಿ ಕೆಲಸವನ್ನು ನಿರ್ವಹಿಸುತ್ತಾಳೆ ಎನ್ನುವುದನ್ನು ಗಮನಿಸಬಹುದಾಗಿದೆ. ಸಮಯ ಪಾಲನೆಯನ್ನು ಗಮನಿಸಿದಾಗ ಶೇ ೫೮ ರಷ್ಟು ಮಹಿಳೆಯರು ಗಂಡಸರಿಗೆ ಹೋಲಿಸಿದಂತೆ ಹೆಚ್ಚು ಸಮಯ ಪಾಲನೆಯನ್ನು ಮಾಡುತ್ತಾರೆ. ಪುರುಷರಿಗೆ ಹೋಲಿಸಿದಂತೆ ಸಮವಾಗಿದ್ದಾರೆ. ಧಕ್ಷತೆಯನ್ನು ನೋಡಿದಾಗ ಶೇ ೭೦ ರಷ್ಟು ಮಹಿಳೆಯರು ಪುರುಷರಿಗೆ ಹೋಲಿಸಿದಂತೆ ಹೆಚ್ಚು ಧಕ್ಷತೆಯಿಂದ ಕೆಲಸ

ನಿರ್ವಹಿಸುತ್ತಾರೆ. ಅದೇ ರೀತಿಯಾಗಿ ಸ್ನೇಹ ಮತ್ತು ಸದೃಢತೆಯನ್ನು ಗಮನಿಸಿದಾಗ ಮಹಿಳೆಯರು ಪುರುಷರಿಗಿಂತ ಕಡಿಮೆ ಸ್ನೇಹಯುತ ಮತ್ತು ದೃಡತೆಯನ್ನು ಹೊಂದಿದ್ದಾರೆ.

ಪಟ್ಟಿ ೨೪ ರಲ್ಲಿ ಉದ್ಯೋಗಸ್ಥ ಮಹಿಳೆಯರ ಬಗೆಗಿನ ಸಹೋದ್ಯೋಗಿಗಳ ವರ್ತನೆಯನ್ನು ನೋಡಬಹುದಾಗಿದೆ. ಶೇ ೮೦ ರಷ್ಟು ಸಹೋದ್ಯೋಗಿಗಳು ಮಹಿಳೆಯರನ್ನು ಗೌರವ ಮತ್ತು ಸಹಾನುಭೂತಿಯಿಂದ ಕಾಣುತ್ತಾರೆ. ಶೇ ೬೦ ರಷ್ಟು ಸಹೋದ್ಯೋಗಿಗಳು ಮಹಿಳೆಯರಿಗೆ ಸಹಾಯ ಮತ್ತು ಸಹಕಾರವನ್ನು ನೀಡಿ ಅವರಿಗೆ ಕೆಲಸದಲ್ಲಿ ನೆರವು ನೀಡುತ್ತಾರೆ. ಸಮಾನತೆಯನ್ನು ನೋಡಿದಾಗ ಮಹಿಳೆಯರಿಗೆ ಅಸಮಾನತೆಯನ್ನು ನಾವು ಕಾಣಬಹುದಾಗಿದೆ.

ಪಟ್ಟಿ ೨೫ ರಲ್ಲಿ ಮಹಿಳೆಯರು ಕಛೇರಿಗೆ ಸಂಬಂಧಿಸಿದ ಇತರೆ ಸಮಾರಂಭಗಳಲ್ಲಿ ಯಾವ ರೀತಿ ಭಾಗವಹಿಸುತ್ತಾರೆ ಎನ್ನುವುದನ್ನು ನೋಡಬಹುದು. ಪಟ್ಟಿಯನ್ನು ಗಮನಿಸಿದಾಗ ಶೇ ೬೮ ರಷ್ಟು ಮಹಿಳೆಯರು ಕೆಲವು ಬಾರಿ ಮಾತ್ರ ವರಸಂಚಾರ ಹಾಗೂ ಹುಟ್ಟು ಹಬ್ಬಗಳು, ಮದುವೆ ಸಮಾರಂಭಗಳಲ್ಲಿ ಭಾಗವಹಿಸುತ್ತಾರೆ. ಇದರಿಂದ ವೇದ್ಯವಾಗುವುದೇನೆಂದರೆ ಮಹಿಳೆಯರು ಇತರೆ ಸಮಾರಂಭಗಳಲ್ಲಿ ಅಷ್ಟೊಂದು ಭಾಗವಹಿಸದಿರುವುದು ಕಂಡು ಬರುತ್ತದೆ.

ಮಹಿಳೆಯರು ಉದ್ಯೋಗ ಪಡೆಯಲು ಮುಖ್ಯ ಗುರಿಗಳನ್ನು (ಉದ್ದೇಶಗಳನ್ನು) ಪಟ್ಟಿ ೨೬ ಹಾಗೂ ಚಿತ್ರದಲ್ಲಿ ಕಾಣಬಹುದು. ಶೇ ೫೬ ರಷ್ಟು ಮಹಿಳೆಯರು ತಮ್ಮ ಕುಟುಂಬದ ಏಳಿಗೆಗೋಸ್ಕರ ಉದ್ಯೋಗಕ್ಕೆ ಸೇರಿರುತ್ತಾರೆ. ಶೇ ೩೨ ರಷ್ಟು ಮಹಿಳೆಯರು ತಮ್ಮ ಸ್ವಂತ ನೆರವಿಗಾಗಿ ಉದ್ಯೋಗವನ್ನು ಪಡೆದಿರುತ್ತಾರೆ. ಹಾಗೂ ಶೇ ೧೨ ರಷ್ಟು ಮಹಿಳೆಯರು ಆರ್ಥಿಕ ಸ್ವಾವಲಂಬನೆಗೋಸ್ಕರ ಉದ್ಯೋಗಕ್ಕೆ ಸೇರಿರುತ್ತಾರೆ.

## ಸ್ತ್ರೀವಾದ ನಿರ್ವಚನ

ಮಹಿಳಾ ವಿಷಯಗಳು ಮತ್ತು ಮಹಿಳಾ ಅಧ್ಯಯನಗಳಂತೆ ಸ್ತ್ರೀವಾದವು ಕೂಡ ಉಳಿದ ವಿಷಯಗಳ ಜೊತೆ ಸಂಬಂಧವನ್ನು ಕಲ್ಪಿಸಿಕೊಳ್ಳುವಲ್ಲಿ ಆಸಕ್ತವಾಗಿದೆ. ಸ್ತ್ರೀವಾದವೆಂದರೆ ಅದೊಂದು ಲೋಕ ಗ್ರಹಿಕೆ ಹಾಗೂ ವೈಚಾರಿಕ ರಚನೆ. ಪ್ರಪಂಚವನ್ನು ಪ್ರಧಾನವಾಹಿನಿಗಿಂತ ಭಿನ್ನವಾಗಿ, ಪರ್ಯಾಯವಾಗಿ ನೋಡಬಲ್ಲ ದೃಷ್ಟಿಕೋನವನ್ನು ಸ್ತ್ರೀವಾದ ಪ್ರತಿನಿಧಿಸುತದೆ. ಪ್ರಪಂಚವನ್ನು ಕುರಿತ

ಸ್ತ್ರೀವಾದ ಗ್ರಹಿಕೆ ತನ್ನದೇ ಆದ ಪ್ರತ್ಯೇಕ ನಂಬಿಕೆ ಹಾಗೂ ಮೌಲ್ಯವುಳ್ಳ ವ್ಯವಸ್ಥೆಯನ್ನು ಹೊಂದಿದೆ. ಮಹಿಳೆಯ ಬಗೆಗೆ ಮಾದರೀಕೃತ ಲಿಂಗ ವ್ಯವಸ್ಥೆಯ ಕಲ್ಪನೆಗಳು ಹಾಗೂ ಊಹೆಗಳು ಸೃಷ್ಟಿಯಾಗಿದೆ. ಗಂಡು ಮತ್ತು ಹೆಣ್ಣು ಎನ್ನುವ ವ್ಯತ್ಯಾಸವನ್ನು ಮಾನವ ಜೀವಿ ವರ್ಗದಲ್ಲಿ ಗುರುತಿಸಿವಾಗ, ಮೊದಲಿಗೆ ಹುಟ್ಟೀನ ಸಂಧರ್ಭದಲ್ಲೇ ಪ್ರಕತವಾಗುವ ಜೈವಿಕ ಭಿನ್ನತೆ ಮುಖ್ಯವಾಯಿತು. ನಂತರ ಜೈವಿಕ ಅಂಶಗಳು ವ್ಯಕ್ತಿಯ ದೈಹಿಕ ಚಟುವಟಿಕೆಗಳನ್ನು ನಿಯಂತ್ರಿಸುವ ಸಂಗತಿಯಥಾರದ ಮೇಲೆ ಗಂಡುತನ, ಹೆಣ್ಣು ತನಗಳನ್ನು ಗುಉತಿಸಲಾಯಿತು. ಜೀವಶಾಸ್ತ್ರೀಯ ನೆಲೆಯ ಈ ಭಿನ್ನತೆಯೇ ಮೂಲವಾಗಿ ಗಂಡು-ಹೆಣ್ಣು ಎಂಬ ಲಿಂಗ ಪ್ರಭೇಧವನ್ನು ಹೆಣ್ಣು ತನವನ್ನು ಕನಿಷ್ಟವೆಂದು ನಿರ್ಧರಿಸುತ್ತವೆ. ಈ ಗ್ರಹಿಕೆಗೆ ಅನುಗುಣವಾದ ಗಂಡುಗುಣ ಹಾಗೂ ಹೆಣ್ಣು ಗುಣಗಳ ವಿವರಣೆಗಳೂ ಸಿಧ್ಧವಾಗಿ ಲಿಂಗವ್ಯವಸ್ಥೆಯು ಮಾನವ ಜೀವಿ ಎಂದು ಭಾವಿಸುವುದ್ದಕ್ಕಿಂತ ಭಿನವಾಗಿ ಸ್ತ್ರೀಯರ ಮಾದರಿಗಳನ್ನು ರೂಪುಗೊಂಡಿವೆ.

ಮೂಲತ: ಮಹಿಳಾ ಸಮಸ್ಯೆಗಳನ್ನು ಅರ್ಥಗೊಂಡು ತೀರ್ಮಾನಗಳನ್ನು ವಾದ ವಿವಾದಗಳನ್ನು ಪಕ್ಷಾತೀತವಾಗಿ ಅರ್ಥೈಸಿಕೊಳ್ಳುವುದರಲ್ಲಿ ಮಹಿಳಾ ಅಧ್ಯಯನವು ಆಸಕ್ತಿ ಹೊಂದಿವೆ. ಆದರೆ ಸ್ತ್ರೀವಾದ ಕುರಿತ ಪರಿಕಲ್ಪನೆಯು ಇತರರನ್ನು ಇಟ್ಟುಕೊಳ್ಳುವ ಕಾರಣಕ್ಕಾಗಿ ನಿರ್ದೇಶಿತವಾಗುವುದಿಲ್ಲ. ಸ್ತ್ರೀಪಿನಯಂ ಪರರನ್ನು ಆಕ್ರಮಿಸುವುದಿಲ್ಲ, ಪರ ಆಕ್ರಮಣವನ್ನು ತಡೆಗಟ್ಟಿ, ತನ್ನನು, ರಕ್ಷಿಸಿಕೊಂಡು ತನ್ನ ಸ್ವಾತಂತ್ರ್ಯವನ್ನು ಪುನರೂಥಿಸಿಕೊಳ್ಳುವುದು ಎಂದಾಗುತ್ತದೆ. ಮಹಿಳೆಯ ಸಮಸ್ಯೆಗಳನ್ನು ಜನಪ್ರಿಯ ದೃಷ್ಟಿಕೋನದಿಂದ ಅರಿಯಲೆತ್ನಿಸುವ ಪುರುಷ ಪ್ರಧಾನ ಚಿಂತನೆಗಳಿಂದ ಬಿಡಿಸುವ ಯತ್ನವನ್ನು ಸ್ತ್ರೀವಾದಿ ಅಧ್ಯಯನ ಮಾಡುತ್ತಿದೆ. ಸಮಸ್ಯೆಗಳನ್ನು ಹೆಚ್ಚು ಪಾರಧರ್ಕವಾಗಿ ಗ್ರಹಿಸುವುದರಿಂದ ಮಾತ್ರವೇ ಸಮಸ್ಯೆಯ ವಿರುಧ್ಧದ ಹೋರಾಟಕ್ಕೆ ಸಹಾಯಕವಾಗುತ್ತಿದೆ. ಹೀಗಾಗಿ ಮಹಿಳಾ ಅಧ್ಯಯನವು ಸೋಲು-ಗೆಲುವಿನಾಚಿನ ಜೀವಪರ ನಿಲುವಿನಿಂದ ಮಹಿಳೆಯರಿಗೆ ಸಂಬಂಧಿಸಿದ ಸಂಗತಿಗಳನ್ನು ಅಧ್ಯಯನ ಮಾಡುತ್ತದೆ.

ಆರ್ಥಿಕವಾಗಿ ಹಿಂದುಳಿದ ಮಹಿಳೆಯರ ಬದುಕಿನಲ್ಲಿ ರಚನಾತ್ಮಕ ಬದಲಾವಣೆಗಳನ್ನು ತರುವ ಪ್ರಯತ್ನದಲ್ಲಿರುವ ಮಹಿಳಾ ಕ್ರಿಯಾಶೀಲರ ಪ್ರಯೋಗ ವಿಧಾನಗಳನ್ನು ವೃತ್ತಿಪರ ಸಾಮಾಜಕಾರ್ಯ ಸಂಸ್ಥೆಗಳು ನಿರ್ಲಕ್ಷಿಸಿದೆ. ಸಮಾಜಕಾರ್ಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಮಹಿಳಾ ಕ್ರಿಯಾಶೀಲರ

ಸಾಧನೆಯನ್ನು ಒಳಗೊಳ್ಳುವ ಪ್ರಯತ್ನಗಳು ಅಲ್ಪವಾಗಿವೆ. ವೃತ್ತಿಪರ ಸಮಾಜಕಾರ್ಯಶಿಕ್ಷಣ ಮತ್ತು ಪ್ರಯೋಗಕ್ಕೆ ಅತ್ಯಂತ ಪ್ರಸ್ತುತವೆನಿಸಬಹುದಾದ ಸ್ತ್ರೀವಾದಿ ಸಂಶೋಧನೆಯು ಹೊಸದಾಗಿ ರೂಪುಗೊಳ್ಳುತ್ತಿದೆ. ಗಾಂಧಿವಾದ, ಮಾರ್ಕ್ಸ್‌ವಾದ, ಸಮಾಜವಾದ ಹಾಗೂ ಮುಸ್ಲಿಂ, ಕ್ರಿಶ್ಚಿಯನ್ ಧರ್ಮದ ಹಿನ್ನೆಲೆಯಲ್ಲಿ ತಮ್ಮದೇ ಆದ ತಾತ್ವಿಕತೆಯನ್ನು ಕಟ್ಟಿಕೊಂಡು ಅನೇಕ ಮಹಿಳೆಯರು ಕೆಲಸ ಮಾಡುತ್ತಿದ್ದಾರೆ. ಅವರ ಕಾರ್ಯವಿಧಾನ, ಮೌಲ್ಯಕಲ್ಪನೆ, ಸಂಘರ್ಷಗಳು ಮುಂತಾದವು ಏಕಕಾಲಕ್ಕೆ ಮಾದರಿಯೂ ಆಗುತ್ತದೆ. ಕ್ಷೇತ್ರಕಾರ್ಯದ ಅನುಭವಗಳಿಂದ ಆಧಾರಿತವಾಗಿಯೇ ಮಹಿಳೆಯರಲ್ಲಿನ ಪ್ರಜ್ಞಾ-ಉನ್ನತೀಕರಣ ಪ್ರಯತ್ನ ನಡೆದಾಗ ಮಾತ್ರ ಮಹಿಳಾ ಅಧ್ಯಯನ ಹಾಗೂ ಸಮಾಜ ಕಾರ್ಯಗಳೆರಡಕ್ಕೂ ಅಧಿಕೃತತೆ ಬರುತ್ತದೆ. ಆ ಮೂಲಕ ಸ್ತ್ರೀವಾದದ ಸಮಾಜಿಕ-ಸಾಂಸ್ಕೃತಿಕ ವಿಶ್ಲೇಷಣೆಗೆ ಭದ್ರವಾದ ಆಧಾರ ಒದಗುತ್ತದೆ.

೧೯೭೫-೧೯೮೫ರ ದಶಕವನ್ನು ಮಹಿಳಾ ದಶಕವೆಂದು ಘೋಷಿಸಿದ ಪರಿಣಾಮವಾಗಿ, ಭಾರತದಲ್ಲಿ ಕೂಡ ಮಹಿಳೆಯರ ಸ್ಥಿತಿಗತಿಗಳ ವಾಸ್ತವವನ್ನು ಕುರಿತ ಅಧ್ಯಯನವು ಚಾಲನೆಗೊಂಡಿತು. ಮಹಿಳಾ ದನಿಗಳಿಗೆ ಸ್ಪಂದಿಸುವುದರ ಪರಿಣಾಮವಾಗಿ ಸಂಶೋಧನೆ ಮತ್ತು ವಿಮರ್ಶಾ ಬರಹಗಳು ವ್ಯಾಪಕಗೊಂಡವು. ಮೊದಲಿಗೆ, ಮಹಿಳೆಯರ ಸ್ಥಿತಿಗತಿಗಳ ವಿಭಿನ್ನ ವಿಷಯಗಳ ಕುರಿತಾದ ಶೋಧ ಹಾಗೂ ಅಂತ ಅಂಶಗಳನ್ನಾಧರಿಸಿದ ಸರ್ವೇಕ್ಷಣೆಗಳು ನಡೆದವು. ಮಹಿಳಾ ಅಧ್ಯಯನದ ಸರಳ ಹಾಗೂ ನೇರ ಸ್ವರೂಪದ ಚಟುವಟಿಕೆಗಳವು. ಈ ಹಿಂದೆ ಅಷ್ಟೇನೂ ಪ್ರಸ್ತುತವಲ್ಲವೆಂದು ತಿಳಿದಿದ್ದ ಮಹಿಳೆಯರ ಲಿಂಗಗ್ರಹಣ ಫಲವಂತಿಕೆ, ಸಾವು, ಆರೋಗ್ಯ, ಶಿಕ್ಷಣ, ಪೋಷಣೆ, ವೃತ್ತಿ, ಉದ್ಯೋಗ, ಸಂಬಳ ಮುಂತಾದ ವಿಷಯಗಳ ಬಗೆಗೆ ಸಮಾಜೋ ಆರ್ಥಿಕ ಪರಿವೀಕ್ಷಣೆಗಳು ನಡೆದವು. ಕೆಲಸಗಾರ ಮಹಿಳೆಯರ ಸಂಘಟಿತ. ಅಸಂಘಟಿತ ಸ್ಥಿತಿ, ಕಾರ್ಯಭಾರ ಸ್ವರೂಪಗಳ ಬಗೆಗೆ ವಿವರವಾದ ಮಾಹಿತಿಗಳು ಲಭ್ಯವಾದವು.

ಸರ್ವೇಕ್ಷಣ ಕಾರ್ಯಕ್ಕೆ ಪೂರಕವಾಗಿ ಬದುಕಿನ ಬೇರೆ ಬೇರೆ ವಲಯದ ಸ್ಥಿತಿಗತಿಗಳ ಬಗೆಗೆ ತೀವ್ರವಾದ, ಗುಣಾತ್ಮಕವಾದ ಶೋಧಗಳು ನಡೆದವು ಕೈಗಾರಿಕೀಕರಣ, ಹೊಸ ತಂತ್ರಜ್ಞಾನ ಹಾಗೂ ಹೊಸ ಮಾರುಕಟ್ಟೆ ವಿಧಾನಗಳ ಪರಿಣಾಮಗಳು ಮಹಿಳೆಯರ ಮೇಲೆ ಉಂಟುಮಾಡಿರುವ ಪರಿಣಾಮಗಳನ್ನು ವಿಶ್ಲೇಷಿಸಲಾಯಿತು. ಸಾಂಪ್ರದಾಯಿಕ ವೃತ್ತಿಗಳಾದ ಕೃಷಿ, ಕರಕುಶಲಕಲೆ,

ಅಥವಾ ಕೂಲಿ ಕೆಲಸಗಳಲ್ಲಿ ತೊಡಗಿರುವ ಮಹಿಳೆಯರುಹೊಸ ತಂತ್ರಜ್ಞಾನ ಹಾಗೂ ಆಧುನಿಕ ಉತ್ಪಾದನಾ ಸಂಘಟನೆಗಳಿಂದ ಹೇಗೆ ಶೋಷಣೆಗೀಡಾದರ್ಂಬ ಸತ್ಯವು ಪ್ರಕಟಗೊಳ್ಳತೊಡಗಿತು. ಉದ್ಯೋಗಸ್ಥ ಮಹಿಳೆಯ ಮನೆಯ ಹೊರಗಿನ ಹಾಗೂ ಒಳಗಿನ ಪಾತ್ರ ನಿರ್ವಹಣೆಯ ಬಗೆಗೂ ಗಂಭೀರ ಅಧ್ಯಯನ ಮಾಡಲಾಯಿತು. ಮಹಿಳೆಯರ ನಾಗರಿಕ, ರಾಜಕೀಯ ವರ್ತನೆಯನ್ನು ಕುರಿತ ಅಧ್ಯಯನವು ಅವರಿಗೆ ನೀಡಲಾದ ಕಾನೂನು, ರಾಜಕೀಯ, ಸಾಮಾಜಿಕ ಸೌಲಭ್ಯಗಳನ್ನು ಎಷ್ಟರ ಮಟ್ಟಿಗೆ ಬಳಸುತ್ತಾರೆಂಬುದರ ಬಗ್ಗೆ ಕೇಂದ್ರೀಕರಿಸಿತು.

ಸ್ತ್ರೀವಾದ ಎನ್ನುವುದನ್ನು ಕೇವಲ ನಿರ್ದಿಷ್ಟ ತಾತ್ವಿಕ ಆಕಾರದೊಳಗೆ ಮಿತಗೊಳಿಸಿ ಇಡಲಾಗದು. ಸ್ತ್ರೀವಾದವು ಎಲ್ಲಾ ಕಾಲ, ದೇಶ, ಸಂಸ್ಕೃತಿಯ ಸ್ತ್ರೀಯರಿಗೆ ಏಕರೂಪವಾಗಿ ಅನ್ವಯಿಸುವಂತಹ ಅಮೂರ್ತ ತತ್ತ್ವವೆಲ್ಲಾ ಸ್ತ್ರೀವಾದ ಎಂದರೇನು? ಎಂಬುದರ ಬಗ್ಗೆ ತಿಳಿದುಕೊಳ್ಳಲು ಸ್ತ್ರೀವಾದದ ವ್ಯಾಖ್ಯೆ ಬಹಳ ಬಹುಮುಖಿಯಾಗಿವೆ. ಸ್ತ್ರೀವಾದ ಎನ್ನುವ ಪದ ಹದಿನೇಳನೇ ಶತಮಾನದಲ್ಲಿ ಮೊದಲ ಬಾರಿಗೆ ಬಳಕೆಯಾಯಿತಷ್ಟೇ ಹದಿನೆಂಟನೆಯ ಶತಮಾನದಲ್ಲಿ ಇಲ್ಲವೆ ಇಪ್ಪತ್ತನೆ ಶತಮಾನದಲ್ಲಿ ಬಳಕೆಯಾಗುವಾಗ ಆ ಪದದ ಅರ್ಥ ಹಾಗೂ ಕ್ರಿಯಾ ಸಾಧ್ಯತೆಗಳು ಭಿನ್ನವಾಗಿವೆ. ಸ್ತ್ರೀಯನ್ನು ಕುರಿತ ಗ್ರಹಿಕೆ, ವಿವರಣೆ, ವಿಶ್ಲೇಷಣೆ ಮೌಲ್ಯೀಕರಣ ಪ್ರಯತ್ನಕ್ಕೆ ಸೂಕ್ತವಾದ ತಾತ್ವಿಕತೆಯನ್ನು ಕಟ್ಟಿಕೊಳ್ಳುವ ಪ್ರಕ್ರಿಯೆಯೇ ಸ್ತ್ರೀವಾದ, ಈ ನಿಟ್ಟಿನಲ್ಲಿ ಮಹಿಳೆಯ ಬಗೆಗಿನ ಪುರುಷ ನಿರ್ಮಿತ ಸಿದ್ಧ ತಾತ್ವಿಕ ಮಾದರಿಗಳನ್ನು ಎದುರಾಗಿ ಇಟ್ಟುಕೊಂಡೇ ಸ್ತ್ರೀವಾದ ವ್ಯವಹರಿಸುತ್ತದೆ. ಮಹಿಳೆಗೆ ಜ್ಞಾನದ ವಿಶಿಷ್ಟ ರೂಪವಾದ ಆತ್ಮವಿಲ್ಲದಿರುವುದರಿಂದ ಆಕೆಯ ಕೊಲೆ ಶಿಕ್ಷಾರ್ಹ ಅಪರಾಧವಾಗುವುದಿಲ್ಲವೆಂದು ಚೀನಾದ ಖ್ಯಾತ ಚಿಂತಕ ಕನ್‌ಫ್ಯೂಷಿಯಸ್ ನಂಬಿದ್ದ. ಹೆಣ್ಣೆಂದರೆ ಅಪರಿಪೂರ್ಣ ಗಂಡನೆಂಬುದು ಸೆಂಟ್ ಥಾಮಸ್‌ನ ಹೆಣ್ಣಿನ ಕುರಿತ ವ್ಯಾಖ್ಯೆ. ಸಹಜ ದೋಷಗಳೊಂದಿಗೆ ಕೆಲವು ಗುಣಗಲ ಕೊರತೆ ಇರುವುದರಿಂದ ಹೆಣ್ಣು ಹೆಣ್ಣಾಗಿದ್ದಾಳೆ ಎಂದು ಅರಿಸ್ಟಾಟಲ್ ಹೇಳುತ್ತಾನೆ. ಇಂತಹ ವಿಚಾರಗಳಿಗೆ ಸ್ತ್ರೀವಾದ ಕೇವಲ ಪ್ರತಿಕ್ರಿಯಿಸುವುದಿಲ್ಲ. ಬದಲಾಗಿ ಅರ್ಥಪೂರ್ಣ ಕ್ರಿಯೆಯಲ್ಲಿ ತೊಡಗುತ್ತಿದೆ. ಘನತೆಯುಳ್ಳ ಬದುಕುವ ಹಕ್ಕುಗಳಿಗಾಗಿ ಸಾಮೂಹಿಕ ಹೋರಾಟದಲಿ ತೊಡಗಬೇಕಾದ ಅನಿವಾರ್ಯತೆಯನ್ನು ಗುರುತಿಸಿಕೊಳ್ಳೂವುದೆ ಮಹಿಳೆಗೆ ಕ್ರಿಯಾಶೀಲತೆಯಾಗುತ್ತದೆ.

**ಸ್ತ್ರೀವಾದದ ತಾತ್ವಿಕತೆ**

ಸ್ತ್ರೀವಾದವು ಮಹಿಳೆಯ ಸಬಲೀಕರಣ, ಬಿಡುಗಡೆ, ಸಮಾನತೆ, ದಬ್ಬಾಳೀಕೆ ಹಾಗೂ ತಾರತಮ್ಯತೆಯಿಂದ ಮುಕ್ತಿ ಮುಂತಾವನ್ನು ಸ್ಪಷ್ಟ ತಾತ್ವಿಕತೆಯ ಆಧಾರದ ಮೇಲೆ ವ್ಯಾಖ್ಯಾನಿಸುತ್ತದೆ. ಲಿಂಗ್ಭಿಧಾರಿತ ಸಂಬಂಧಗಳ ಕುರಿತು ಅನೇಕ ಮೂಲಭೂತ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಾ ಉತ್ತರಿಸಿಕೊಳುವ ಬೇರೆ ಬೇರೆ ರಾಷ್ಟ್ರೀಯ, ಪ್ರಾದೇಶಿಕ, ಜನಾಂಗಿಕ, ಸಾಂಸ್ಕೃತಿಕ ಭಿನ್ನತೆಗನುಸಾರವಾಗಿ ರೂಪುಗೊಂಡ ಪ್ರಶ್ನೆ, ಉತ್ತರಗಳು ಸ್ತ್ರೀವಾದದ ಬಹುರೂಪಕ್ಕೆ ಕಾರಣವಾಗಿವೆ. ಈ ವೈವಿಧ್ಯವೇ ಸ್ತ್ರೀವಾದದ ವ್ಯಾಪಕತೆಗೆ ಕಾರಣ. ಸ್ತ್ರೀವಾದದ ಈ ನಮ್ಯತೆಯ ಕಾರಣದಿಂದಲೇ ಮನಃಶಾಸ್ತ್ರ, ಭಾಷಾಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಇತಿಹಾಸ ಮುಂತಾದವುಗಳ ಸ್ತ್ರೀ ದೃಷ್ಟಿಕೋನದ ಅಗತ್ಯತೆಯನ್ನು ಮನಗಾಣುತ್ತಿವೆ. ಹಾಗೆಯೇ ಈ ಜ್ಞಾನಶಾಖೆಗಳ ಜ್ಞಾನವನ್ನು ತನಗೆ ಸರಿಹೊಂದುವ ರೀತಿಯಲ್ಲಿ ತಾತ್ವಿಕ ಚಿಂತನಾಕ್ರಮವನ್ನು ರೂಪಿಸಿಕೊಳ್ಳಲು ಸ್ತ್ರೀವಾದಗಳು ಬಳಸಿಕೊಳುತ್ತಿದೆ. ಜ್ಞಾನ ಜಗತ್ತಿನ ಕೊಳುಕೊಡುಗೆಯ ಸಾಕಷ್ಟು ಅವಕಾಶ ಒದಗಿಸಿರುವುದು ಸ್ತ್ರೀವಾದದ ವ್ಯಾಪಕತೆಯ ಪ್ರಯೋಜನ. ಹೀಗಾಗಿ ಜಾಗತಿಕ ನೆಲೆಯ ಜ್ಞಾನ ಶಾಖೆಯಾಗಿ ಸ್ತ್ರೀವಾದ ಈ ಹೊತ್ತು ತನ್ನ ಕಾರ್ಯ ನಿರ್ವಹಿಸುತ್ತಿದೆ.

ಮಹಿಳೆಯರನ್ನು ಸಂಸ್ಕೃತಿಯ ಪ್ರತಿನಿಧಿ, ರಕ್ಷಣೆ, ಪೋಷಣೆ ಹಾಗೂ ವಾಹಕಿ ಎಂದು ಮುಖ್ಯವಾಗಿ ಗುರುತಿಸಲಾಗಿದೆ. ಆದರೆ ಈ ಗುರುತಿಸುವಿಕೆ ಮಹಿಳೆಯ ಸಿದ್ಧ ಸ್ಥಿತಿಯಾಗಿರದೆ ಪುರುಷಾಧಿಕಾರದ ಆರೋಪವಾಗಿದೆ ಎಂಬುದನ್ನು ಮಾನವ ಶಾಸ್ತ್ರ ಅಧ್ಯಯನದ ಮೂಲಕ ಸ್ತ್ರೀವಾದಗಳು ಕಂಡುಕೊಂಡರು. ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯಿಂದ ಪಿತೃಪ್ರಧಾನ್ಯತೆಗೆ ಹೊರಳಿಕೊಳ್ಳುವ, ಸಂಸ್ಸೃತಿಯ ಸಂಘಟನೆ ಕ್ರಮವನ್ನು ಸ್ತ್ರೀವಾದಿಗಳು ಹೊಸ ಉಚ್ಚರದಲ್ಲಿ ಗ್ರಹಿಸಿದರು. ಲಿಂಗ ವ್ಯವಸ್ಥೆಯ ತಾರತಮ್ಯವು ಪ್ರಕಟಗೊಳ್ಳುವ ಸಮಕಾಲೀನ ಸಂದರ್ಭಗಳನ್ನು ಸ್ತ್ರೀವಾದಿಗಳು ಮಾನವ ಶಾಸ್ತ್ರೀಯ ಚಳುವಳಿಗಳ ಹಿನ್ನೆಲೆಯಲ್ಲಿ ವಿಶೇಷಿಸಲು ಯತ್ನಿಸಿದರು. ಖ್ಯಾತ ಮಾನವಶಾಸ್ತ್ರಜ್ಞ ತಿಮಸ್ಟ್ರ್‌ಸ್‌ನು ಸಂಸ್ಕೃತಿ ಮತ್ತು ಪ್ರಕೃತಿ ನಡುವಿನ ಭಿನ್ನತೆಯ ನೆಲೆಯಿಂದ ಬಂಧುತ್ವದ ಪರಿಕಲ್ಪನೆಯನ್ನು ಪ್ರತಿಪಾದಿಸಿದ್ದು ಪ್ರಾಕೃತಿಕ ರೂಪದ ಸ್ತ್ರೀಪುರುಷ ಲೈಂಗಿಕತೆಯನ್ನು

ವೈವಾಹಿಕ ವಿಧಿ–ನಿಷೇಧಗಳ ರೂಪಣೆಯ ಮೂಲಕ ಸಂಸ್ಕೃತಿಯಾಗಿ ಪರಿವರ್ತಿಸಲಾಯಿತು ಎನ್ನುವುದೌ ಆತನ ವಾದ. ವೈವಾಹಿಕ ಸಂಬಂಧಗಳ ಮೂಲಕ ಸಿದ್ಧವಾಗುವ ಕುಟುಂಬ, ಖಾಸಗಿ ಆಸ್ತಿ ನಿರ್ವಚಿತ ಲಕ್ಷಣಗಳು ಯಥಾರೂಪದಲ್ಲಿ ಉಳಿಯಬೇಕೆಂಬ ಒತ್ತಾಯವಿರುತ್ತದೆ. ಈ ಒತ್ತಾಯಗಳು ಪುರುಷ ಹಿತಾಸಕ್ತಿಗನುಗುಣಾವಾಗಿದೆ. ಸ್ತ್ರೀ ಪುರುಷ ಭಿನ್ನತೆಯನ್ನು ವಿರೋಧವಾಗಿಸಿ, ಶ್ರೇಣಿಕರನವನ್ನು ಕಲ್ಪಿಸುವ ಕ್ರಮವನ್ನು ಸ್ತ್ರೀ ಶೋಷಣೆಯ ಚರಿತ್ರೆಯಾಗಿ ಸ್ತ್ರೀವಾದಿಗಳು ಅರ್ಥೈಸಿಕೊಂಡವು. ಈ ತಿಳುವಳಿಕೆಗಳು ತೀವ್ರಗಾಮಿ ಸ್ತ್ರೀವಾದವಾಗಿಯೂ ಸಾಂಸ್ಕೃತಿಕ ಸ್ತ್ರೀವಾದವಾಗಿಯೂ ಪ್ರಕಟಗೊಂಡವು.

## ಸ್ತ್ರೀವಾದದ ಬೆಳವಣಿಗೆ

ಚರಿತ್ರೆ ಅಂದರೆ ಮನುಷ್ಯ ಸಾಧನೆಗಲ ಅಂದರೆ ಪಟ್ಟಿಗಳ ಚರಿತ್ರೆಯೇ ಆಗಿದೆ. ಸಾಧನೆಗಳ ಹೊರಮೈ ಇರುವ ಇತಿಹಾಸದ ಅಂಗಿಚುನ್ನು ತಿರುವು ಮುರುವು ಮಾಡಿದಾಗ ವಾಸ್ತವತೆಯ ಚಿತ್ರಣ ದಕ್ಕಿತು. ಅಸಂಖ್ಯಾತ ಸ್ತ್ರೀ ಪುರುಷರ ಶೋಷಣೆಯ ಕಥನವೇ ಆಗ ಚರಿತ್ರೆ ಎನಿಸಿಕೊಳ್ಳುತ್ತದೆ. ಪ್ರಪಂಚದಾದ್ಯಂತ ಶೋಷಣೆಯು ಕಾಲ ದೇಶ ಸಮಾಜಬದ್ಧವಾಗಿ ತನ್ನದೇ ಸ್ವರೂಪವನ್ನು ಹೊಂದಿದೆ. ಅದಕ್ಕೆ ಹೊಂದಿಕೊಂಡಂತೆ ಚರಿತ್ರೆ ಕಂಡ ಎಲ್ಲಾ ರೀತಿಯ ಶೋಷಣೆಗಳು ಮಹಿಳೆಯಲ್ಲಿ ತನ್ನ ಪರಾಕಾಷ್ಠೆಯೊಂದಿಗೆ ಪ್ರಕಟಗೊಳ್ಳುತ್ತವೆ. ಮಹಿಳೆಯ ಶೋಷಣೆಯ ಐತಿಹಾಸಿಕತೆಗನುಗುಣವಾಗಿ ಸ್ತ್ರೀವಾದವು ಕಾಲದಿಂದ ಕಾಲಕ್ಕೆ ಬದಲಾವಣೆ ಹೊಂದುತ್ತಾ ಬಂದಿದೆ. ಎಲ್ಲಿ ಸಾಮಾಜಿಕ ಬದಲಾವಣೆಗಳು ತವರಿತಗತಿಯಲ್ಲಿ ಆಗುತ್ತ ಬಂದವೋ ಸ್ತ್ರೀವಾದದ ಮಜಲುಗಳನ್ನು ಅಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಮಹಿಳಾ ಶೋಷಣೆಯ ಸ್ವರೂಪವನ್ನು ತಾತ್ವಿಕ ಶಿಸ್ತಿನ ಅಧ್ಯಯನ ಕ್ರಮವನ್ನಾಗಿ ರೂಪಿಸುವಲ್ಲಿ ಪಾಶ್ಚಾತ್ಯ ಸ್ತ್ರೀವಾದಿಗಳ ಕೊಡುಗೆ ಗಮನಾರ್ಹ. ಈ ಅಧ್ಯಯನ ಕ್ರಮದ ಪ್ರಭಾವ ಮತ್ತು ಪ್ರೇರಣೆಗಳನ್ನು ಜಗತ್ತಿನ ಉಳಿದೆಡೆ ಸಾಕಷ್ಟು ಪರಿಣಾಮಕಾರಿಯಾಗಿಯೇ ಬಳಸಿಕೊಳ್ಳಲಾಗಿದೆ. ಹೊಸತೂ ವಿಶಿಷ್ಟವೂ ಆದ ಸ್ವರೂಪವನ್ನು ಸ್ತ್ರೀವಾದ ಪಡೆದುಕೊಳ್ಳುತ್ತಿದೆ. ಸ್ತ್ರೀವಾದಿ ಅಧ್ಯಯನವು ವ್ಯವಸ್ಥಿತ ಧರ್ಮಕ್ಕೆ, ರಾಜಕೀಯ ಸಿದ್ಧಾಂತಗಳಿಗೆ ಕಲಾ ಸಿದ್ಧಾಂತಗಳಿಗೆ ವೈಜ್ಞಾನಿಕ ಸಿದ್ಧಾಂತಗಳಿಗೆ ಪ್ರಬುದ್ಧ ಪ್ರತಿಕ್ರಿಯೆಯನ್ನು ತೋರಿದೆ. ಈ ಸಿದ್ಧಾಂತದ ಪುನರ್‌ವಿಮರ್ಶೆಯ ಕಾರ್ಯವನ್ನು ಸ್ತ್ರೀವಾದ

ದೊಡ್ಡ ರೀತಿಯಲ್ಲಿ ಕೈಗೆತ್ತಿಕೊಂಡಿವೆ. ಈ ನಿಟ್ಟಿನಲ್ಲಿ ಅದು ನಮ್ಮ ಸಂಸ್ಕೃತಿ, ಸಮಾಜ, ಚರಿತ್ರೆಗಳನ್ನು, ಆರೋಗ್ಯಪೂರ್ಣವಾಗಿ ರೂಪಿಸಿವ ಇತ್ಯಾತ್ಮಕ ಶಕ್ತಿಯಾಗಿ ಕೆಲಸ ಮಾಡುತ್ತಿದೆ. ಮಾನವಜ್ಞಾನದ ಎಲ್ಲೆಗಳನ್ನು ವಿಸ್ತರಿಸುವ ಹೊಣೆಗಾರಿಕೆ ಹೊತ್ತಿ ಸ್ತ್ರೀವಾದಿ ಚಿಂತನೆಯ ಬೆಳವಣಿಗೆಗೆ ಸೀಮಿತತೆಯನ್ನು ಕಟ್ಟಿಸಲು ಸಾಧ್ಯವಿಲ್ಲ. ಚಾರಿತ್ರಿಕ ವೈವಿಧ್ಯಗಲ ಹಿನ್ನೆಲೆಗಳಲ್ಲಿ ವಿವೇಚನೆ ಮಾಡುತ್ತಲೇ ಬೇರೆ ಬೇರೆ ಸ್ವರೂಪವನ್ನು ಹೊಂದುತ್ತಾ ಬಂದಿದೆ. ಸ್ತ್ರೀವಾದಿ ಚಳುವಳಿಗಳು ಸ್ತ್ರೀವಾದದ ಬೆಳವಣಿಗೆಯ ಗತಿ ಹಾಗೂ ಸ್ವರೂಪವನ್ನು ನಿರ್ಧರಿಸಿವೆ.

ಸ್ತ್ರೀವಾದದ ಬೆಳವಣಿಗೆಯನ್ನು ನಿರ್ಧರಿಸುವ ಸ್ತ್ರೀವಾದಿ ಚಳುವಳಿಗಳ ತಾತ್ವಿಕತೆಯ ಕಾಲ, ದೇಶ, ಸಮಾಜಬದ್ಧವಾಗಿರುವುದನ್ನು ಗುರುತಿಸಬಹುದು. ಸ್ತ್ರೀವಾದಿ ಚಳುವಳಿಗಳ ತಾತ್ವಿಕತೆಯ ಆಧಾರದ ಮೇಲೆ ವಿವಿಧ ಸ್ತ್ರೀವಾದದ ಪ್ರಸ್ಥಾನಗಳು ರೂಪಗೊಂಡವು.

ಮೇರಿವುಲ್‌ಸ್ಟೆನ್ ಕ್ರಾಪ್ಟ್‌ಳಂತಹ ಅನೇಕ ಸ್ತ್ರೀವಾದಿಗಳು ಅನೇಕ ರೀತಿಯ ಮಹಿಳಾ ಪ್ರಶ್ನೆಗಳನ್ನು ಒತ್ತಿದ್ದರು. ಮಹಿಳೆಯರ ಬಗೆಗಿನ ತಪ್ಪು ನಂಬಿಕೆಗಳನ್ನು ಅವರು ಪ್ರಶ್ನಿಸಿದರು. ಮಹಿಳೆಯರ ವಿಷಯದಲ್ಲಿ ತಾರತಮ್ಯ ನೀತಿಯಿಂದ ಕೂಡಿದ ನ್ಯಾಯಾಯುತವಲ್ಲದ ಅನೇಕ ಸಾಮಾಜಿಕ ರೂಢಿಗಳನ್ನು ಅವರು ಒಪ್ಪಲು ಸಿದ್ಧರಿರಲಿಲ್ಲ. ಮಹಿಳೆಯರ ಹಕ್ಕು ಬಾದ್ಯತೆಗಳಿಗೆ ಸಂಬಂಧಿಸಿದಂತೆ ಅನೇಕ ಪ್ರಶ್ನೆಗಳನ್ನು ಅವರು ಎತ್ತಿದ್ದರು. ಮಹಿಳೆ ಪುರುಷರ ನಡುವಿನ ಸಂಬಂಧದ ಶೋಧವನ್ನು ಅವರು ಮಾಡ ಬಯಸಿದ್ದರು. ಮಹಿಳೆಯ ಸಾಮರ್ಥ್ಯ ಸಾಧ್ಯಗೆಗಳ ಕುರುತು ವಿವರಿಸಿದ್ದರು. ಈ ಪ್ರಯತ್ನಗಳ ಫಲವಾಗಿ ೧೮ನೇ ಶತಮಾನದ ಹೊತ್ತಿಗೆ ಸ್ತ್ರೀವಾದಿ ಆಲೋಚನೆ ಪರಂಪರೆ ನಿರ್ದಿಷ್ಟ ಆಕಾರ ಪಡೆಯುತ್ತಾ ಹುಟ್ಟಿಕೊಂಡಿತು. ಮಹಿಳೆಯ ಬದುಕನ್ನು ಭಿನ್ನ ರೀತಿಯಲ್ಲು ಗ್ರಹಿಸುವುದಕ್ಕೆ ಯೋಗ್ಯವಾದ ಸಾಮಾಜಿಕ ಸಂದರ್ಭ ಇದ್ದಾಗ ಮಾತ್ರ ಸ್ತ್ರೀವಾದಿ ಚಿಂತನಗಳು ಚಿಗುರಲು ಸಾದ್ಯ. ಅಂತೆಯೇ ಭಿನ್ನ ರೀತಿಯ ಸಾಮಾಜಿಕ ಸಂದಂರ್ಭಗಳಲ್ಲಿ ಮಹಿಳೆಯನ್ನು ಗುರುತುಸುವುದು ಅಷ್ಟೇ ಅಗತ್ಯ. ಮಹಿಳೆಯು ಅನ್ಯಾಯಯುತ ಹೆಚ್ಚಾಗುವಿಕೆಗೆ ಗುರಿಯಾಗಿರುವುದನ್ನು ಬೌತ್ವಿಕವಾಗಿ ಅರ್ಥೈಸಲು ಅವಕಾಶ ನೀಡುವ ಸಂದರ್ಭ ಇದ್ದಾಗ ಮಾತ್ರ ಸ್ತ್ರೀವಾದಿ ಚಿಂತನೆಗಳು ರೂಪುಗೊಳ್ಳುತ್ತವೆ.

## ಉದಾರವಾದಿ ಸ್ತ್ರೀವಾದ

ವಿಜ್ಞಾನವು ಅಧಿಕಾರದ ಎಲ್ಲೆಗಳನ್ನು ವಿಸ್ತರಿಸಿರುವ ಕಲ್ಪನೆಯು ಪಾಶ್ಚಾತ್ಯ ರಾಷ್ಟ್ರಗಳ ವಸಾಹತೀಕರಣ ಪ್ರಕ್ರಿಯೆಯಲ್ಲಿ ಸ್ಪಷ್ಟವಾಗಿ ಆಗುತ್ತದೆ. ವಸಾಹತುಗಳಿಂದ ಅವ್ಯಾಹತವಾಗಿ ಸಾಗಿಬರುತ್ತಿದ್ದ ಸಂಪತ್ತಿನಿಂದಾಗಿ ಐರೋಪ್ಯ ದೇಶಗಳಲ್ಲಿ ಸಾಮಾಜಿಕ ಬದಲಾವಣೆ ಉಂಟಾಯಿತು. ಮೊದಲಿದ್ದ ಜಮೀನುದಾರಿ ಪದ್ಧತಿ, ಅರಸೊತ್ತಿಗೆಯ ಬೆಂಬಲದ ಧಾರ್ಮಿಕ ವ್ಯವಸ್ಥೆಗಳಲ್ಲಿ ದೊಡ್ಡ ಬಿರುಕುಂಟಾಯಿತು. ನವ ಬಂಡವಾಳಶಾಹಿ ವರ್ಗವು ರೂಪುಗೊಳ್ಳುತ್ತಿದ್ದ ಹಿನ್ನೆಲೆಯಲ್ಲಿ, ಕ್ಯಾಥೋಲಿಕ್ ಕ್ರಿಶ್ಚಿಯನ್ ಧರ್ಮದ ಪ್ರಾಧಾನ್ಯವಾಗಲೀ, ಭೂಮಾಲಿಕರ ದೌರ್ಜನ್ಯವಾಗಲೀ ಮೊದಲಿನಂತೆ ಮುಂದುವರೆಯುವುದು ಅಸಾಧ್ಯವಾಯಿತು. ಪ್ರಾಟೆಸ್ಟೆಂಟ್ ಪಂಥದ ಸ್ಥಾಪನೆ ಹಾಗೂ ವೈಜ್ಞಾನಿಕ ಸಿದ್ಧಾಂತಗಳ ಪ್ರತಿಪಾದನೆಯು ಸಾಂಪ್ರದಾಯಿಕ ಲೋಕ ಗ್ರಹಿಕೆಯನ್ನು ಬದಲಿಸಿಬಿಟ್ಟಿತು. ಇದೊಂದು ವೈಚಾರಿಕ ಕ್ರಾಂತಿ. ಇಂಥ ಸಂದರ್ಭದಲ್ಲಿ ಉದಾರವಾದಿ ಮಾನವತಾವಾದವು ಮುಂದೆ ಬಂತು. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಬೌದ್ಧಿಕ ಸಾಮರ್ಥ್ಯ ಹಾಗೂ ದುಡಿಮೆಗಳೇ ದೈವವಾದವು. ಅದಕ್ಕೆ ಅನುಗುಣವಾಗಿ ಹಕ್ಕು ಬಾಧ್ಯತೆಯ ಪ್ರಶ್ನೆಗಳೂ ಎದ್ದವು. ಜನ್ಮ ಸಿದ್ಧ ಅಧಿಕಾರಕ್ಕಿಂತ ಶಾರೀರಿಕವಾಗಿಯೂ ಬೌದ್ಧಿಕವಾಗಿಯೂ ಸಮರ್ಥನಿದ್ದ ವ್ಯಕ್ತಿಗೆ ಮಾತ್ರ ಹಕ್ಕುಗಳೆಂಬ 'ಅಧಿಕಾರ'ದ ಹೊಸ ನಿರ್ವಚನ ರೂಪುಗೊಂಡಿತು. ಈ ಜಗತ್ತನ್ನು, ಅದರ ಸಾಮಾಜಿಕ ಸಾಂಸ್ಕೃತಿಕ ಸಂರಚನೆಯನ್ನು ಬುದ್ಧಿಪೂರ್ವಕವಾಗಿ, ತಾರ್ಕಿಕವಾಗಿ ಕಟ್ಟಬಲ್ಲೆವೆಂಬ ಹುಮ್ಮಸ್ಸಿನ ಕಾಲವದು. ಧಾರ್ಮಿಕಯುಗದ ಪಾಶ್ಚಾತ್ಯ ತಾತ್ವಿಕತೆಗಿಂತ ವಿಜ್ಞಾನಪ್ರಚಾರ ಯುಗದ ತಾತ್ವಿಕತೆಯು ವಿಕಾಸವಾದವನ್ನು, ಬದಲಾವಣೆಯನ್ನುಳ್ಳ ಸಾಮಾಜಿಕ ಸಂರಚನೆಗಳನ್ನು ಅಪೇಕ್ಷಿಸುವಂತಾಯ್ತು.

ಸಾಮಾಜಿಕ ಅಸಮಾನತೆಗಳು ದೈವ ನಿಯಾಮಕವೆಂಬ ನಂಬಿಕೆಯನ್ನು ಧರ್ಮದ ವ್ಯವಸ್ಥೆ ಬಲವಾಗಿಯೇ ಬಿತ್ತಿತ್ತು. ವೈಜ್ಞಾನಿಕ ಶೋಧಗಳ ಫಲವಾಗಿ ಈ ನಂಬಿಕೆಯ ಬುಡವೇ ಕುಸಿದಂತಾಯ್ತು. ಆಗ ಮಾಡಿದ ಹೊಸ ಆಲೋಚನೆಗಳು ಸ್ಥೂಲವಾಗಿ ಇಂತಿದೆ : ಮನುಷ್ಯನ ಹುಟ್ಟು ನಿಸರ್ಗ ಸಹಜ ಕ್ರಿಯೆ. ಪರಿಪೂರ್ಣ ಸ್ವಾತಂತ್ರ್ಯದೊಡನೆ ಈ ಹುಟ್ಟು ಇದೆ. ನಿಸರ್ಗದಲ್ಲಿ ಎಲ್ಲ ಜೀವಿ ವಸ್ತುಗಳಿಗೂ ಒಂದು ಕಾರ್ಯ-ಕಾರಣ ಸಂಬಂಧಿತ ಅಸ್ತಿತ್ವವಿದೆ. ಮನುಷ್ಯರೊಳಗೇ ಅಸಮಾನತೆಗಳನ್ನು ಕಲ್ಪಿಸುವುದು ನಿಸರ್ಗ ವಿರುದ್ಧ. ಅಂಥ ಪ್ರಯತ್ನವೇನಿದ್ದರೂ ಸ್ವಹಿತಾಸಕ್ತಿಯ ಪೂರೈಕೆಯ ಉದ್ದೇಶವುಳ್ಳದ್ದು. ಪ್ರಕೃತಿಯಲ್ಲಿ ವೈವಿಧ್ಯವಿದೆ. ಹೆಣ್ಣು ಗಂಡುಗಳೆಂಬ ಜೀವ

ಬೇಧವುಳ್ಳ ಈ ಪ್ರಪಂಚದಲ್ಲಿ ಎಲ್ಲರಿಗೂ ಸಮಾನ ಬದುಕುವ ಹಕ್ಕುಗಳಿವೆ. ಸ್ವಂತ ಬದುಕನ್ನು ತಾನೇ ರೂಪಿಸಿಕೊಳ್ಳುವ ವ್ಯಕ್ತಿ ಮಾತ್ರ ಆಂತರಿಕವಾಗಿ ಹಾಗೂ ಬಹಿರಂಗದ ವ್ಯವಹಾರಗಳಲ್ಲಿ ತನ್ನತನ ಉಳಿಸಿಕೊಂಡೂ ಬೆಳೆಯಬಲ್ಲ. ಹೀಗೆ ಈ ಆಲೋಚನೆಗಳು ದಮನಕ್ಕೊಳಗಾದ ಜನರಿಗೆ ಚಳುವಳಿಯನ್ನು ಹುಟ್ಟುಹಾಕಲು ಅಗತ್ಯವಾದ ಸಾಂದ್ರೀಕರಣವನ್ನು ಹೊಂದಿದ್ದವು. ಸಾಮಾಜಿಕ ನ್ಯಾಯದ ಬಗೆಗೆ ವಾಸ್ತವಿಕ ನೆಲೆಯ ಚಿಂತನೆಗಳು ಮೂಡಿ ಬಂದವು. ಮೇಲು ಕೀಳೆಂಬ ಶ್ರೇಣಿಬದ್ಧ ವ್ಯವಸ್ಥೆಯ ವಿರುದ್ಧ ಸಾಮೂಹಿಕ ಹೋರಾಟಕ್ಕೆ ಯುರೋಪಿನ ಜನ ಸಜ್ಜಾದರು. ಹೊಸದಾಗಿ ನಿರ್ಮಿತವಾದ ಕಾರ್ಮಿಕ ವರ್ಗವು ದೊಡ್ಡ ಬಂಡವಾಳಿಗರ ವಿರುದ್ಧ ಹೋರಾಟ ಪ್ರಾರಂಭಿಸಿತು. ಆದರೆ ಈ ಹೋರಾಟದ ಮುಂಚೂಣಿಯಲ್ಲಿದ್ದದ್ದು ಯಥಾಪ್ರಕಾರ ಪುರುಷರೇ. ತಮ್ಮ ಆಲೋಚನೆಗಳು ಉದಾತ್ತ ತತ್ವವನ್ನು ರೂಪಿಸುತ್ತವೆ ಎಂಬ ಅಹಮಿಕೆ ಯೊಳಗೆ ಈ ನಾಯಕರು ಉಳಿದಾಗ, ಅದಕ್ಕೆ ಪ್ರತಿಭಟನೆಯಾಗಿ ಮಹಿಳೆಯರ ದನಿ ಕೇಳಿ ಬಂತು. ವ್ಯಕ್ತಿ ಸಮಾನತೆಯ ಘೋಷಣೆಯ ಹಿಂದಿರುವ ಟೊಳ್ಳುತನವನ್ನು ಚಳುವಳಿಯಲ್ಲಿ ಪಾಲ್ಗೊಂಡಿದ್ದ ಮಹಿಳೆಯರು ಬಯಲಿಗೆಳೆದರು. ಸಮೂಹ ಹೋರಾಟದಲ್ಲಿಯೂ ಸ್ತ್ರೀವರ್ಗ ತನ್ನನ್ನು ಪ್ರತ್ಯೇಕವಾಗಿ ಗುರುತಿಸಿಕೊಂಡದ್ದು, ಸ್ತ್ರೀವಾದಿ ಚಳುವಳಿಯ ಇತಿಹಾಸದ ದೃಷ್ಟಿಯಿಂದ ಮುಖ್ಯವಾದುದು. ತೀವ್ರ ಸಾಮಾಜಿಕ ಸ್ಥಿತ್ಯಂತರಗಳ ಹೊತ್ತಿನಲ್ಲಿ ಸ್ತ್ರೀ ಹಾಗೂ ಪುರುಷರು ಪರಸ್ಪರ ನಿಕಟವಾಗಿ ಮುಖಾಮುಖಿಯಾಗುತ್ತಾರೆ. ಆನ್ ಓಕ್ಲೆ ಹೇಳುವಂತೆ, ಇಂಥ ಸಮಯದಲ್ಲಿ ಮಹಿಳೆಯರು ಹೆಚ್ಚು ಜಾಗೃತರಾಗಿರುತ್ತಾರೆ. ಕುಟುಂಬದಲ್ಲಿ ಸಮಾನ ಸಂಗಾತಿಗಳಾಗದ ಸ್ತ್ರೀಪುರುಷರು ಹೊರಗಿನ ಕ್ಷೇತ್ರದಲ್ಲೂ ಸಮಾನರಾಗರೆಂಬುದು ಮಹಿಳೆಯರಿಗೆ ಮನವರಿಕೆಯಾಗ ತೊಡಗಿತು. ಕೈಗಾರಿಕಾ ಕ್ರಾಂತಿಯಿಂದಾಗಿ, ಸ್ಥಾಪಿತವಾದ ಕೈಗಾರಿಕೆಗಳಲ್ಲಿ ದುಡಿಮೆಗಾರ ಗಂಡಸರ ಕೊರತೆ ಬಂದ ಕಾರಣ ಮಹಿಳೆಯರಿಗೂ ದುಡಿಯಲು ಅವಕಾಶ ದೊರಕಿತು. ವಸಾಹತುಗಳನ್ನು ಪ್ರಪಂಚದಾದ್ಯಂತ ಹೊಂದಿದ್ದ ದೇಶಕ್ಕೆ ವ್ಯಾಪಕ ಮಾರುಕಟ್ಟೆ ಇದ್ದು, ಯಂತ್ರಗಳಿದ್ದೂ ದುಡಿಮೆಗಾರರ ಕೊರತೆ ಉಂಟಾದದ್ದು ಸಹಜವೇ. ಹೊಲದ ಹಾಗೂ ಮನೆಯ ದುಡಿಮೆಯಿಂದ ಕೈಗಾರಿಕೆಗಳಲ್ಲಿನ ದುಡಿಮೆಗೆ ಬಂದಾಗ ಮಹಿಳೆಯರಿಗೆ ಒದಗಿಬಂದ ಆರ್ಥಿಕ ಸ್ವಾತಂತ್ರ್ಯವು ಸ್ವಲ್ಪ ಮಟ್ಟಿನ ಆಲೋಚನಾ ಸ್ವಾತಂತ್ರ್ಯವನ್ನೂ ಕೊಟ್ಟಿತು. ಆದರೆ ಈ ಹೊಸ ದುಡಿಮೆಯ ಕ್ಷೇತ್ರದಲ್ಲಿ ಹಾಗೂ ಶಿಕ್ಷಣದ ಕ್ಷೇತ್ರದಲ್ಲಿ ಮಹಿಳೆ ಎರಡನೇ ದರ್ಜೆಯವಳಾಗಿ ಉಳಿದದ್ದು ಹೋರಾಟಕ್ಕೆ ಅಗತ್ಯವಾದ ಅತೃಪ್ತಿಯನ್ನು ಉಂಟುಮಾಡಿತು. ಮಹಿಳೆಯ ಹಕ್ಕು ಬಾಧ್ಯತೆಗಳ ಬಗೆಗೆ ದೊಡ್ಡ ರೀತಿಯಲ್ಲಿ ಚಿಂತನೆ ರೂಪುಗೊಳ್ಳತೊಡಗಿತು. ಹಕ್ಕು ಬಾಧ್ಯತೆಗಳ ಕುರಿತಾದ ಸಮಾವೇಶಗಳು, ಪ್ರತಿಭಟನಾ ಮೆರವಣಿಗೆಗಳು ನಡೆದವು. ಈ ಚಳುವಳಿಯ ಬೇಡಿಕೆಗಳನ್ನು ಒಟ್ಟಾರೆಯಾಗಿ ಹೀಗೆ ಸಂಗ್ರಹಿಸಬಹುದು.

ಸ್ತ್ರೀಯರ ಸಹಭಾಗಿತ್ವವು ಬಂಡವಾಳಶಾಹಿ ವಿರೋಧಿ ಚಳುವಳಿಗಳಲ್ಲಿ ಕೇವಲ ವೈಚಾರಿಕವಾಗಿತ್ತೇ ಹೊರತು ಸ್ತ್ರೀಯರಿಗೇ ವಿಶಿಷ್ಟವಾದ ಸಮಸ್ಯೆಗಳು ಅಲ್ಲಿ ಚರ್ಚಿತವಾಗದೆ ನಿರ್ಲಕ್ಷಿಸಲ್ಪಟ್ಟವು. ಶಿಕ್ಷಣದ ಹಕ್ಕು, ಸಂಪತ್ತಿನ ವಾರಸುದಾರಿಕೆಯ ಹಕ್ಕು ಸಂತತಿ ನಿಯಂತ್ರಣದ

ಹಕ್ಕು, ಮತದಾನದ ಹಕ್ಕುಗಳು ಆ ಹೊತ್ತಿನ ಪ್ರಮುಖ ಬೇಡಿಕೆಗಳಾದವು. ಅನೇಕ ಬರಹಗಾರ್ತಿಯರು ಸ್ತ್ರೀವಿಮೋಚನಾ ಕಾರ್ಯವು ಒಂದು ಚಳುವಳಿಯಾಗಿ ರೂಪುಗೊಳ್ಳಲು ಅಗತ್ಯವಾದ ವೈಚಾರಿಕ ಆಕೃತಿಗಳನ್ನು ತಮ್ಮ ಬರಹಗಳಲ್ಲಿ ಪ್ರಭಾವಶಾಲಿಯಾಗಿ ಒದಗಿಸಿದರು.

೧೭೯೧ ರಲ್ಲಿ ರಚಿತವಾದ ಮೇರಿ ವುಲ್‌ಸ್ಟ್‌ನ್ ಕ್ರಾಫ್ಟ್‌ಳ ಶಕ್ತಿಶಾಲಿ ಕೃತಿ 'A Vindication of the rights of women' ಮಹಿಳಾ ಪ್ರಶ್ನೆಯನ್ನು ಗಂಭೀರವಾಗಿ ಚರ್ಚಿಸುತ್ತದೆ. ಮಹಿಳೆಯರ ಹಕ್ಕು ಬಾಧ್ಯತೆಗಳನ್ನು ಮಹಿಳೆಯರೇ ಗುರುತಿಸಿಕೊಳ್ಳುವ, ಆ ಮೂಲಕ ಒತ್ತಾಯದ ಬೇಡಿಕೆಗಳನ್ನಿಡುವ ಸಾಧ್ಯತೆಯನ್ನು ಈ ಕ್ರಾಂತಿ ಹೋರಾಟಗಾರ್ತಿಯರಿಗೆ ತೋರಿಸಿಕೊಟ್ಟಿತು. ತನ್ನ ಹಕ್ಕುಗಳ ಬಗ್ಗೆ ಜಾಗೃತನಾಗಿರುವ ಗಂಡಸು ಅದನ್ನು ಕಾಪಾಡಿಕೊಳ್ಳುವ ಹುನ್ನಾರಿನಲ್ಲಿ ಮಹಿಳೆಯ ಸ್ಥಾನಮಾನಗಳನ್ನು ಯಥಾಸ್ಥಿತಿಯಲ್ಲಿ ಇರಿಸುವುದರ ಬಗ್ಗೆ ಹೇಗೆ ಆಸಕ್ತನೆಂಬುದನ್ನು ಸೋದಾಹರಣವಾಗಿ ಆಕೆ ಈ ಕೃತಿಯಲ್ಲಿ ನಿರೂಪಿಸುತ್ತಾಳೆ.

ಪುನರುತ್ಥಾನ ಕಾಲದ ಅನಂತರ ಬಂದ ಪುರುಷ ಉದಾರವಾದಿ ಚಿಂತಕರ ವಾದದ ಮಿತಿಗಳನ್ನು ಮೇರಿ ವುಲ್‌ಸ್ಟ್‌ನ್ ಕ್ರಾಫ್ಟ್ ಸ್ಪಷ್ಟಪಡಿಸುತ್ತಾಳೆ. ಹಾಬ್ಸ್, ಲಾಕೆ ಮತ್ತು ರೂಸೋ ಅಧಿಕಾರ ಕೇಂದ್ರೀಕರಣದ ವಿರುದ್ಧ ಮಾತನಾಡಿದರು ನಿಜ. ಆದರೆ ಆದರ್ಶ ಪ್ರಜಾಸತ್ತಾತ್ಮಕ ರಾಜ್ಯದ ಕಲ್ಪನೆಯಲ್ಲಿ ಅತ್ಯಂತ ಪ್ರಗತಿ ವಿರೋಧಿ ಧೋರಣೆಗಳನ್ನು ಮಹಿಳೆಯ ವಿಷಯಕ್ಕೆ ಸಂಬಂಧಿಸಿದಂತೆ ಹುಟ್ಟು ಹಾಕಿದರು. ಕುಟುಂಬ ಸಂಸ್ಥೆಯ ಸಿದ್ಧ ಮಾದರಿಯೊಳಗೆ ಮಹಿಳೆಯಿಂದ ಪುರುಷನಿಗೆ ದೊರೆಯುವ ಸವಲತ್ತುಗಳನ್ನು ಬಿಟ್ಟುಕೊಡಲು ಈ ಚಿಂತಕರು ಸಿದ್ಧರಿರಲಿಲ್ಲ. ಅವರ ಚಿಂತನೆಯ ಧಾಟಿ ಇಂತಿದೆ. ಕುಟುಂಬವೆಂಬ ನೈಸರ್ಗಿಕ ಸಂಸ್ಥೆಯಲ್ಲಿ ಪತ್ನಿ ಹಾಗೂ ಮಕ್ಕಳ ಮೇಲೆ ಇರುವ ಗಂಡನ ಅಧಿಕಾರ ನೈಸರ್ಗಿಕವಾದುದು. ಹಾಗಾಗಿ ಅದು ಪ್ರಶ್ನಾತೀತ. ಗರ್ಭಧಾರಣೆಯ ನಿಮಿತ್ತ, ಪುರುಷನಂತೆ ಮೂಲಭೂತ ಅಧಿಕಾರ ಚಲಾಯಿಸಲು ದೈಹಿಕ ಅಡಚಣೆಯುಳ್ಳ ಮಹಿಳೆಗೆ ಸಾಧ್ಯವಾಗದು. ಸ್ತ್ರೀಯ ವಿದ್ಯಾಭ್ಯಾಸವು ಕೂಡ ಗಂಡನನ್ನು ಆದರಿಸಿ ಪ್ರೀತಿಸಲು, ಮಕ್ಕಳನ್ನು ಯೋಗ್ಯರನ್ನಾಗಿ ಬೆಳಸಲು ಅನುಕೂಲಕರವಾಗಿರುವ ಹಾಗೆ ಇರಬೇಕು.

ಹೀಗೆ ಸ್ವಾತಂತ್ರ್ಯ, ಸಮಾನತೆಯ ಕುರಿತ ಪುರುಷ ಪರಿಕಲ್ಪನೆಗಳು ಎಷ್ಟೇ ಮುಕ್ತವಿದ್ದರೂ ಮಹಿಳೆಯನ್ನೂ ಒಳಗೊಂಡ ಸಮಗ್ರ ಲೋಕದ ಚಿಂತನೆ ನಡೆಯಲಿಲ್ಲ. ಉದಾರವಾದಿ ಸ್ತ್ರೀವಾದವನ್ನು ರೂಪಿಸಿದ ಚಿಂತಕಿಯರು ಈ ಮಿತಿಯನ್ನು ದಾಟುವಲ್ಲಿ ನಡೆಸಿದ ಪ್ರಯತ್ನ ಗಮನಾರ್ಹವಾದುದು.

ಶತಮಾನಗಳುದ್ದಕ್ಕೂ ಸ್ತ್ರೀತ್ವವೆಂದರೆ ಭಾವುಕತೆ ಎಂತಲೂ ಅದರಿಂದ ರೂಪುಗೊಳ್ಳುವ ಕೆಲವು ಸಿದ್ಧ ಗುಣಗಳ ಮೊತ್ತವೆಂದೂ ಮಹಿಳೆಯನ್ನು ತಿಳಿಯಲಾಗಿದೆ. ಈ ಭಾವುಕತೆಯು ತನ್ನತನವನ್ನು ನೀಗಿಕೊಂಡ ಶೂನ್ಯವನ್ನು ಮಹಿಳೆಯಲ್ಲಿ ಸೃಷ್ಟಿಸುತ್ತದೆ. ಪುರುಷ ತನಗೆ ಬೇಕಾದ ಹಾಗೆ ಈ ಶೂನ್ಯವನ್ನು ತುಂಬಿಕೊಳ್ಳಬಲ್ಲ. ಹೀಗಾಗಿ ವುಲ್‌ಸ್ಟನ್‌ಕ್ರಾಫ್ಟ್ ಳು 'ವೈಚಾರಿಕತೆ' ಹಾಗು 'ಸ್ವಯಮಧಿಕಾರ'ಗಳೂ ಮಹಿಳೆಯ ಗುಣಗಳಾಗಬೇಕೆಂದು ಬಯಸಿದಳು. ಭಾವುಕತೆಯ

ದುರ್ಬಲ ಗೋಡೆಯನ್ನೊಡೆದು ವೈಚಾರಿಕವಾಗಿ ತನ್ನ ಬದುಕಿನ ಬಗೆಗೆ ಆಲೋಚಿಸಬಲ್ಲ ಸ್ತ್ರೀ ಮಾತ್ರ ಗುಲಾಮಗಿರಿಯಿಂದ ಮುಕ್ತಳಾಗಬಹುದೆಂದು ಆಕೆ ಭಾವಿಸಿದಳು. ತಮ್ಮದೇ ಆದ ವೈಚಾರಿಕ ನೆಲೆಯಲ್ಲಿ ಲೋಕವನ್ನು ಗ್ರಹಿಸುವ ಹಾಗೂ ತಮ್ಮ ಹಕ್ಕುಗಳನ್ನು ತಾವೇ ವ್ಯಾಖ್ಯಾನಿಸಿಕೊಳ್ಳುವ ಮೂಲಕ ಮಹಿಳೆಯರು ಸ್ವಾಯತ್ತತೆಯನ್ನು ಹೊಂದಬಹುದೆಂಬ ವಿಚಾರ ಆಕೆಯದು.

"ಗಂಡನನ್ನು ತನ್ನ ಸಹಭಾಗಿಯೆಂದು ಪ್ರೀತಿಸುತ್ತೇನೆ" ಎನ್ನುವ ಮೇರಿ, ಗಂಡಸಿನಂತೆ ಹೆಂಗಸು ಗಂಡಸಿನ ಮೇಲೆ ಅಧಿಕಾರ ಚಲಾಯಿಸುವುದನ್ನು ಒಪ್ಪುವುದಿಲ್ಲ. ಹಾಗೆಂದು, ಗಂಡಸಿನ ಅಧಿಕಾರದ ಭರ್ಜಿ ತಿವಿತವನ್ನು ಸಹಿಸುವುದಿಲ್ಲ. ಕುಟುಂಬದ ನೆಲೆಯಲ್ಲಿನ ಖಾಸಗಿ ಆಸ್ತಿಯ ಕಲ್ಪನೆಯು ಮಹಿಳೆಯ ದಾಸ್ಯಕ್ಕೆ ಕಾರಣವಾಗುತ್ತದೆ. ಗಂಡಸಿಗಿದು ಸಮಸ್ಯೆಯೇ ಅಲ್ಲ. ಅದ್ದರಿಂದ ವೈಯಕ್ತಿಕ ನೆಲೆಯ ಮಹಿಳೆಯ ಸಮಸ್ಯೆ ರಾಜಕೀಯ ಸಮಸ್ಯೆಯೂ ಆಗಬಲ್ಲಷ್ಟು ಮಹತ್ವದ್ದು ಎನ್ನುವ ಆಕೆ "ನನ್ನ ಧ್ವನಿ ಮಹಿಳಾ ಸಮುದಾಯಕ್ಕಾಗಿಯೇ ಹೊರತು ನನಗಾಗಿ ಅಲ್ಲ" ಎನ್ನುತ್ತಾಳೆ.

ಸ್ತ್ರೀಯರು ತರ್ಕಬದ್ಧ ವಿಚಾರ ಮಾಡುವುದಿಲ್ಲ ಎನ್ನುವ ಗಂಡಸರ ವಾದವೇ ತರ್ಕಶುದ್ಧ ವಾಗಿಲ್ಲ ಎಂದು ಮೇರಿಯ ಅಭಿಪ್ರಾಯ. ಒತ್ತಾಯ ಪೂರ್ವಕವಾಗಿ ಹೇರಲ್ಪಟ್ಟ ಸಂದರ್ಭ ದೊಳಗೆ ಬದುಕುವ ಮಹಿಳೆಯರ ಅನುಭವಗಳು 'ನಂಬಿಕೆ'ಯ ನೆಲೆಯಲ್ಲಿಯೇ ಆಕಾರ ತಳೆಯುವಂತೆ ಮಾಡಲಾಗಿದೆ. ಮಹಿಳೆಯ ಭಾವನಾತ್ಮಕತೆ, ಅವೈಚಾರಿಕತೆ ಒಂದು ಮಿತಿ ಎನ್ನುವುದಾದರೆ ಅಂಥ ಮಿತಿಯನ್ನು ಕಲ್ಪಿಸಿದವರೂ ಪುರುಷ ವರ್ಗದವರೇ ಎಂಬುದನ್ನು ಸಮರ್ಥವಾಗಿ ಮೇರಿ ನಿರೂಪಿಸುತ್ತಾಳೆ.

ಉದಾರವಾದಿ ಸ್ತ್ರೀವಾದದ ಮತ್ತೊಬ್ಬ ಪ್ರಮುಖ ಚಿಂತಕರೆಂದರೆ 'ದಿ ಸಬ್ಜೆಕ್ಷನ್ ಆಫ್ ವಿಮೆನ್' ಕೃತಿಯ ಕರ್ತೃ ಜಾನ್ ಸ್ಟುವರ್ಟ್ ಮಿಲ್. ಹಾಗು 'ದಿ ಎನ್ ಫ್ರಾನ್‌ಚೈಸ್ ಮೆಂಟ್ ಆಫ್ ವಿಮೆನ್' ಬರಹದ ಕರ್ತೃ ಹ್ಯಾರಿಯಟ್ ಟೇಲರ್ ಮಿಲ್ಸ್. ಇವರಿಬ್ಬರೂ ಅಸಂಪ್ರದಾಯಿಕವೆನ್ನಬಹುದಾದ ಜೀವನವನ್ನು ನಡೆಸಿದ ದಂಪತಿಗಳು. "ಉದಾರಮತವಾದದ ತತ್ವಜ್ಞಾನವು ಸ್ತ್ರೀಯರಿಗೂ ಅನ್ವಯಿಸುವ ತತ್ವಜ್ಞಾನ" ಎನ್ನುವ ಮಿಲ್ಸ್, ಕುಟುಂಬದಾಚೆಗೆ ಮಹಿಳೆಯ ಬದುಕು ವಿಸ್ತರಿಸುವಲ್ಲಿ ಆಕೆಗೆ ನಿಜವಾದ ಸ್ವಾತಂತ್ರ್ಯವಿದೆ ಎಂದು ಅಭಿಪ್ರಾಯ ಪಡುತ್ತಾನೆ. ಪಾಲನೆಯ ಏಕ ಮಾತ್ರ ಕೇಂದ್ರವಾಗಿ ಕುಟುಂಬದಲ್ಲಿ ಮುಖ್ಯ ಪಾತ್ರ ವಹಿಸುವ ಮಹಿಳೆಯರಿಗೆ ಅದರಾಚಿನ ಸಾಧ್ಯತೆಗಳ ಬಗೆಗೆ ಆಲೋಚಿಸುವಂತೆ ಆತ ಕರೆ ಕೊಡುತ್ತಾನೆ. ಒಂದು ರೀತಿಯಲ್ಲಿ ವಿವಾಹವೆಂದರೆ, ಸ್ತ್ರೀಯು ಕುಟುಂಬದ, ಮನೆಯ ವ್ಯವಸ್ಥೆಗೆ ಬದ್ಧಳಾಗುಳಿವ ಒಪ್ಪಂದ ಎಂದು ಆತ ವ್ಯಾಖ್ಯಾನಿಸುತ್ತಾನೆ. ಸ್ತ್ರೀಗೆ ಸ್ವಂತದ ವ್ಯವಸಾಯವಿರಬೇಕು. ಮನೆಯಾಚಿನ ದುಡಿಮೆ ಮಾತ್ರ ಆಕೆಯ ದುಡಿಮೆಗೆ ಮಾನ್ಯತೆ ತರಬಲ್ಲದೆಂದು ಟೇಲರ್‌ಳ ವಾದ. ಸ್ವಾತಂತ್ರ್ಯವೆಂದರೆ, ದುಡಿಮೆಗೆ ಅರ್ಹ ಮಾನ್ಯತೆ ಎಂದು ಆಕೆ ಅರ್ಥೈಸುತ್ತಾಳೆ. ಆದರೆ ದುಡಿಮೆಯು ಅನಿವಾರ್ಯತೆಗಳಿಂದಾಗಿ ಒತ್ತಾಯದ ಒತ್ತಡಗಳಲ್ಲಿ ಸಿಲುಕಿದಾಗ ದೊರಕುವ

ಅಂಥ ಸ್ವಾತಂತ್ರ್ಯವು ಅರ್ಥಹೀನವೆಂಬ ಭಿನ್ನ ಆಲೋಚನೆ ಸ್ಟುವರ್ಟ್ ಮಿಲ್‌ನದು. ದುಡಿಮೆಯನ್ನು ಇಚ್ಛೆಗೆ ಅನುಸಾರವಾಗಿ ಮಾಡುವ ಇಲ್ಲವೆ ಬಿಡುವ ಸ್ವಾತಂತ್ರ್ಯವೇ ಮಹಿಳೆಯ ಮಟ್ಟಿಗೆ ನೈಜ ಸ್ವಾತಂತ್ರ್ಯ ಎಂಬ ಅಭಿಪ್ರಾಯ ಆತನದು.

ವೈಚಾರಿಕತೆ, ಸಮಾನ ಶಿಕ್ಷಣ, ಸಮಾನ ಮತದಾನದ ಹಕ್ಕು, ಸಮಾನ ಉದ್ಯೋಗಾವಕಾಶ, ಸಮಾನ ವೈವಾಹಿಕ ಸಂಬಂಧದ ಸಹಭಾಗಿತ್ವ ಮುಂತಾದವನ್ನು ಉದಾರವಾದಿ ಸ್ತ್ರೀವಾದವು 'ಮೌಲ್ಯ'ಗಳಾಗಿ ಭಾವಿಸಿತು. ಪುರುಷನಾಯಕತ್ವದ ಚಳುವಳಿಯ ವಲಯದಲ್ಲಿ ಈ ಉದಾರವಾದಿ ಸ್ತ್ರೀವಾದವು ಮೂಡಿಬಂದಿದ್ದರಿಂದ ಪ್ರತ್ಯೇಕ ಚಳುವಳಿಯ ಅಗತ್ಯವನ್ನು ಇದು ಮನಗಾಣಲಿಲ್ಲ. ಪ್ರಧಾನ ಚಳುವಳಿಯ ಒಳಗೆಯೇ ಸುಧಾರಣಾವಾದಿ ದೋರಣೆಗಳನ್ನು ಇದು ಪ್ರತಿಪಾದಿಸಿದೆ. ಹೆಚ್ಚಿನ ಆಲೋಚನೆಗಳೆಲ್ಲಾ ನಿಯಮಿತ ಚೌಕಟ್ಟಿನ ಒಳಗೆ ಲಿಂಗ ಅಸಮಾನತೆಯನ್ನು ಪ್ರಶ್ನಿಸುವ ನೆಲೆಯಲ್ಲಿ ಇದೆ. ಲಿಂಗ ಸಮಾನತೆಯನ್ನು ಕೇವಲ ಕಾಯ್ದೆ ಕಾನೂನುಗಳಾಗಿಯಾಗಲಿ, ಸ್ತ್ರೀಪುರುಷ ಸಮಾನತೆಯನ್ನು ಸಾರುವ ಸಂವಿಧಾನಗಳಾಗಿಯಾಗಲಿ ಪೂರ್ಣ ರೂಪದಲ್ಲಿ ಇನ್ನೂ ತರಲಾಗಿಲ್ಲ. ಉದಾರವಾದಿ ಸ್ತ್ರೀವಾದಿಗಳು ಅಧಿಕಾರದ ಕೇಂದ್ರದ ಕಾಯ್ದೆ ಕಾನೂನುಗಳ ವ್ಯಾಪ್ತಿಯಲ್ಲಿ ಬದಲಾವಣೆ ತರಲು ಅಪೇಕ್ಷಿಸುತ್ತಾರೆ. ಸ್ತ್ರೀಪುರುಷ ಸಮಾನತೆಗೆ ಅಡ್ಡಿ ತರುವ ಕಾಯ್ದೆಗಳನ್ನು ಕಿತ್ತೊಗೆಯಬೇಕೆಂಬ ಅಪೇಕ್ಷೆ ಅವರದು. ಸಮಾಜದ ಸಂಪನ್ಮೂಲಗಳ ಉಪಭೋಗ ಮತ್ತು ವಿತರಣಾ ವ್ಯವಸ್ಥೆಯಲ್ಲಿ ಹೆಣ್ಣಿಗೆ ನಿರ್ಲಕ್ಷಿತ ಪಾತ್ರವಿರುವುದನ್ನು ಉದಾರವಾದಿ ಸ್ತ್ರೀವಾದಿಗಳು ವಿರೋಧಿಸುತ್ತಾರೆ.

ಆಧುನಿಕ ಸ್ತ್ರೀವಾದಿಗಳು, ಅಧಿಕಾರ ವ್ಯವಸ್ಥೆಯ ವತಿಯಿಂದ ಲಿಂಗಸಮಾನತೆಗೆ ಪೂರಕವಾದ ಕಾರ್ಯಯೋಜನೆಗಳನ್ನು ನಿರೀಕ್ಷಿಸುತ್ತಾ ಕೂರುವವರಲ್ಲ. ಲಿಂಗಸಮಾನತೆಯನ್ನು ಅತ್ಯಂತ ವೈಯಕ್ತಿಕ ನೆಲೆಯ ಬದಲಾವಣೆಯ ಮೂಲಕ ಪಡೆದುಕೊಳ್ಳಬಲ್ಲ ಪರಿಕಲ್ಪನೆಯನ್ನು ಮುಂದಿಡುತ್ತಾರೆ. ಅದೇ ದ್ವಿಲಿಂಗಿ ವ್ಯಕ್ತಿತ್ವದ ಪರಿಕಲ್ಪನೆ. (androgynous) ಸಾಂಸ್ಕೃತಿಕ ಮೌಲ್ಯಗಳಿಂದ ರೂಪಿಸಲ್ಪಡುವ 'ಪುರುಷ ಸಂಕೇತ' ಹಾಗೂ 'ಸ್ತ್ರೀ ಸಂಕೇತ'ಗಳನ್ನು ಕೀಳಾಗಿ ಕಾಣುವಲ್ಲಿ ಕೆಲಸ ಮಾಡುತ್ತದೆ. ಈಗಾಗಲೇ ಸಾಂಸ್ಕೃತಿಕವಾಗಿ ಹೀಗೆ ಸ್ತ್ರೀಪುರುಷರ ಸಿದ್ಧಮಾದರಿಗಳು ರೂಪುಗೊಂಡಿರುವುದರಿಂದ ಅದನ್ನು ಒಡೆಯುವ ಪ್ರಯತ್ನವಾಗಿ 'ದ್ವಿಲಿಂಗಿ' ಪರಿಕಲ್ಪನೆ ಸಿದ್ಧಗೊಂಡಿತು. ಪ್ರತಿಯೊಬ್ಬ ವ್ಯಕ್ತಿಯಲ್ಲಿರುವ ಸ್ತ್ರೀ ಹಾಗೂ ಪುರುಷ ಗುಣಗಳನ್ನು ಸ್ತ್ರೀಪುರುಷರಿಬ್ಬರೂ ಬೆಳೆಸಿಕೊಂಡರೆ ಮೇಲು ಕೀಳು ಭಾವನೆಗೆ ಸಮಾಜದಲ್ಲಿ ಅವಕಾಶ ವಿರುವುದಿಲ್ಲ. ಪುರುಷ ಹಾಗೂ ಸ್ತ್ರೀ ಸಂಕೇತಗಳು ಸೂಚಿಸುವ ಗುಣಗಳನ್ನು ಒಂದೇ ವ್ಯಕ್ತಿತ್ವದಲ್ಲಿ ಬೆಳೆಸಿಕೊಂಡಾಗ ಯಾವುದೇ ಲಿಂಗದ ಮೇಲುಗೈ ಇರುವುದಿಲ್ಲ. ಇಲ್ಲಿ ಲಿಂಗದ ಜೈವಿಕ ಮೂಲವು ಮುಖ್ಯವಲ್ಲ. ವ್ಯಕ್ತಿಯ ವ್ಯಕ್ತಿತ್ವಕ್ಕೂ ಸಾಮಾಜಿಕ ಪರಿಸ್ಥಿತಿಗಳಿಗೂ ಇರಬಹುದಾದ ಸಂಬಂಧದ ನೆಲೆಯನ್ನು ದಾಟಿ ಸ್ವತಂತ್ರ ವ್ಯಕ್ತಿತ್ವವನ್ನು ಹೊಂದುವ ಆಶಯವಿದೆ.

## ಮಾರ್ಕ್ಸ್‌ವಾದಿ ಸ್ತ್ರೀವಾದ

ಆಂಗ್ಲ-ಅಮೇರಿಕ ಮತ್ತು ಐರೋಪ್ಯದೇಶಗಳ ಉದಾರಮಾನವತಾವಾದಿ ಚಿಂತನೆಯ ಮೂಲದ ಸ್ತ್ರೀವಾದವು ವಿಚಾರಮೂಲ ಸಿದ್ಧಾಂತದ ನೆಲೆಯಿಂದ ರೂಪುಗೊಂಡಿದೆ. ವ್ಯಕ್ತಿಯ ಮನಸ್ಸು ಮತ್ತು ಲೈಂಗಿಕತೆಯ ವಿಶ್ಲೇಷಣೆಯೇ ಉದಾರವಾದಿ ಸ್ತ್ರೀವಾದದ ತಾತ್ವಿಕ ಹಿನ್ನೆಲೆಗಿದ್ದು ಪರಿಸರದ ಪ್ರಭಾವವನ್ನು ನಿರ್ಲಕ್ಷಿಸಲಾಯ್ತು. ಈ ತಾತ್ವಿಕ ಮಿತಿಯನ್ನು ನೀಗಿಕೊಂಡು ವಸ್ತುನಿಷ್ಠ ಸ್ತ್ರೀವಾದಿ ಚಿಂತನೆಯನ್ನು ಕಟ್ಟಿಕೊಳ್ಳುವಲ್ಲಿ ಮಾರ್ಕ್ಸ್ ಮತ್ತು ಏಂಗೆಲ್ಸರ ಸಾಮಾಜಿಕ ಚಿಂತನೆಗಳನ್ನು ಬಳಸಿಕೊಳ್ಳಲಾಗಿದೆ. ಕುಟುಂಬದೊಳಗಿನ ಮಹಿಳೆಯ ಆರ್ಥಿಕ, ಭೌತಿಕ ಶೋಷಣೆಯನ್ನೇ ವರ್ಗ ಸಮಾಜಕ್ಕೂ ವಿಸ್ತರಿಸಿ ತಮ್ಮ ಸಾಮಾಜಿಕ ಚಿಂತನೆಗಳನ್ನು ಮಾರ್ಕ್ಸ್ ಮತ್ತು ಏಂಗೆಲ್ಸ್ ರೂಪಿಸಿಕೊಂಡರು. ಸಾಮಾಜಿಕ ವ್ಯವಸ್ಥೆಯ ಸಮಗ್ರ ಪರಿವರ್ತನೆಯ ಮೂಲಕ ಮಾತ್ರ ಸರ್ವಸಮಾನತೆಯನ್ನಾಧರಿಸಿದ ಸಮಾಜವನ್ನು ಕಟ್ಟಲು ಸಾಧ್ಯವೆಂದು ಇವರಿಬ್ಬರೂ ನಂಬಿದ್ದರು. ಈ ನಂಬಿಕೆಯನ್ನೇ ಮಾರ್ಕ್ಸ್‌ವಾದಿ ಸ್ತ್ರೀವಾದದಲ್ಲಿ ಕಾಣುತ್ತೇವೆ. ಲಿಂಗಾಧರಿತ ಶ್ರಮವಿಭಜನೆಯ ಸಿದ್ಧಾಂತವನ್ನಾಧರಿಸಿ ಸ್ತ್ರೀ-ಪುರುಷರೊಳಗಿನ ಸಾಮಾಜಿಕ ಅಸಮಾನತೆಯ ಸ್ವರೂಪವನ್ನು ಪ್ರಧಾನವಾಗಿ ಮಾರ್ಕ್ಸ್‌ವಾದಿ ಸ್ತ್ರೀವಾದಿ ವಿಶ್ಲೇಷಿಸುತ್ತದೆ.

ಬ್ರಿಟನ್ನಿನ ಜೂಲಿಯಟ್ ಮಿಚೆಲ್, ಶೀಲಾ ರೋಬೋತಮ್, ಮಿಶೆಲ್ ಬ್ಯಾರಲ್‌ರು ಮಾರ್ಕ್ಸ್‌ವಾದದ ಸಾಂಪ್ರದಾಯಿಕ ಚಿಂತನೆಯ ಮಿತಿಯನ್ನು ಗುರುತಿಸಿ ಅದಕ್ಕೆ ಹೊಸ ಸ್ವರೂಪ ನೀಡಿದರು. ಕುಟುಂಬದೊಳಗಿನ ಶ್ರಮವಿಭಜನೆಯಲ್ಲಿನ ತಾರತಮ್ಯವು ಪಿತೃಪ್ರಾಧಾನ್ಯತೆಗೆ ಎಡೆಮಾಡಿಕೊಡುವ ಸ್ವರೂಪವನ್ನು ಮಾರ್ಕ್ಸ್‌ವಾದ ಸ್ಪಷ್ಟಪಡಿಸುತ್ತದೆ. ಸಾರ್ವಜನಿಕ ಉತ್ಪಾದನೆಯಲ್ಲಿ ಹೆಣ್ಣು ಭಾಗವಹಿಸದಂತೆ ಮಾಡುವ ನಾಗರಿಕ ಕುಟುಂಬ ಪದ್ಧತಿಯಲ್ಲಿನ ಹೆಣ್ಣಿನ ಶೋಷಣೆಯ ಸ್ವರೂಪದ ಆಧಾರದ ಮೇಲೆಯೇ ವರ್ಗಶೋಷಣೆಯ ಸ್ವರೂಪವನ್ನು ಮಾರ್ಕ್ಸ್ ಮತ್ತು ಏಂಗೆಲ್ಸ್ ನಿರ್ಧರಿಸುತ್ತಾರೆ. ಆದರೆ ಮಹಿಳೆಯರ ಗೃಹಕೃತ್ಯವೂ ಸೇರಿದಂತೆ ಅಪಾರವಾದ ಕಾರ್ಯ ಚಟುವಟಿಕೆಗಳನ್ನು ಮಾರ್ಕ್ಸ್‌ಏಂಗೆಲ್ಸ್ ಪರಿಗಣಿಸುವುದೇ ಇಲ್ಲವೆನ್ನುತ್ತಾರೆ ಸ್ತ್ರೀವಾದಿಗಳು. ಮಕ್ಕಳ ಪಾಲನೆ, ಪೋಷಣೆ, ಆಹಾರ ಸಿದ್ಧಪಡಿಸುವಿಕೆ, ಸಂತಾನೋತ್ಪತ್ತಿ, ಮನೆಗೆಲಸ ಇವುಗಳಿಗೆ ದುಡಿಮೆಯ ಬೆಲೆಯಾಗಲಿ ಮಿಗುತಾಯ ಮೌಲ್ಯವಾಗಲಿ ಇಲ್ಲದಿರುವುದನ್ನು ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಗಮನಿಸಿದರು. ಮನೆಯ ಒಳಗಿನ ದುಡಿಮೆ

ಹಾಗೂ ಜವಾಬ್ದಾರಿಗಳು ಮಹಿಳೆಯರು ಸಾರ್ವಜನಿಕ ಉತ್ಪಾದನೆಯಲ್ಲಿ ಭಾಗವಹಿಸದಂತೆ ಮಾಡುತ್ತವೆ. ಹಾಗೂ ದುಡಿಯುವಂತಾದಾಗ ಆಕೆಗೆ ಕಡಿಮೆ ಕೌಶಲ್ಯದ ಅರೆಕಾಲಿಕ ಉದ್ಯೋಗಗಳಿಗೆ ಹೊರಳಿಕೊಳ್ಳುವ ಅನಿವಾರ್ಯತೆಯನ್ನು ಸೃಷ್ಟಿಸಲಾಗುತ್ತದೆ. ಸಂತತಿ ಪಾಲನೆಯ ಜವಾಬ್ದಾರಿಯನ್ನು ಸಮುದಾಯ ವಹಿಸಿಕೊಂಡಲ್ಲಿ, ಮಹಿಳೆಯ ಉದ್ಯೋಗಾವಕಾಶಗಳು ವಿಸ್ತರಿಸಲು ಸಾಧ್ಯವೆಂಬ ನಿಲುವು ಮಾರ್ಕ್ಸ್‌ನದು. ಆದರೆ ಪ್ರಾಯೋಗಿಕವಾಗಿ ಅದಿನ್ನೂ ಸಾಧ್ಯವಾಗದಂತಹ ಸಾಮಾಜಿಕ ಸಂದರ್ಭದಲ್ಲಿ, ಮಹಿಳೆಯು ಇಬ್ಬಗೆಯ ದುಡಿತದಿಂದ ಹೆಚ್ಚು ಶೋಷಿತಳಾಗುತ್ತಿದ್ದಾಳೆಂದು ಮಾರ್ಕ್ಸ್‌ವಾದೀ ಸ್ತ್ರೀವಾದಿಗಳು ಗುರುತಿಸಿದ್ದಾರೆ. ವರ್ಗಸಂಘರ್ಷವುಳ್ಳ ಸಾಮಾಜಿಕತೆಯೊಳಗೇ ಮಹಿಳೆಯ ಮೇಲಿನ ಇಬ್ಬಗೆಯ ಶೋಷಣೆ ಗೌಣವಾಗಬಹುದಾದ ಅಪಾಯವನ್ನು ಸ್ತ್ರೀವಾದಿಗಳು ಕಂಡರು. ಮಾರ್ಕ್ಸ್‌ವಾದಿ ಚಿಂತನೆಯ ಹಿನ್ನೆಲೆಯಲ್ಲಿಯೇ ಗೌಣನೆಲೆಯಿಂದ ಪ್ರಧಾನನೆಲೆಗೆ ತಂದ ಮಹಿಳೆಯ ದುಡಿತದ ಪ್ರಶ್ನೆಯನ್ನು ಸ್ತ್ರೀವಾದದ ಕೇಂದ್ರ ಕಾಳಜಿಯಾಗಿ ಇಟ್ಟುಕೊಳ್ಳಲಾಯ್ತು.

ಮಾರ್ಕ್ಸ್‌ನ ವಿಚಾರಗಳು ಸ್ತ್ರೀ ವಿರೋಧಿಯೇನೋ ಅಲ್ಲ. ಸ್ತ್ರೀ ವಿಮೋಚನೆಯ ಬಗೆಗಿನ ಆತನ ಆಲೋಚನೆಗಳು 'The Holy Family'ಯಲ್ಲಿ ಪ್ರತಿಪಾದಿತವಾಗಿವೆ. ಸ್ತ್ರೀ ವಿಮೋಚನೆಯು ತನಗೆ ತಾನೇ ಆಗುವಂತಹ ಪ್ರಾಕೃತಿಕ ಸಂಗತಿಯಲ್ಲ. ಅದು, ಮಾನವತೆಯು ಪಶುತ್ವವನ್ನು ಗೆದ್ದಿರುವುದನ್ನು ಸೂಚಿಸುವ ಮಾನದಂಡ. ಸಂಸ್ಕೃತಿಯು ಪ್ರಕೃತಿಯನ್ನು ಸೋಲಿಸಿದ್ದನ್ನು ಸೂಚಿಸುವ ಮಾನದಂಡ ಕೂಡ. ಈ ಕೃತಿಯಲ್ಲಿ ಫ್ಯೂರ್ಸೇನನ ಮಹಿಳಾ ವಿಮೋಚನೆಯ ವಿಚಾರಗಳನ್ನು ಮಾರ್ಕ್ಸ್ ಬೆಂಬಲಿಸುತ್ತಾ ಅದಕ್ಕೆ ತಾತ್ವಿಕ ಸ್ವರೂಪವನ್ನು ನೀಡುತ್ತಾನೆ. ನಾಗರಿಕತೆಯ ಮಟ್ಟವನ್ನು ಆಯಾ ಸಮಾಜದಲ್ಲಿನ ಮಹಿಳೆಯರ ಸ್ಥಾನಮಾನಗಳು ಸೂಚಿಸುತ್ತವೆಂಬುದು ಮಾರ್ಕ್ಸ್‌ನ ಅಭಿಪ್ರಾಯ. ಜ್ಯೂಲಿಯಟ್ ಮಿಶೆಲ್‌ಳು ಹೇಳುವಂತೆ, ಮಹಿಳೆಯ ಸ್ಥಿತಿಗತಿಗಳು ಕೇವಲ ಸಾಮಾಜಿಕ ಅಭಿವೃದ್ಧಿಯ ಸೂಚಕವಾಗದೆ, ಅತ್ಯಂತ ಸೂಕ್ಷ್ಮ ಸಮಸ್ಯಾತ್ಮಕ ಸ್ವರೂಪದ್ದಾಗಿವೆ.

ಏಂಗೆಲ್ಸ್‌ನು, ಮಹಿಳೆಯು ಮತ್ತೆ ಉತ್ಪಾದನಾ ಕಾರ್ಯದಲ್ಲಿ ಭಾಗವಹಿಸುವಂತಾದಾಗ ಮಾತ್ರ ಮಹಿಳೆಯ ವಿಮೋಚನೆ ಸಾಧ್ಯ ಎಂದು ಪ್ರತಿಪಾದಿಸಿದ ಸಮಾಜವಾದಿ ವ್ಯವಸ್ಥೆಯಲ್ಲಿ ಮನೆಗೆಲಸ ಹಾಗೂ ಶಿಶುಪಾಲನೆಯ ಜವಾಬ್ದಾರಿ ಸರ್ಕಾರದ್ದಾಗಿರುವುದರಿಂದ ವಿಮೋಚನೆಯ ಸಾಧ್ಯತೆಯ ಮಾರ್ಗವನ್ನು ಏಂಗೆಲ್ಸ್ ಸೂಚಿಸಿದ್ದಾನೆ. ಮಾರ್ಕ್ಸ್‌ವಾದಿ ಹೋರಾಟದಲ್ಲಿ ಭಾಗವಹಿಸಲು ಹೀಗಾಗಿ ಸ್ತ್ರೀವಾದಿಗಳು ಬೇಗ ಆಸಕ್ತರಾದರು. ಮಹಿಳಾ ಪ್ರಶ್ನೆಯನ್ನು ಮಾರ್ಕ್ಸ್‌ವಾದವು ಒಟ್ಟಾರೆಯಾಗಿ, ದುಡಿವ ವರ್ಗದ ಭವಿಷ್ಯದೊಂದಿಗೆ ಜೋಡಿಸುವ ಕಾರಣ, ಸ್ತ್ರೀವಿಮೋಚನೆಯ ದೃಷ್ಟಿಯಿಂದ ಅದು ಅಪರಿಪೂರ್ಣ ಚಿಂತನೆ ಎಂದು ಕೆಲವು ಸ್ತ್ರೀವಾದಿಗಳು ಭಾವಿಸಿದರು.

ಮಹಿಳಾ ಸಮಸ್ಯೆಗೆ ಭೌತವಾದಿ ಸೈದ್ಧಾಂತಿಕ ನೆಲೆಯನ್ನು ಏಂಗೆಲ್ಸ್ ಒದಗಿಸಿದ ಏಕಪತಿ ಕುಟುಂಬದ ಸ್ವರೂಪವು ಸ್ತ್ರೀಯನ್ನು ದಬ್ಬಾಳಿಕೆಗೆ ಗುರಿಪಡಿಸಲು ಪುರುಷನಿಗೆ ಎಲ್ಲ ಸಹಕಾರವನ್ನು

ನೀಡುತ್ತದೆ. ಅದೇ ರೀತಿ ಪ್ರಭುತ್ವವು ವರ್ಗ ಶೋಷಣೆಯ ಸಾಧನವಾಗುತ್ತದೆ ಎಂಬುದು ಆತನ ಮತ. ಕುಟುಂಬದೊಳಗೆ, ಬೂರ್ಜ್ವಾ ಶ್ರೀಮಂತ ವರ್ಗವನ್ನು ಪುರುಷನು ಪ್ರತಿನಿಧಿಸುವವನಾಗಿದ್ದರೆ, ಶ್ರಮಿಕ ವರ್ಗವನ್ನು ಮಹಿಳೆ ಪ್ರತಿನಿಧಿಸುತ್ತಿರುತ್ತಾಳೆ. ಆಸ್ತಿಯ ಉತ್ತರಾಧಿಕಾರಿತ್ವದ ಸ್ವರೂಪವನ್ನು ಏಂಗೆಲ್ಸ್ ಪ್ರತಿಪಾದಿಸುತ್ತ, ಮಾತೃವಂಶೀಯತೆಯಿಂದ ಪಿತೃವಂಶೀಯತೆಗೆ ಬದಲಾವಣೆಗೆ ಹೊಂದಿದ ಸಾಮಾಜಿಕ ಸಂದರ್ಭವನ್ನು ಮುಖ್ಯವಾಗಿ ಪರಿಗಣಿಸಿದ್ದಾನೆ. ಮನೆಯ ಒಡೆತನ ಹಾಗೂ ಸಂತತಿಯ ಮೇಲಿನ ಹಕ್ಕು ಬಾಧ್ಯತೆಗಳೆಲ್ಲವೂ ಮಾತೃವಂಶೀಯ ಕುಟುಂಬ ಪದ್ಧತಿಯಲ್ಲಿ ತಾಯಿಯದಾಗಿರುತ್ತಿತ್ತು. ಸಮುದಾಯ ಕುಟುಂಬ ಹಾಗೂ ಯುಗ್ಮ ಕುಟುಂಬ ಪದ್ಧತಿಗಳ ನಂತರ ಏಕಪತಿತ್ವ ವ್ಯವಸ್ಥೆ ಬಂದಾಗ ಪಿತೃಪ್ರಾಧಾನ್ಯತೆ ಉಂಟಾಯಿತು. ಇಲ್ಲಿ ಮಹಿಳೆ ಪತ್ನಿಯಾಗಿದ್ದರೂ ಗುಲಾಮ ಸ್ತ್ರೀ ಹಾಗೂ ವೇಶ್ಯೆಯ ಸ್ಥಿತಿಯನ್ನೇ ಹೊಂದಿರುತ್ತಾಳೆ. ಖಾಸಗಿ ಆಸ್ತಿಯಾಗಿ ಆಕೆ ಮಾರ್ಪಟ್ಟ ಸಂದರ್ಭವು ಹೆಣ್ಣಿನ ಶೋಷಣೆಗೆ ಮುನ್ನುಡಿ. ಸ್ತ್ರೀ ತನ್ನೆಲ್ಲ ದೈಹಿಕ ಸಾಮರ್ಥ್ಯದೊಂದಿಗೆ ಮರುಪ್ರವೇಶವಾಗುವ ಸಂದರ್ಭವು ಮಹಿಳಾ ವಿಮೋಚನೆಗೆ ಅತ್ಯಗತ್ಯ ಎಂದು ಏಂಗೆಲ್ಸ್ ವಾದಿಸುತ್ತಾನೆ.

## ಸಮಾಜವಾದಿ ಸ್ತ್ರೀವಾದ

ಮಾರ್ಕ್ಸ್‌ವಾದಿ ಸಿದ್ಧಾಂತವು ವರ್ಗಹೋರಾಟವನ್ನು ಇತಿಹಾಸದ ಚಾಲಕ ಶಕ್ತಿಯನ್ನಾಗಿ ಪರಿಗಣಿಸಿತು. ಆ ಶಕ್ತಿಯ ನಿಯಮಗಳ ಅಧ್ಯಯನವನ್ನು ವ್ಯವಸ್ಥಿತ ರೀತಿಯಲ್ಲಿ ಮಾಡಿತು. ಸ್ತ್ರೀ ಶೋಷಣೆಯ ಮೂಲವನ್ನು ಮಾರ್ಕ್ಸ್‌ವಾದಿ ಸ್ತ್ರೀವಾದಿಗಳೂ ವರ್ಗ ಅಸಮಾನತೆಯಲ್ಲಿ ಹುಡುಕುವ ಪ್ರಯತ್ನವನ್ನು ಮಾಡಿದರು. ಮಾರ್ಕ್ಸ್‌ವಾದಿ ಸ್ತ್ರೀವಾದ ಹಾಗೂ ಸಮಾಜವಾದಿ ಸ್ತ್ರೀವಾದಗಳ ನಿಲುವುಗಳು ಸಮಾನವೆಂಬಂತೆ ಕಾಣುತ್ತದೆ. ಆದರೆ, ವರ್ಗಭೇದಗಳಿಂದ ಕೂಡಿದ ಸಾಮಾಜಿಕ ವ್ಯವಸ್ಥೆಯೇ ಸ್ತ್ರೀಶೋಷಣೆಯ ಏಕೈಕ ಮೂಲವಲ್ಲ ಎಂದು ಸಮಾಜವಾದಿ ಸ್ತ್ರೀವಾದಿಗಳು ಭಾವಿಸುತ್ತಾರೆ. ವರ್ಗಭೇದವನ್ನಷ್ಟೇ ದೃಷ್ಟಿಯಲ್ಲಿಟ್ಟುಕೊಂಡರೆ, ವರ್ಗರಹಿತ ಸಮಾಜವಾದಿ ವ್ಯವಸ್ಥೆಯಿಂದಾಗಿ ಸ್ತ್ರೀಶೋಷಣೆ ಪರಿಹಾರವಾಗುತ್ತದೆ ಎಂದೇನೂ ಇಲ್ಲ. ಬಂಡವಾಳಶಾಹಿ ವ್ಯವಸ್ಥೆಯಲ್ಲೆಂತೋ ಸಮಾಜವಾದಿ ವ್ಯವಸ್ಥೆಯಲ್ಲಿ ಕೂಡ ಸ್ತ್ರೀ ಸಂಪೂರ್ಣ ವಾಗಿ ಶೋಷಣಾಮುಕ್ತಳಾಗುವುದಿಲ್ಲ ಎನ್ನುವುದೇ ಸಮಸ್ಯೆ. ವರ್ಗಹೋರಾಟದಂತಹ ಸಾಮೂಹಿಕ ಪ್ರಯತ್ನದಲ್ಲಿ ಮತ್ತದೇ ಪುರುಷನಾಯಕತ್ವವು ಸ್ತ್ರೀ ಪ್ರಾತಿನಿಧ್ಯವನ್ನು ವಿವೇಚಿಸುವ ಅಪಾಯವಿದೆ. ಬಂಡವಾಳಶಾಹಿ ಕುಟುಂಬಗಳಲ್ಲಿ, ಮಹಿಳೆಯರಾಗಿರುವ ಏಕಮಾತ್ರ ಕಾರಣಕ್ಕಾಗಿಯೇ ಮಹಿಳೆಯರು ಅನುಭವಿಸಬೇಕಾದ ಹಿಂಸೆಗಳು ಕೆಲವಿವೆ. ಸಮಾಜವಾದಿ ವ್ಯವಸ್ಥೆಯು ಮಹಿಳೆಯನ್ನು ಆರ್ಥಿಕ, ಸಮಸ್ಯೆಗಳಿಂದ ಮುಕ್ತಳನ್ನಾಗಿಸಿದರೂ ಸೂಕ್ಷ್ಮ ಹಿಂಸೆಗಳಿಂದ ಆಕೆಯನ್ನು ಬಿಡಿಸುವಲ್ಲಿ ಅದು ಅಸಮರ್ಥವಾಗಿದೆ. ಕ್ರಾಂತಿಕಾರಿ ಹೋರಾಟದ ಪುರುಷ ನಾಯಕರು ಸ್ತ್ರೀಯರ ಸಮಸ್ಯೆಗಳನ್ನು ಗೌಣವಾಗಿ ಪರಿಗಣಿಸಿದ್ದಾರೆ. ವರ್ಗ ಹೋರಾಟದ ಮೂಲಕ ಸಾಮೂಹಿಕ ಬಿಡುಗಡೆಯನ್ನು ಆಶಯವಾಗಿಟ್ಟುಕೊಂಡ ಸಮಾಜವಾದಿ ಆಶಯಗಳು ಸಮಷ್ಟಿಗಾಗಿ ವ್ಯಷ್ಟಿಯನ್ನು ಬಲಿಕೊಡುವುದರಲ್ಲಿ ತಪ್ಪೇನಿಲ್ಲ ಎಂಬ ಸಮಾಜವಾದಿ ಚಿಂತನೆಗೆ ಧೋರಣೆಯನ್ನು ಹೊಂದಿವೆ. ಹೀಗಿದ್ದಾಗ ಮಹಿಳೆಯ ಶೋಷಣೆಯ ಸೂಕ್ಷ್ಮಾತಿಸೂಕ್ಷ್ಮಗಳು ಮುಖ್ಯವಾಗುವುದಿಲ್ಲ.

ಮಹಿಳೆಯರ ವೈಯಕ್ತಿಕ ಬದುಕು ಗುರುತಿಸಲಾಗದ ಸೂಕ್ಷ್ಮ ತೊಳಲಾಟಗಳಿಂದ, ಹಿಂಸೆಗಳಿಂದ ಕೂಡಿರುವುದನ್ನು ರಷ್ಯನ್ ಕ್ರಾಂತಿಯ ಸಕ್ರಿಯ ಸದಸ್ಯೆ ಕ್ಲಾರಾಜೆಟಕನ್ನಳು ಗುರುತಿಸಿದಳು. ಆ ಬಗ್ಗೆ ಆಕೆ ವಹಿಸಿದ ಕಾಳಜಿ ಅನವಶ್ಯಕವೆಂದು ಲೆನಿನ್ ದೂರಿದ್ದ. ಹಾಗೆಯೇ ಸಮಾಜದ ವಿವಿಧ ಸಂಸ್ಥೆಗಳಲ್ಲಿ ಪುರುಷರಿಗಿಂತ ಮಹಿಳೆ ಹೊಂದಿರುವ ಕೀಳುಸ್ಥಾನವನ್ನು ಕುರಿತು ಮತ್ತೊಬ್ಬ ಹೋರಾಟಗಾರ್ತಿ ಹಾರ್ಟ್‌ಮನ್ ಆಕ್ಷೇಪಿಸಿದಳು. ಮಾರ್ಕ್ಸ್‌ವಾದಿ ಚಿಂತನೆಗಳು ಇಂಥ ಸಮಸ್ಯೆಗಳಿಗೆ ಸಮರ್ಪಕ ಉತ್ತರಗಳನ್ನು ನೀಡಲಾರವೆಂದು ಆಕೆಯ ನಿಲುವು. ಅಂತೆಯೇ ತೀವ್ರಗಾಮಿ ಸ್ತ್ರೀವಾದವು ಪ್ರತಿಪಾದಿಸುವ 'ಭಿನ್ನ ಜೈವಿಕತೆ' ಅಥವಾ 'ಪುರುಷ ಪ್ರಾಧಾನ್ಯ' ತತ್ವದ ಮಿತಿಯನ್ನು ಸಮಾಜವಾದಿ ಸ್ತ್ರೀವಾದಿಗಳು ಸರಿಯಾಗಿಯೇ

ಗುರುತಿಸುತ್ತಾರೆ. 'ಮಾನಸಿಕ ಲೈಂಗಿಕ ಮೂಲ' ತತ್ವವನ್ನಾಧರಿಸಿ ಮನೋವಿಶ್ಲೇಷಣಾತ್ಮಕ ಸ್ತ್ರೀವಾದ ನೀಡುವ ವಿವರಣೆಯೂ ಅಸಮರ್ಪಕ ಎಂಬ ನಿಲುವು ಇವರದು.

ಜೂಲಿಯೆಟ್ ಮಿಷೆಲ್ಲಳ 'ದಿ ವುಮನ್ಸ್ ಎಸ್ಟೇಟ್' (೧೯೭೧) ಕೃತಿಯು ಅನೇಕ ವಿಚಾರಗಳ ಹಿನ್ನೆಲೆಯಲ್ಲಿ ಸ್ತ್ರೀಶೋಷಣೆಯನ್ನು ವಿವರಿಸಲು ಪ್ರಯತ್ನಿಸುತ್ತದೆ. ಸ್ತ್ರೀ ಶೋಷಣೆಯ ಮೂಲವನ್ನು ಸಮಗ್ರ ದೃಷ್ಟಿಕೋನದ ಮೂಲಕ ನೋಡಬೇಕಾದ ಅಗತ್ಯವನ್ನು ಆಕೆ ಪ್ರಸ್ತಾಪಿಸುತ್ತಾಳೆ. ಪಿತೃಪ್ರಧಾನ್ಯತೆಯು ಸಾಂಸ್ಕೃತಿಕ ಅಂಗಗಳಿಂದ ನಿಯಂತ್ರಿತವಾಗಿದ್ದು, ವ್ಯಕ್ತಿಯ ಬಹುಪ್ರಜ್ಞಾಸ್ತರಗಳಲ್ಲಿ ತನ್ನ ಅಚ್ಚನ್ನು ಒತ್ತಿಬಿಟ್ಟಿರುತ್ತದೆ. ಮನೋ ವಿಶ್ಲೇಷಣಾತ್ಮಕ ಅಧ್ಯಯನದ ಮೂಲಕ, ಮಹಿಳೆಯು ಹೊಂದಬೇಕಾದ ಮಾನಸಿಕ ಬದಲಾವಣೆಯ ಸ್ವರೂಪವನ್ನು ಮಿಷೆಲ್ಲಳು ನಿರೂಪಿಸುತ್ತಾಳೆ. ಪಿತೃಪ್ರಧಾನ್ಯತೆಯಂತೆಯೇ ಬಂಡವಾಳಶಾಹಿ ಸಂಬಂಧಗಳು ಮಹಿಳೆಯನ್ನು ಆರ್ಥಿಕ ಮೂಲ ಅಧೀನ ಸ್ಥಿತಿಗೆ ತಳ್ಳಲು ಕಾರಣವಾಗುತ್ತದೆ. ಹೀಗಾಗಿ ಬಂಡವಾಳಶಾಹಿ ಹಾಗೂ ಪಿತೃಪ್ರಧಾನ್ಯ ವ್ಯವಸ್ಥೆಗಳೆರಡನ್ನೂ ದೃಷ್ಟಿಯಲ್ಲಿಟ್ಟುಕೊಂಡು ಆಕೆ ಉತ್ಪಾದನಾ ಹಂತದ ನಾಲ್ಕು ಬೆಳವಣಿಗೆಯ ಘಟ್ಟಗಳನ್ನು ಗುರುತಿಸುತ್ತಾಳೆ.

ಸಂತಾನೋತ್ಪತ್ತಿ, ಉತ್ಪಾದನಾವ್ಯವಸ್ಥೆ, ಮಕ್ಕಳ ಸಾಮಾಜೀಕರಣ ಹಾಗೂ ಲೈಂಗಿಕತೆ ಈ ನಾಲ್ಕೂ ಘಟ್ಟಗಳು ಕುಟುಂಬ ರಚನೆಯಲ್ಲಿ ಪರಸ್ಪರ ಪೂರಕವಾಗಿ ಸಂಬಂಧಿತವಾಗಿವೆ. ಬದಲಾವಣೆಯು ಈ ನಾಲ್ಕೂ ರಚನೆಗಳಲ್ಲಿಯೂ ಕಂಡು ಬಂದಾಗ ಮಾತ್ರ ಸಮಗ್ರವಾಗುತ್ತದೆ. ಅಲ್ಲಿಯವರೆಗೂ ಮಹಿಳಾ ವಿಮೋಚನೆ ಸಾಧ್ಯವಿಲ್ಲ ಎಂಬ ತೀರ್ಮಾನಕ್ಕೆ ಮಿಶೆಲ್ ಬರುತ್ತಾಳೆ. ಚರಿತ್ರೆಯ ಗತಿಯಲ್ಲಿ, ವಿವಿಧ ಕಾಲಮಾನಗಳ ಸಂದರ್ಭದಲ್ಲಿ, ಈ ನಾಲ್ಕು ರಚನೆಗಳು ತಮ್ಮದೇ ಆದ ರೀತಿಯಲ್ಲಿ ಬದಲಾವಣೆಗೊಳಗಾಗುತ್ತಿರುತ್ತವೆ. ಸಂತಾನೋತ್ಪತಿ ಹಾಗೂ ಪಾಲನೆಯ ಕಾರಣ ಸಮುದಾಯ ಕುಟುಂಬ ಪದ್ಧತಿಯ ಕಾಲದ ಸ್ತ್ರೀಯು ಒಡೆತನವನ್ನು ಪಡೆದಿದ್ದಳು. ಬಂಡವಾಳಶಾಹಿ ಏಕಪತಿತ್ವ ಕುಟುಂಬ ಪದ್ಧತಿಯ ಕಾಲದಲ್ಲಿ ಆಕೆ ಸಾಮಾಜಿಕವಾಗಿ ಅನುತ್ಪಾದಕಳಾದುದರಿಂದ ದುರ್ಬಲ ಸ್ಥಾನವನ್ನು ಹೊಂದಿದಳು. ಈ ಬದಲಾವಣೆಯು ಮಹಿಳೆ ಹಾಗೂ ಪುರುಷರ ಮಾನಸಿಕ ಸ್ತರಗಳಲ್ಲಿ ತಮ್ಮದೇ ಆದ ಪ್ರಭಾವವನ್ನು ಬೀರುತ್ತ, ಅವರ ವರ್ತನೆಯನ್ನು ನಿರ್ಧರಿಸುತ್ತಿರುತ್ತದೆ. ಒಟ್ಟಾರೆಯಾಗಿ ಮಹಿಳೆಯ ಸಾಮಾಜಿಕ ಸ್ಥಾನಮಾನದ ಗತಿಯನ್ನು ಸರಳ ರೇಖಾತ್ಮಕವಾಗಿ ವಿವರಿಸಲು ಬಾರದಂತಹ ಸಂಕೀರ್ಣ ಸ್ಥಿತಿ ಏರ್ಪಟ್ಟಿದೆ. ಹೀಗಾಗಿ ಅರ್ಥವಿವರಣೆಯ ದೃಷ್ಟಿಯಿಂದ ಭಿನ್ನ ಆಯಾಮಗಳು ಮಹಿಳಾ ಅಧ್ಯಯನಕ್ಕೆ ಒದಗಿ ಬಂದಿವೆ. ಹೀಗೆ ಭಿನ್ನ ಆಯಾಮಗಳು ಲಭ್ಯವಾಗಿದ್ದರಿಂದಲೇ ಮಹಿಳೆಯರಿಗೇ ವಿಶಿಷ್ಟವೆನಿಸುವ, ಪ್ರತ್ಯೇಕವೆನಿಸುವ ಸಮಸ್ಯೆಗಳನ್ನು ಯಶಸ್ವಿಯಾಗಿ ಎದುರಿಸಲು ಸಮಾಜವಾದಿ ಸ್ತ್ರೀವಾದಿಗಳಿಗೆ ಸಾಧ್ಯವಾಯಿತು. ಸಂತಾನ ನಿಯಂತ್ರಣ ಸಾಧನಗಳ ಬಳಕೆಯು ಮಹಿಳೆಯ ಉತ್ಪಾದನಾ ಸಾಮರ್ಥ್ಯವನ್ನು ಪ್ರಭಾವಗೊಳಿಸಿರುವುದನ್ನು ಮಿಶೆಲ್ ಗಮನಿಸಿದ್ದಾಳೆ. ಮಹಿಳೆಯರು ಸಂತಾನೋತ್ಪತ್ತಿ ಸಾಧನಗಳನ್ನು ಅಳವಡಿಸಿಕೊಳ್ಳುವಲ್ಲಿ ಉಂಟಾಗುವ ಸಮಸ್ಯೆಗಳ

ಬಗೆಗೆ ಮಾರ್ಕ್ಸ್‌ವಾದಿ ಚಿಂತಕರು ಕೂಡ ತೀವ್ರ ನಿರ್ಲಕ್ಷ್ಯದಿಂದಿದ್ದರು ಎಂಬುದು ಮುಖ್ಯ ವಿಚಾರವಾಗುತ್ತದೆ. ಸ್ತ್ರೀಯರ ವಿಷಯದ ಈ ನಿರ್ಲಕ್ಷ್ಯವು ಪುರುಷ ಹಿತಾಸಕ್ತಿಗಳನ್ನು ಸಹಜವಾಗಿಯೇ ಎತ್ತಿ ಹಿಡಿಯುವಂತಾದುದು ವಿಪರ್ಯಾಸಕರವೆಂಬುದಾಗಿ ಸಮಾಜವಾದಿ ಸ್ತ್ರೀವಾದಿಗಳು ಭಾವಿಸಿದರು.

ಅಧಿಕಾರ ರಾಜಕಾರಣದಲ್ಲಿ ಮಹಿಳೆಯ ಪಾತ್ರವೇನೆಂಬುದರ ಬಗೆಗೆ ಸಮಾಜವಾದಿ ಸ್ತ್ರೀವಾದಿಗಳು ಆಲೋಚಿಸಿದ್ದಾರೆ. ಎಲ್ಲ ವಿಧದ ಅಧಿಕಾರದ ವಿರುದ್ಧ ಸಂಘರ್ಷ ನಡೆಸುವ ಗುರಿಯನ್ನು ಸಮಾಜವಾದಿ ಸ್ತ್ರೀವಾದ ಹೊಂದಿದೆ. ಕೇವಲ ವರ್ಗ ಆಡಳಿತದ ವಿರೋಧವಲ್ಲ, ಪುರುಷಾಧಿಕಾರದ ವಿರುದ್ಧವೂ ಮಹಿಳೆ ಹೋರಾಡಬೇಕಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಮಹಿಳೆ ಪುರುಷನಂತೆ ಆಕ್ರಮಣಕಾರಿಯೂ ಅಧಿಕಾರ ಕಲ್ಪನೆಯಿಂದ ಬಂಧಿತಳೂ ಆಗಕೂಡದು. ತನಗೆ ಯಾವುದು ಬೇಕು, ಯಾವುದು ಇಷ್ಟವಿಲ್ಲವೆಂಬುದನ್ನು ಸ್ಪಷ್ಟಪಡಿಸುತ್ತ ಆತ್ಮಶೋಧದ ಹಾದಿಯನ್ನು ಮಹಿಳೆಯರು ಕ್ರಮಿಸಬೇಕು. ಪುರುಷ ಜಗತ್ತಿನ ಹಿಂಸ್ರಕ ಅರ್ಥಹೀನ ಸ್ಪರ್ಧೆಗಳ ನಿರಾಕರಣೆಯು ಸಮಾಜವಾದಿ ಸ್ತ್ರೀವಾದದ ಮುಖ್ಯ ಉದ್ದೇಶವಾಗಿದೆ. ಅಧಿಕಾರದ ಮೇಲಾಟ ವಿಲ್ಲದೆ, ಪರಸ್ಪರ ಸಹಕಾರವುಳ್ಳ ಸೌಹಾರ್ದಯುತ ಜಗತ್ತನ್ನು ಸಮಾಜವಾದಿ ಸ್ತ್ರೀವಾದವು ಆದರ್ಶವಾಗಿಟ್ಟುಕೊಂಡಿದೆ. ಈ ಆದರ್ಶವು ಪುರುಷನಿಗೂ ಆದರ್ಶವಾಗಲು ತಕ್ಕದ್ದು, ಎಂದು ಸಮಾಜವಾದಿ ಸ್ತ್ರೀವಾದಿಗಳು ಒತ್ತಾಯಿಸುತ್ತಾರೆ.

ಸಮಾಜವಾದಿ ಸ್ತ್ರೀವಾದವು ಕ್ರಾಂತಿಕಾರಕ ರಾಜಕಾರಣದ ಸ್ವರೂಪವನ್ನು ಒಪ್ಪುವುದಿಲ್ಲ. ಶಾಸನ ಸಂಸ್ಥೆಯಿಂದ ಆಡಳಿತಗೊಳ್ಳುವ ವರ್ಗ ಸಮಾಜದಲ್ಲಿ ಪ್ರತಿಭಟಿಸುವುದೆಂದರೆ, ಕೇವಲ ಶಾಸನ ಸಂಸ್ಥೆಯ ವಿರುದ್ಧ ಕೂಗೆಬ್ಬಿಸುವುದಲ್ಲ. ಪುರುಷ ಪ್ರಾಧಾನ್ಯವು ಮಹಿಳೆಯ ಜೀವನದ ಎಲ್ಲ ಕ್ಷೇತ್ರಗಳಲ್ಲಿ, ಉದಾ: ಮನೆ, ಕಲೆ, ಕ್ರೀಡೆ, ಧರ್ಮ, ಶಿಕ್ಷಣ, ಉದ್ಯೋಗ ಮೊದಲಾದ ಸಾಂಸ್ಥಿಕ ಕ್ಷೇತ್ರಗಳಲ್ಲಿ ಕಂಡು ಬರುತ್ತದೆ. ಹೀಗಾಗಿ ಶಾಸನ ಸಂಸ್ಥೆ ಮಾತ್ರ ಪ್ರಧಾನ ಶೋಷಣಾ ಕೇಂದ್ರವಾಗದೆ ಇನ್ನಿತರ ಸಂಸ್ಥೆಗಳಲ್ಲಿಯೂ ಅಧಿಕಾರವು ಕೇಂದ್ರಿತವಾಗಿದೆ. ಇಂಥ ಸಂಸ್ಥೆ ಗಳಲ್ಲಿನ ಅಧಿಕಾರದ ವಿಕೇಂದ್ರಿಕರಣವಾದಾಗ ಮಾತ್ರ ನಿಜವಾದ ಸ್ತ್ರೀ ಮುಕ್ತಿ ಸಾಧ್ಯವಾದೀತು ಎಂಬ ನಿರೀಕ್ಷೆ ಸಮಾಜವಾದಿ ಸ್ತ್ರೀವಾದಿಗಳದು, ಉತ್ಪಾದನಾ ಸಂಬಂಧದಲ್ಲಿ ಎರಡು ಸ್ತರಗಳು ಕಂಡು ಬರುತ್ತವೆ. ಮೊದಲನೆಯದು ವರ್ಗ ಸಂಬಂಧವನ್ನು ಕುರಿತದ್ದು. ಎರಡನೇ ಸ್ತರವು ಪುರುಷ-ಅಧಿಕಾರದ ಸಂಬಂಧದ ಬಗೆಗೆ. ಪ್ರತಿಯೊಬ್ಬ ಶೋಷಿತ ವರ್ಗದ ಪುರುಷನು ತನ್ನ ಕುಟುಂಬದ ಸ್ತ್ರೀಯ ಶೋಷಣೆ ಮಾಡುವುದನ್ನು ಸಮಾಜವಾದಿ ಸ್ತ್ರೀವಾದವು ಪ್ರಮುಖ ವಿಷಯವಾಗಿಸಿಕೊಂಡಿತು. ಆದ್ದರಿಂದ ಸಮಾಜದ ಗತಿಶಾಸ್ತ್ರದ ವಿಶ್ಲೇಷಣೆ ಮಾಡುವಾಗ ವರ್ಗಸಂಬಂಧದೊಂದಿಗೆ ಪುರುಷ ಅಧಿಕಾರವನ್ನು ವಿವೇಚನೆಗೊಳಪಡಿಸಬೇಕೆಂದು, ಸಮಾಜವಾದ ಸ್ತ್ರೀವಾದಿಗಳ ಒತ್ತಾಯ. ವರ್ಗಕಾರ್ಮಿಕನು ಮನೆಯಲ್ಲಿ ತನ್ನ ಪತ್ನಿ, ತಾಯಿ, ಮಗಳು, ಸೋದರಿಯರೊಂದಿಗೆ ಹೇಗೆ ವರ್ತಿಸುತ್ತಾನೆ, ವ್ಯವಹರಿಸುತ್ತಾನೆ ಎಂಬುದರ ಬಗೆಗೆ ಲಕ್ಷ್ಯವಿರಬೇಕೆಂದು ಸಮಾಜವಾದಿ ಸ್ತ್ರೀವಾದಿಗಳು ಎಚ್ಚರಿಸುತ್ತಾರೆ.

ಹೆಣ್ಣು ಹುಟ್ಟುವುದೇ ಒಂದು ಶಾಪ ಎನ್ನುವ ಸ್ಥಿತಿಯಲ್ಲಿ ಇಂದು ಮಹಿಳೆ ಅದನ್ನೆಲ್ಲಾ ಪಕ್ಕಕ್ಕೆ ತಳ್ಳಿ ಸಾಧನೆಯತ್ತ ಒಲವು ತೋರಿಸುತ್ತಿರುವುದು ಆಶಾದಾಯಕ ಸಂಗತಿಯಾಗಿದೆ. ಮನೆಯ ಏಳಿಗೆಯನ್ನು ಕಾಪಾಡಿಕೊಳ್ಳುವುದರ ಜೊತೆಗೆ ತನ್ನ ಜೀವನದ ಬಗ್ಗೆಯೂ ಅವಳು ಗಂಭೀರವಾಗಿಯೂ ಯೋಚಿಸಬೇಕಾಗಿದೆ. ಅವಳು ಮನೆಯಲ್ಲಿದ್ದುಕೊಂಡು ಬೆಳಗಿನ ಜಾವದಿಂದ ರಾತ್ರಿ ಉಂಡು ಮಲಗುವ ತನಕ ಕೆಲಸಗಳಿಂದ ಮುಕ್ತಿ ಕಾಣುತ್ತಿಲ್ಲ. ಈ ರೀತಿ ದುಡಿದರೂ ಸಹ ಅವಳ ಕೆಲಸ ಏನಿದೆ? ಮನೆ ಕೆಲಸ ಮುಗಿಸಿಕೊಂಡು ಆರಾಮವಾಗಿ ಮನೆಯಲ್ಲಿರುವುದು ಎಂದು ಕೊಂಕು ನುಡಿಗಳು ಅವಳನ್ನು ಮನೆಯ ಕೆಲಸದಲ್ಲಿ ಮುಂದುವರಿಯುವಂತೆ ಪ್ರೇರೇಪಿಸುತ್ತಿವೆ. ತನಗೋಸ್ಕರವಾಗಿ ಸಮಯವನ್ನು ಕಳೆಯುವುದು ತುಂಬಾ ಕಡಿಮೆ. ಗಂಡ ಮನೆ ಮಕ್ಕಳಿಗೋಸ್ಕರ ದಿನವಿಡೀ ದುಡಿಯುವ ಮಹಿಳೆ ತನ್ನ ಏಳಿಗೆ ವಿಚಾರವಾಗಿ ಸ್ವಲ್ಪ ವೇಳೆಯನ್ನು ಮೀಸಲಿರಿಸದೇ ಬೇರೆಯವರಿಗೋಸ್ಕರವಾಗಿಯೇ ಜೀವನ ಪರ್ಯಂತ ದುಡಿಯುವುದು ಅವಳ ದೈನಂದಿನ ಬದುಕಾಗಿಬಿಡುತ್ತದೆ. ಆದರೆ ಅವಳು ಉದ್ಯೋಗಸ್ತೆಯಾದರೂ ಕೂಡ ಇನ್ನೂ ಹಲವಾರು ಸಮಸ್ಯೆಗಳಿಂದ ಮುಕ್ತಿ ಹೊಂದಿಲ್ಲ. ಕಾರಣ ಅವಳ ಅಬಲೆ ಎನ್ನುವ ಮನೋಭಾವ ಸಂಪೂರ್ಣವಾಗಿ ಹೋಗಿಲ್ಲ. ಕಛೇರಿಯಲ್ಲಿ, ಶಾಲೆಯಲ್ಲಿ, ಕಾಲೇಜಿನಲ್ಲಿ ಹೀಗೆ ದುಡಿಯಲು ಮುಂದಾಗಿರುವ ಹೆಣ್ಣು ಅನೇಕ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ್ದಾಳೆ. ಈ ಹಿನ್ನೆಲೆಯಲ್ಲಿ ಮಹಿಳೆ ಎದುರಿಸುವ ಸಮಸ್ಯೆಗಳನ್ನು ಅರಿಯಲು ಈ ಅಧ್ಯಯನಕ್ಕೆ ಪ್ರಾಥಮಿಕ ಶಾಲಾ ಹಂತ ಶಿಕ್ಷಕಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ನಮ್ಮ ಸಾಮಾಜಿಕ ಸಂಧರ್ಭದಲ್ಲಿ ಹೇಳುವುದಾದರೆ 50 ರ ದಶಕದಲ್ಲಿಯೂ ಕೂಡ ಸ್ಕೂಲು ಕಾಲೇಜುಗಳ ಮುಖಕಂಡ ಹೆಂಗಸರು ತೀರಾ ಅಪರೂಪವೇ. ಹೊಸ ಬೆಳಕಿಗೆ ಹೊಡ್ಡಿಕೊಂಡವರು ತಡವರಿಸುತ್ತಾ ಗಂಡಸರು ನಿರ್ದೇಶಿಸಿದ ದಾರಿಗಳನ್ನೇ ತಮ್ಮದೆಂದೇ ಭಾವಿಸುತ್ತಾ ತುಳಿದರೆಂಬುದು ಸುಳ್ಳಲ್ಲ. ಆದರೂ ನೆಡೆಯತೊಡಗಿದರೆಂಬುದೇ ಎಷ್ಟೋ ಮಹತ್ವದ ಸಂಗತಿಯಾಗಿದೆ. ಎಲ್ಲಕ್ಕಿ0ತ ಮುಖ್ಯವಾಗಿ ಸಮಾನತೆಯ ಪ್ರಶ್ನೆಗಳು ಮುನ್ನೆಡೆಗೆ ಬಂದಿದ್ದರಿಂದ ಬುದ್ದಿಜೀವಿಗಳು ಸಮಾಜದ ಭದ್ರತೆಯನ್ನು ನಿರೂಪಿಸುವ ಹೊಣೆಯನ್ನು ಹೊರಬೇಕಾಯಿತು. ಸಾಹಿತ್ಯವನ್ನು ಒಳಗೊಂಡಂತೆ ಈ ನವ್ಯ ಚಳುವಳಿ ವಿವಿಧ ಆಕಾರಗಳಲ್ಲಿ ಪ್ರವೃತ್ತವಾಯಿತು.

ಹಿಂದೆ ಕುಟುಂಬದ ಆರ್ಥಿಕ ಚಟುವಟಿಕೆಗಳಿಗೆ ಸೀಮಿತವಾಗಿದ್ದ ಮಹಿಳೆಯರ ದುಡಿಮೆ ಇತ್ತೀಚೆಗೆ ಸಮಾಜದ ಎಲ್ಲಾ ಕಾರ್ಯಕ್ಷೇತ್ರಗಳಲ್ಲೂ ಕಾಣಿಸಿಕೊಂಡಿದೆ. ಆದರೂ ಇಂದಿಗೂ ಕೂಡ ಹೆಣ್ಣು ಹೆಚ್ಚಾಗಿ ಅಸಂಘಟಿತ ಮತ್ತು ಕೃಷಿ ಸಂಬಂಧಿತ ವಲಯಗಳಲ್ಲಿಯೇ ದುಡಿಯುತ್ತಿದ್ದಾಳೆ. ಅನಿರ್ಧಿಸಷ್ಟ ಕೆಲಸದ ವೇಳೆ, ವಿಶ್ರಾಮವಿಲ್ಲದ ದುಡಿತ, ಕಡಿಮೆ ಕೂಲಿ, ದೈವಿಕ ಶ್ರಮ, ಸವಲತ್ತುಗಳು ಇಲ್ಲದಿರುವುದು, ಲೈಂಗಿಕ ಕಿರುಕುಳ, ಮುಂತಾದವುಗಳನ್ನು ಈ ರಂಗದಲ್ಲಿ ಎದುರಿಸಬೇಕಾಗುತ್ತದೆ.

ನಗರಗಳಲ್ಲಿ ಹಿಂದೆ ಪುರುಷರ ಕ್ಷೇತ್ರ ಎನಿಸಿಕೊಂಡ ವಲಯಗಳಲ್ಲಿ ಮಹಿಳೆಯರು ಕೆಲಸ ಮಾಡುತ್ತಿದ್ದಾರೆ. ಆದರೆ ಕೆಲಸದ ಪರಿಸರ, ವೇಳೆ, ಕೆಲಸದ ಸ್ಥಳಗಳನ್ನು ತಲುಪದಿರುವ ಸಂಚಾರದ ವ್ಯವಸ್ಥೆ, ಇವುಗಳ ಗುಣಮಟ್ಟ ಉತ್ತಮವಾಗಿಲ್ಲ. ಅಲ್ಲದೆ ಗೃಹಿಣಿಯರು, ತಾಯಂದಿರು ತಮ್ಮ ಇತರ ಜವಾಬ್ದಾರಿಗಳನ್ನು ನಿರ್ವಹಿಸಿಕೊಂಡು ಹೊರಗೆ ದುಡಿಯಲು ಪೂರಕವಾಗಬಲ್ಲ ಸಾಮಾಜಿಕ, ಸಾಂಸ್ಕೃತಿಕ ವಾತಾವರಣ ನಿರ್ಮಿತವಾಗಿಲ್ಲ.

ಅಧ್ಯಯನದ ಮುಖ್ಯ ವಿಷಯಗಳಾದ ಉದ್ಯೋಗಸ್ಥ ಮಹಿಳೆಯರ ಪ್ರಮುಖ ಸಮಸ್ಯೆಗಳು ಅದರಲ್ಲೂ ಕುಟುಂಬ ಕೇಂದ್ರೀಕೃತ ಹಾಗೂ ಮಹಿಳೆಯ ಉದ್ಯೋಗವನ್ನು ಪಡೆಯುವಲ್ಲಿ ಹಾಗೂ ನಿಭಾಯಿಸುವಲ್ಲಿ ಎದುರಿಸುವ ಸಮಸ್ಯೆಗಳು, ಅವಳು ಗಳಿಸಿದ ವರಮಾನದ ಮೇಲೆ ಅವಳಿಗಿರುವ ಹಕ್ಕು ಮತ್ತು ನಿಯಂತ್ರಣಗಳು, ಸಾಮಾಜಿಕ ಸ್ಥಾನಮಾನ, ಇವುಗಳ ಬಗೆಗಿನ ಮಹಿಳೆಯರ ಅಭಿಪ್ರಾಯವನ್ನು ಅರಿಯಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ. ಈ ವಿಷಯದ ಕುರಿತಾಗಿ ಈ ಅಧ್ಯಯದಲ್ಲಿ ಕೆಲವು ಕುತೂಹಲಕಾರಿ ಫಲಿತಾ0ಶಗಳು ಈ ಕೆಳಗಿನಂತಿವೆಃ

(1) ಮಹಿಳೆಯರು ಉದ್ಯೋಗ ಪಡೆಯಲು ಸ್ಪೂರ್ತಿದಾಯಕ ಅಂಶವನ್ನು ಗಮನಿಸಿದಾಗ ಮುಖ್ಯವಾಗಿ ಅವರ ಪೋಷಕರು ಇದಕ್ಕೆ ಸ್ಪೂರ್ತಿಯಾಗಿರುವುದು ಗೋಚರವಾಗಿರುತ್ತದೆ.

(2) ಉದ್ಯೋಗಸ್ಥ ಮಹಿಳೆಯರು ಜೀವನದಲ್ಲಿ ಹೊಣೆಗಾರಿಯ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾಳೆಯೇ ಎಂದು ಕೇಳಿದಾಗ ಅದಕ್ಕೆ ಉತ್ತರವಾಗಿ ಕೇವಲ ಪ್ರತಿಶತಃ 52 ರಷ್ಟು ಮಹಿಳೆಯರು ಹೌದೆಂದಿದ್ದಾರೆ.

ಅಂದರೆ ಇನ್ನೂ 48 ರಷ್ಟು ತಮ್ಮ ಜೀವನದಲ್ಲಿ ಹೊಣೆಗಾರಿಕೆಯ ನಿರ್ಧಾರಗಳನ್ನು ತೆಗೆದುಕೊಳ್ಳುವುದರಲ್ಲಿ ಮಹಿಳೆ ಮನೆಯ ಇತರ ಸದಸ್ಯರನ್ನು ಅವಲ0ಭಿಸಿದ್ದಾರೆಂದು ತಿಳಿಯುತ್ತದೆ.

(3) ಉದ್ಯೋಗ ಸೇರುವಲ್ಲಿ ಮಹಿಳೆ ಎದುರಿಸುತ್ತಿರುವ ಸಮಸ್ಯೆಗಳನ್ನು ವಿಶ್ಲೇಷಿಸಿದಾಗ, ಉದ್ಯೋಗ ಸೇರುವಲ್ಲಿ ಹೆಚ್ಚಿನ ಮಹಿಳೆಯರು ಹಣಕಾಸಿನ ತೊಂದರೆಯನ್ನು ಎದುರಿಸುತ್ತಿದ್ದಾರೆ. ಇದಕ್ಕೆ ಮುಖ್ಯ ಕಾರಣ ಗ್ರಾಮೀಣ ಬಡತನವಾಗಿದೆ. ಎರಡನೇ ಮುಖ್ಯ ಸಮಸ್ಯೆ ಎಂದರೆ ಮಹಿಳೆಯರು ಉದ್ಯೋಗ ಪಡೆಯುವಲ್ಲಿ ಸಮಾಜದ ಕಟ್ಟುಪಾಡುಗಳೂ ಕೂಡ ಅಡ್ಡ ಬರುತ್ತಿವೆ.

(4) ಮಹಿಳೆಯರು ತೆಗೆದುಕೊಳ್ಳುವ ನಿರ್ಧಾರದ ಬಗ್ಗೆ ಕುಟುಂದ ಸದಸ್ಯರ ವರ್ತನೆಯನ್ನು ಗಮನಿಸಿದಾಗ ಗಂಡ ಹಾಗೂ ಅತ್ತೆ ಮಾವನವರ ವರ್ತನೆಯು ಇನ್ನೂ ಬದಲಾಗಿಲ್ಲ. ಅದೇ ರೀತಿಯಾಗಿ ಇತರರಿಗೆ ಹೋಲಿಸಿದರೆ ಪೋಷಕರ ವರ್ತನೆಯು ಕೆಲವು ಮಟ್ಟಿಗೆ ಬದಲಾಗಿದೆ.

(5) ಇನ್ನೂ ಕೂಡ ಕುಟುಂಬಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ನಿರ್ಧಾರ ಕೊಳ್ಳುವಾಗ ಹೆಚ್ಚಿನ ಮಹಿಳೆಯರು ತಮ್ಮ ಕುಟುಂಬ ಸದಸ್ಯರಾದ ಗಂಡ, ಅತ್ತೆ, ಮಾವ ಅಥವಾ ಪೋಷಕರನ್ನು ವಿಚಾರಿಸುತ್ತಾರೆ ಎಂಬ ಅಂಶವು ಈ ಅಧ್ಯಯನದಿಂದ ತಿಳಿಯುತ್ತದೆ.

(6) ಉದ್ಯೋಗವು ಹೆಚ್ಚಿನ ಮಹಿಳೆಯರಿಗೆ ಸರಿಯಾದ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳಲು ನೆರವಾಗುತ್ತದೆ ಎಂಬ ಅಂಶವು ವೇದ್ಯವಾಗುತ್ತದೆ ಅಂದರೆ ಹೆಚ್ಚಿನ ಉದ್ಯೋಗಸ್ಥ ಮಹಿಳೆಯರಿಗೆ ತಮ್ಮ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವಲ್ಲಿ ಸ್ವಾತಂತ್ರ್ಯವಿದೆಯೆಂದು ತಿಳಿಯುತ್ತದೆ. ಉದ್ಯೋಗಸ್ಥ ಮಹಿಳೆ ಮತ್ತು ಕುಟುಂಬ ಸದಸ್ಯರ ನಡುವಿನ ಸಂಬಂಧವನ್ನು ನೋಡಿದಾಗ ಹೆಚ್ಚಾಗಿ ಉದ್ಯೋಗಸ್ಥ ಮಹಿಳೆ ಹಾಗೂ ಪೋಷಕರ ನಡುವಿನ ಸ0ಬಂಧವು ಚೆನ್ನಾಗಿರುವುದು ಕಂಡು ಬರುತ್ತದೆ. ಅದೇ ರೀತಿಯಾಗಿ ಗಂಡನ ನಡುವೆ ಚೆನ್ನಾಗಿದ್ದು, ಅತ್ತೆ ಮಾವರ ನಡುವ ಚೆನ್ನಾಗಿಲ್ಲದಿರುವುದು ಕಂಡು ಬರುತ್ತದೆ.

(7) ಹೆಚ್ಚಿನ ಮಹಿಳೆಯರು, ಉದ್ಯೋಗಸ್ಥ ಮಹಿಳೆಯರು ಹೊಂದಾಣಿಕೆ ಕಷ್ಟ ಎಂದಿದ್ದಾರೆ. ಇದಕ್ಕೆ ಕಾರಣಗಳನ್ನು ಕೇಳಿದಾಗ ಅವರು ಮೊದಲನೆಯದಾಗಿ ಕೆಲಸದ ಒತ್ತಡವಾದರೆ ಎರಡನೆಯದಾಗಿ ಸದಸ್ಯರ ಅಸಹಕಾರವು ಕಾರಣವಾಗಿದೆಯೆಂದಿದ್ದಾರೆ.

(8) ತಿಂಗಳ ವೇತನವನ್ನು ಸದ್ಬಳಕೆ ಮಾಡುವಲ್ಲಿ ಮಹಿಳೆಯರಿಗಿರುವ ಸ್ವಾತಂತ್ರ್ಯವನ್ನು ಗಮನಿಸಿದಾಗ ಇನ್ನೂ 44 ಪ್ರತಿಶತಃ ಮಹಿಳೆಯರು ತಮ್ಮ ವೇತನವನ್ನು ವೆಚ್ಚ ಮಾಡುವಲ್ಲಿ ಮನೆಯ ಇತರ ಸದಸ್ಯರ ಒಪ್ಪಿಗೆಯನ್ನು ಪಡೆಯಬೇಕಾಗಿದೆ. ಅಂದರೆ ಅವಳು ಗಳಿಸಿದ ಹಣದ ಮೇಲೆ ಸ್ವಾತಂತ್ರ ಇರುವುದಿಲ್ಲದ

(9) ಯಾವ ಕೆಲಸಗಳಲ್ಲಿ ಕುಟುಂಬದ ಸದಸ್ಯರು ಸಹಾಯ ಮಾಡುತ್ತಾರೆ ಎನ್ನುವ ಅಂಶವನ್ನು ವಿಶ್ಲೇಷಿಸಿದಾಗ ಮಹಿಳೆಯರ ದಿನನಿತ್ಯದ ಕೆಲಸದಲ್ಲಿ ಅಂದರೆ ಅಡಿಗೆ ತಯಾರಿಕೆಯಲ್ಲಿ ಹಾಗೂ ಪೋಷಕರು ಸಹಾಯ ಮಾಡುತ್ತಾರೆ. ಅದೇ ರೀತಿಯಾಗಿ ಅತಿಥಿ, ಸಂಬಂಧಿಕರು, ಮಕ್ಕಳ ಲಾಲನೆ-ಪಾಲನೆಯಲ್ಲಿ ಗಂಡಂದಿರು ಹಾಗೂ ಅತ್ತೆ-ಮಾವರು ಸಹಾಯ ಮಾಡುತ್ತಾರೆ.

(10) ಉದ್ಯೋಗಸ್ಥ ಮಹಿಳೆ ಮತ್ತು ಗಂಡನ ನಡುವೆ ಕೌಟುಂಬಿಕ ವಿಷಯಗಳಲ್ಲಿ ಭಿನ್ನಾಭಿಪ್ರಾಯವಿದೆಯೇ ಎಂದು **ಕೇಳಿದಾಗ** ಪ್ರತಿಶತಃ 40 ಮಹಿಳೆಯರು ಹೌದು ಎಂದಿದ್ದಾರೆ. ಕಾರಣಗಳನ್ನು ಅವಲೋಕಿಸಿದಾಗ ಗಂಡನ ಬಗ್ಗೆ ಕಾಳಜಿ ಇಲ್ಲದಿರುವುದು ಹಾಗೂ ಮಕ್ಕಳ ಬಗ್ಗೆ ತಾತ್ಸಾರ ಇವು ಭಿನ್ನಾಭಿಪ್ರಾಯಕ್ಕೆ ಕಾರಣವಾಗಿದೆ.

(11) ಉದ್ಯೋಗಸ್ಥ ಮಹಿಳೆಯರು ಕರ್ತವ್ಯ ನಿರ್ವಹಿಸುವಾಗ ಕೆಲಸದ ಒತ್ತಡ, ಮೇಲಾಧಿಕಾರಿಗಳ ದಬ್ಬಾಳಿಕೆ ಹಾಗೂ ರಾಜಕೀಯ ಒತ್ತಡಗಳಂತ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

(12) ಮಹಿಳೆಯರ ಬಗೆಗಿನ ಉನ್ನತಾಧಿಕಾರಿಗಳ ವರ್ತನೆಯನ್ನು ಗಮನಿಸಿದಾಗ ಅವರು ಕೆಲಸ ನಿರ್ವಹಿಸುವ ಸಮಯದಲ್ಲಿ ಸಹಾಯ ಮತ್ತು ಸಹಕಾರ ನೀಡುವುದು ಮಹಿಳೆಯರನ್ನು ಸಮಾನತೆಯಿಂದ ನೋಡುವುದು ಹಾಗೂ ಅವರಿಗೆ ಗೌರವ ಮತ್ತು ಸಹಾನುಭೂತಿಯಿಂದ ನೋಡುವುದು ಈ ಅಧ್ಯಯನದಿಂದ ತಿಳಿಯುತ್ತದೆ. ಅದೇ ರೀತಿಯಾಗಿ ಸಹೋದ್ಯೋಗಿಗಳ

ವರ್ತನೆಯನ್ನು ನೋಡಿದಾಗ ಮಹಿಳೆಯರನ್ನು ಗೌರವ ಮತ್ತು ಸಹಾನುಭೂತಿಯಿಂದ ಕಾಣುವುದು ಹಾಗೂ ಅವರಿಗೆ ಕೆಲಸಗಳಲ್ಲಿ ಸಹಾಯ-ಸಹಕಾರ ನೀಡುವುದು ತಿಳಿದುಬರುತ್ತದೆ.

(13) ಹೆಚ್ಚಿನ ಮಹಿಳೆಯರು ಕುಟುಂಬದ ಏಳಿಗೆಗೋಸ್ಕರ, ಆರ್ಥಿಕ ನೆರವಿಗೋಸ್ಕರ ಉದ್ಯೋಗಕ್ಕೆ ಸೇರುವುದು ಈ ಅಧ್ಯಯನದಿಂದ ತಿಳಿದುಬರುತ್ತದೆ. ಕೆಲವರು ಮಾತ್ರ ತಮ್ಮ ಸ್ವಂತ ನೆರವಿಗಾಗಿ ಉದ್ಯೋಗಕ್ಕೆ ಸೇರಿದ್ದಾರೆ ಮತ್ತು ಕೆಲವೇ ಕೆಲವು ಅಂದರೆ ಅತೀ ಕಡಿಮೆ ಸಂಖ್ಯೆ ಮಹಿಳೆಯರು ಆರ್ಥಿಕ ಸ್ವಾವಲಂಬನೆಗೋಸ್ಕರ ಉದ್ಯೋಗಕ್ಕೆ ಸೇರಿರುವುದು ತಿಳಿದು ಬರುತ್ತದೆ.

# ಆಧುನಿಕ ಭಾರತದಲ್ಲಿ ವೃತ್ತಿ ನಿರತ ಮಹಿಳೆಯ ಬದಲಾದ ಪಾತ್ರ ಮತ್ತು ಅಂತಸ್ತು

## I. ಸಾಮಾನ್ಯ ಮಾಹಿತಿ

1) ಹೆಸರು :

2) ವಿಳಾಸ :

3) ವಯಸ್ಸು :

4) ಜಾತಿ 1) ಪ. ಜಾ. 2) ಪ.ಪಂ. 3) ಹಿಂದುಳಿದ 4) ಸಾಮಾನ್ಯ

5) ಧರ್ಮ 1) ಹಿಂದೂ 2) ಮುಸ್ಲಿಂ 3) ಕ್ರೈಸ್ತ 4) ಬೌದ್ಧ 5) ಇತರೆ

6) ಶಿಕ್ಷಣ

| | ಹಳ್ಳಿ | ತಾಲ್ಲೂಕು | ನಗರ |
|---|---|---|---|
| 7 ನೇ | | | |
| 10 ನೇ | | | |
| ಪಿ.ಯು.ಸಿ. | | | |
| ಬಿ.ಎ. | | | |

7) ಮೆರಿಟಲ್ ಸ್ಟೇಟಸ್ :

1) ವಿವಾಹಿತೆ 2) ಅವಿವಾಹಿತೆ 3) ವಿಧವೆ 4) ವಿಚ್ಛೇದಿತೆ

## II. ಕೌಟುಂಬಿಕ ಹಿನ್ನೆಲೆ

8) ಕುಟುಂಬದ ರಚನೆ : 1) ಅವಿಭಕ್ತ 2) ವಿಭಕ್ತ

9) ತಂದೆ : 1) ಶಿಕ್ಷಣ 2) ವೃತ್ತಿ 3) ಆದಾಯ

10) ತಾಯಿ : 1) ಶಿಕ್ಷಣ 2) ವೃತ್ತಿ 3) ಆದಾಯ

11) ಗಂಡ : 1) ಶಿಕ್ಷಣ 2) ವೃತ್ತಿ 3) ಆದಾಯ

12) ಮಾವ : 1) ಶಿಕ್ಷಣ 2) ವೃತ್ತಿ 3) ಆದಾಯ

13) ಅತ್ತೆ : 1) ಶಿಕ್ಷಣ 2) ವೃತ್ತಿ 3) ಆದಾಯ

## IV. ಉದ್ಯೋಗ ಮನೋವೃತ್ತಿ

23) ವೃತ್ತಿ ಶಿಕ್ಷಣ :

24) ಹುದ್ದೆ ____________ ಇಲಾಖೆ ____________

25) ತಿಂಗಳು ವೇತನ ____________ ರೂಗಳು.

26) ಎಷ್ಟು ವರ್ಷಗಳಿಂದ ಕೆಲಸ ಮಾಡುತ್ತಿದ್ದೀರಿ ?
____________ ವರ್ಷ ____________ ತಿಂಗಳು

27) ನೀವು ವಿವಾಹಕ್ಕೆ ಮುಂಚಿತವಾಗಿ ಕೆಲಸ ಮಾಡುತ್ತಿದ್ದೀರಾ ?
1) ಹೌದು 2) ಇಲ್ಲ

28) ಇಲ್ಲವಾದರೆ, ವಿವಾಹವಾದ ನಂತರ ಎಷ್ಟು ವರ್ಷಗಳಲ್ಲಿ ಕೆಲಸಕ್ಕೆ ಸೇರಿದ್ದೀರಿ ?
____________ ವರ್ಷಗಳು

29) ನಿಮ್ಮ ಪೋಷಕರಿಗೆ ತಿಂಗಳಿಗೆ ಎಷ್ಟು ಹಣವನ್ನು ನೀಡುತ್ತೀರಿ ?
____________ ರೂ.ಗಳು.

30) ನಿಮ್ಮ ಗಂಡನ ಕುಟುಂಬಕ್ಕೆ ತಿಂಗಳಿಗೆ ಎಷ್ಟು ಹಣವನ್ನು ನೀಡುತ್ತೀರಿ ?
____________ ರೂ.ಗಳು.

31) ಪ್ರತಿ ತಿಂಗಳು ನಿಮ್ಮ ಸ್ವಂತ ಖರ್ಚಿಗೆ ಹಣವನ್ನು ಇಟ್ಟು ಕೊಳ್ಳುತ್ತೀರಾ ?
1) ಹೌದು 2) ಇಲ್ಲ

32) ನೀವು ಉದ್ಯೋಗ ಪಡೆಯಲಿಕ್ಕೆ ಕುಟುಂಬದಲ್ಲಿ ಸ್ಫೂರ್ತಿದಾಯಕರಾರು ?
1) ಪೋಷಕರು 2) ಅತ್ತೆ–ಮಾವ 3) ಗಂಡ 4) ಇತರೆ.

33) ನೀವು ಉದ್ಯೋಗ ಮಾಡಲಿಕ್ಕೆ ಮುಖ್ಯ ಕಾರಣಗಳಾವುವು ?

1) ಸ್ವಂತ ನೆರವಿಗೆ

2) ಕುಟುಂಬದ ಏಳಿಗೆಗೆ

3) ಆರ್ಥಿಕ ಸ್ವಂತದ ಮೂಲವಾಗಿ

34) ಉದ್ಯೋಗಸ್ಥ ಮಹಿಳೆಯು ಜೀವನದಲ್ಲಿ ಹೊಣೆಗಾರಿಕೆಯ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾಳೆಯೇ?
1) ಗಣನೀಯವಾಗಿ 2) ಸ್ವಲ್ಪವಾಗಿ 3) ಇಲ್ಲವೇ ಇಲ್ಲ

35) ನೀವು ಉದ್ಯೋಗಕ್ಕೆ ಸೇರುವಲ್ಲಿ ಎದುರಿಸುವ ಸಮಸ್ಯೆಗಳಾವುವು?
1) ಕುಟುಂಬ ಸದಸ್ಯರ ಪ್ರೋತ್ಸಾಹ ಇಲ್ಲದಿರುವುದು. 2) ಹಣಕಾಸಿನ ತೊಂದರೆ 3) ಸಮಾಜದ ರೂಡಿ ಸಂಪ್ರದಾಯಗಳು 4) ಇತರೆ

36) ಉದ್ಯೋಗಸ್ಥ ಮಹಿಳೆಯು ತೆಗೆದುಕೊಳ್ಳುವ ನಿರ್ಧಾರದ ಹೊಣೆಗಾರಿಕೆಯ ಕುರಿತು ಕುಟುಂಬ ಸದಸ್ಯರ ವರ್ತನೆಯು ಬದಲಾಗಿದೆಯೇ ?

| | ಗಣನೀಯವಾಗಿ | ಸ್ವಲ್ಪವಾಗಿ | ಇಲ್ಲ |
|---|---|---|---|
| ಗಂಡ | | | |
| ಪೋಷಕರು | | | |
| ಅತ್ತೆ-ಮಾವ | | | |
| ಇತರರು | | | |

37) ಕುಟುಂಬಕ್ಕೆ ಸಂಬಂಧಿಸಿದ ವಿಷಯಗಳ ಕುರಿತಾಗಿ ನಿರ್ಧಾರ ತೆಗೆದುಕೊಳ್ಳುವಾಗ ನಿಮ್ಮ ಕುಟುಂಬ ಸದಸ್ಯರನ್ನು ವಿಚಾರಿಸುತ್ತೀರಾ?

| | ಯಾವಾಗಲೂ | ಕೆಲವು ಬಾರಿ | ಇಲ್ಲವೇ ಇಲ್ಲ |
|---|---|---|---|
| ಗಂಡ | | | |
| ಪೋಷಕರು | | | |
| ಅತ್ತೆ-ಮಾವ | | | |
| ಇತರರು | | | |

38) ಉದ್ಯೋಗ (ಶಿಕ್ಷಣ) ವು ಸರಿಯಾದ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳಲು ನೆರವಾಗುತ್ತಿದೆಯೇ?

1) ಹೌದು 2) ಇಲ್ಲ

## V. ಕುಟುಂಬದಲ್ಲಿನ ಸ್ಥಾನಮಾನ ಮತ್ತು ಪಾತ್ರ

39) ಕುಟುಂಬ ಸದಸ್ಯರೊಂದಿಗಿನ ನಿಮ್ಮ ಸಂಬಂಧ ಹೇಗಿದೆ ?

| ಸಂಬಂಧ | ಸ್ಥಾನ | | | |
|---|---|---|---|---|
| ಪೋಷಕರು | ಬಹಳ ಚನ್ನಾಗಿದೆ | ಚನ್ನಾಗಿದೆ | ಸಾಧಾರಣ | ಚನ್ನಾಗಿಲ್ಲ |
| ಗಂಡ | | | | |
| ಅತ್ತೆ–ಮಾವ | | | | |
| ಇತರೆ | | | | |

40) ಕುಟುಂಬದಲ್ಲಿ ಉದ್ಯೋಗಸ್ಥೆ ಮಹಿಳೆಯು ಇತರೆ ಸದಸ್ಯರೊಂದಿಗೆ ಸರಿಯಾಗಿ ಹೊಂದಿಕೊಂಡು ಇರಲು ಸಾಧ್ಯವಿಲ್ಲಾ?

1) ಹೌದು 2) ಇಲ್ಲ

ಹೌದಾದರೇ?

1) ಉದ್ಯೋಗದ ಒತ್ತಡದಿಂದ
2) ಮನೆಯ ಸದಸ್ಯರು ಸಹಕಾರ ಕೊಡದೇ ಇರುವುದು.
3) ಗಂಡನ ಜೊತೆ ಸೇರಿ ಮನೆಯ ಸದಸ್ಯರಿಂದ ಬೇರೆಯಾಗಿ ಹೋಗುವ ವಿಚಾರ.
4) ಉದ್ಯೋಗದಲ್ಲಿರುವುದು ಮನೆಯ ಸದಸ್ಯರಿಗೆ ಇಷ್ಟವಿಲ್ಲಾ.

41) ಪ್ರತಿ ತಿಂಗಳ ವೇತನ ಪಡೆದುಕೊಳ್ಳುವಲ್ಲಿ ಹಾಗೂ ಇದನ್ನು ಸದ್ಬಳಕೆ ಮಾಡುವಲ್ಲಿ ಸಂಪೂರ್ಣ ಸ್ವಾತಂತ್ರ್ಯ ಇದೆಯೇ?

1) ಇದೆ 2) ಇಲ್ಲವಾದರೆ ಕಾರಣಗಳು

1) ಮನೆಯ ಯಜಮಾನನ ಕೈಗೆ ಕೊಡುವ ಪದ್ಧತಿ
2) ಗಂಡನ ಒಪ್ಪಿಗೆ ಮುಖ್ಯ
3) ಮನೆಯಲ್ಲಿ ಕುಟುಂಬದ ಸದಸ್ಯರ ಒಪ್ಪಿಗೆ ಕಾಯುವುಧು.
4) ಸರ್ವ ಸ್ವಂತತ್ರವಾಗಿ ನಿರ್ಧಾರ ಕೈಗೊಳ್ಳಲು ಸಾಧ್ಯವಿಲ್ಲಾ.

42) ನಿಮ್ಮ ವೇತನವನ್ನು ಎಲ್ಲಿ ಠೇವಣಿ ಮಾಡುತ್ತೀರಿ ?

1) ಬ್ಯಾಂಕು 2) ಪೋಷಕರು 3) ಗಂಡನ ಹತ್ತಿರ 4) ಸ್ವಂತ

43) ನಿಮ್ಮ ವೇತನದಲ್ಲಿ ಕೆಳಗಿನ ಯಾವ ಯಾವ ಅಂಶಗಳ ಮೇಲೆ ಖರ್ಚು ಮಾಡಲು ನೀವು ಸ್ವತಂತ್ರ ಹೊಂದಿರುವಿರಿ?

1) ಬಟ್ಟೆ, ಆಭರಣ, ಸೌಂದರ್ಯ ವರ್ಧಕಗಳು
2) ಗೃಹೋಪಕರಣಗಳು
3) ಮಕ್ಕಳಿಗಾಗಿ ಉಳಿತಾಯ
4) LIC, FD, ಇತ್ಯಾದಿ.
5) ಉಡುಗೊರೆ
6) ಪೋಷಕರ ಆರೋಗ್ಯ, ಸಹೋದರ / ಸಹೋರಿಯರ ವಿದ್ಯಾಭ್ಯಾಸ ಅಥವಾ ಮದುವೆ/ನಿಮ್ಮ ಆರೋಗ್ಯದ ಮೇಲೆ

44) ಮನೆಗೆಲಸದಲ್ಲಿ ನಿಮ್ಮ ಕುಟುಂಬ ಸದಸ್ಯರು ಸಹಾಯ ಮಾಡುತ್ತಾರೆಯೇ?

| | ಯಾವಾಗಲೂ | ಕೆಲವು ಭಾರಿ | ವಿರಳವಾಗಿ |
|---|---|---|---|
| ಗಂಡ | | | |
| ಪೋಷಕರು | | | |
| ಅತ್ತೆ-ಮಾವ | | | |
| ಇತರರು | | | |

45) ದಿನ ನಿತ್ಯದ ಯಾವ ಕೆಲಸಗಳಲ್ಲಿ ನಿಮ್ಮ ಕುಟುಂಬದ ಸದಸ್ಯರು ನೆರವು ನೀಡುತ್ತಾರೆ ?

| | ಪೋಷಕರು | ಗಂಡ | ಅತ್ತೆ-ಮಾವ | ಕೆಲಸದವರು |
|---|---|---|---|---|
| ಅಡುಗೆ ತಯಾರಿಕೆ | | | | |
| ಸ್ವಚ್ಛತೆ | | | | |
| ಕೊಂಡುಕೊಳ್ಳುವಿಕೆ | | | | |
| ಅತಿಥಿ / ಸಂಬಂಧಿಕರನ್ನು ನೋಡಿಕೊಳ್ಳುವಲ್ಲಿ | | | | |
| ಮಕ್ಕಳ ಲಾಲನೆ/ ಪಾಲನೆ | | | | |

46) ಉದ್ಯೋಗಸ್ಥ ಮಹಿಳೆಯರು ಕುಟುಂಬದಲ್ಲಿಯ ಇತರೆ ನಿರುದ್ಯೋಗಿ ಸದಸ್ಯರನ್ನು ತಾತ್ಸಾರದಿಂದ ನೋಡುತ್ತಾರೆ. ಇದನ್ನು ಒಪ್ಪುತ್ತೀರಾ ?

1) ಸಂಪೂರ್ಣವಾಗಿ
2) ಸ್ವಲ್ಪಮಟ್ಟಿಗೆ
3) ಒಪ್ಪುವುದಿಲ್ಲ

47) ನೀವು ಅನಾರೋಗ್ಯದಿಂದ ಇದ್ದಲ್ಲಿ. ನಿಮ್ಮನ್ನು ಯಾರು ಹೆಚ್ಚಾಗಿ ಕಾಳಜಿ ವಹಿಸುತ್ತಾರೆ ?
1) ತಾಯಿ-ತಂದೆ 2) ಗಂಡ 3) ಅತ್ತೆ-ಮಾವ 4) ಕುಟುಂಬದ ಇತರೆ ಸದಸ್ಯರು/ ಗೆಳೆಯರು

48) ನಿಮ್ಮ ಮಕ್ಕಳ ಭವಿಷ್ಯದ ಬಗ್ಗೆ ಯಾರು ಕಾಳಜಿ ವಹಿಸುತ್ತಾರೆ.
1) ತಾಯಿ-ತಂದೆ 2) ಗಂಡ 3) ಅತ್ತೆ-ಮಾವ 4) ಕುಟುಂಬದ ಇತರೆ ಸದಸ್ಯರು/ಸ್ನೇಹಿತರು

49) ಕೌಟುಂಬಿಕ ವಿಷಯಗಳಲ್ಲಿ ಉದ್ಯೋಗಸ್ಥ ಮಹಿಳೆ ಮತ್ತು ಗಂಡನ ನಡುವೆ ಭಿನ್ನಾಭಿಪ್ರಾಯಗಳಿರುತ್ತವೆಯೇ?

1) ಹೌದು 2) ಇಲ್ಲಾ

ಹೌದಾದರೇ,

1) ಕುಟುಂಬದ ನಿರ್ವಹಣೆಗೆ ಬೇಕಾದಷ್ಟು ಹಣ ನೀಡುವುದಿಲ್ಲಾ.
2) ಗಂಡನ ಬಗ್ಗೆ ಕಾಳಜಿ ಇಲ್ಲ
3) ಕುಟುಂಬದ ಬಗ್ಗೆ ಹಿತಾಸಕ್ತಿ ಇಲ್ಲ
4) ಮಕ್ಕಳ ಬಗ್ಗೆ ತಾತ್ಸಾರ

## VI. ಕಛೇರಿಯಲ್ಲಿ ಮಹಿಳೆಯ ಸ್ಥಾನ-ಮಾನ & ಪಾತ್ರ

50) ನೀವು ಕರ್ತವ್ಯ ನಿರ್ವಹಿಸುವಲ್ಲಿ ಎದುರಿಸುವ ಸಮಸ್ಯೆಗಳು ಯಾವುವು?

1) ರಾಜಕೀಯ (ಎಸ್.ಡಿ.ಎಂ.ಸಿ) ಒತ್ತಡ

2) ಸಹೋದ್ಯೋಗಿಗಳ ಅಸಹಕಾರ

3) ಮೇಲಾಧಿಕಾರಿಗಳ ದಬ್ಬಾಳಿಕೆ.

4) ಕೆಲಸದ ಒತ್ತಡ

51) ಮಹಿಳೆಯು ಯಾರೊಂದಿಗೆ ದಕ್ಷತೆಯಿಂದ ಕೆಲಸ ನಿರ್ವಹಿಸುತ್ತಾಳೆ ?

| | ಅತ್ಯಂತ ದಕ್ಷತೆ | ಕಡಿಮೆ ದಕ್ಷತೆ | ಅದಕ್ಷ್ಯತೆ |
|---|---|---|---|
| ಗಂಡಸು | | | |
| ಹೆಂಗಸು | | | |

52) ಕಛೇರಿಯಲ್ಲಿ ಮಹಿಳೆಯರ ಬಗ್ಗೆ ಉನ್ನತಾಧಿಕಾರಿಗಳ ವರ್ತನೆ ಹೇಗಿದೆ ?

| | ಚನ್ನಾಗಿದೆ | ಪರವಾಗಿಲ್ಲ | ಇಲ್ಲ |
|---|---|---|---|
| ಸಹಾಯ & ಸಹಕಾರ | | | |
| ತಾರತಮ್ಯ & ಅಸಹಕಾರ | | | |
| ಗೌರವ & ಸಹಾನುಭೂತಿ | | | |

53) ಗಂಡಸರಿಗೆ ಹೋಲಿಸಿದಂತೆ ಕೆಳಗಿನ ಅಂಶಗಳಲ್ಲಿ ಮಹಿಳೆಯು ಯಾವ ರೀತಿಯಲ್ಲಿ ಕೆಲಸದ ನಿರ್ವಹಣೆಯನ್ನು ಮಾಡುತ್ತಾಳೆ ?

| | ಹೆಚ್ಚು | ಸಮ | ಕಡಿಮೆ |
|---|---|---|---|
| ಸಮಯ ಪಾಲನೆ | | | |
| ದಕ್ಷತೆ | | | |
| ಸ್ನೇಹಯುತ ದೃಢತೆ | | | |

54) ನಿಮ್ಮ ಸಹೋದ್ಯೋಗಿಗಳ ವರ್ತನೆ ಹೇಗಿದೆ ?

| | ಚನ್ನಾಗಿದೆ | ಪರವಾಗಿಲ್ಲ | ಇಲ್ಲ |
|---|---|---|---|
| ಗೌರವ & ಸಹಾನುಭೂತಿ | | | |
| ಸಹಕಾರ & ಪರಸ್ಪರ ಸಹಾಯ | | | |
| ತಾರತಮ್ಯ | | | |

55) ಕಛೇರಿಗೆ ಸಂಬಂಧಿಸಿದ ಸಮಾರಂಭಗಳಲ್ಲಿ ನೀವು ಯಾವ್ ರೀತಿ ಭಾಗವಹಿಸುತ್ತೀರಿ ?

| | ಪದೇ ಪದೇ | ಕೆಲವು ಭಾರಿ | ವಿರಳ |
|---|---|---|---|
| ವರ ಸಂಚಾರ | | | |
| ಬೀಳ್ಕೊಡುಗೆ, ವಾರ್ಷಿಕ ಸಮಾರಂಭಗಳಲ್ಲಿ | | | |
| ಹುಟ್ಟು ಹಬ್ಬಗಳು, ಮದುವೆ ವಾರ್ಷಿಕ ಪೂಜಾ | | | |

-0-0-0-

# ಆಧಾರ ಗ್ರಂಥಗಳು

ಇಂಗ್ಲೀಷ್ ಮೂಲ ಜೆರಾಲ್ಡಿನ್ ಪೋರ್ಬ್ಸ್ ಕನ್ನಡಕ್ಕೆ ಡಾ. ಹೆಚ್.ಹೆಸ್. ಶ್ರೀಮತಿ, ಆಧುಮಿಕ ಭಾರತದಲ್ಲಿ ಮಹಿಳೆ, ಪುಟ ೩೭೯

ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ೨೦೦೨, ಪುಟ೩೨೦

ಶ್ರೀಮತಿ. ಹೆಚ್.ಎಸ್., ಸ್ತ್ರೀವಾದ, ಕನ್ನಡ ವಿ.ವಿ. ಹಂಪಿ, ೨೦೦೩

ರೇಣುಕಾರ್ಯ ಸಿ.ಕೆ, ೨೦೦೦ ಅರ್ಥಶಾಸ್ತ್ರ, ಪಿ.ಯು,ಸಿ, ೨ನೇ ವರ್ಷ, ಪುಟ ೨೩೦-೨೩೧

ಶ್ರೀಮತಿ ಹೆಚ್.ಎಸ್. ಶಿನಾನಂದ, ಕೃಷ್ಣ ಜೆ. ಸಂಪಾದಕರು, ೨೦೦೭, ಮಹಿಳಾ ಆರ್ಥಿಕತೆ, ಪುಟ೧೬

ರಿತುದಿವಾನ್, ೧೯೯೫, ಪುಟ೪೬-೪೭

ಚಂದ್ರಶೇಖರ. ಟಿ.ಆರ್, ಮಹಿಳೆ ಮತ್ತು ಆರ್ಥಿಕತೆ ಮತ್ತು ಅಭಿವೃದ್ದಿ, ಪುಟ ೩೦

ರೇಣುಕಾರ್ಯ ಸಿ.ಕೆ, ಸಂಪಾದಕರು, ೨೦೦೬, ಪದವಿ ಪೂರ್ವ ಶಿಕ್ಷಣ ಇಲಾಖೆ ಅನುಮೋದಿಸಿದ ಪಠ್ಯ ಪುಸ್ತಕ, ಅರ್ಥಶಾಸ್ತ್ರ, ಪುಟ.೨೩೧

ರೇಣುಕಾರ್ಯ ಸಿ.ಕೆ, ೨೦೦೦ ಅರ್ಥಶಾಸ್ತ್ರ, ೨೩೪

ಬಸವಾ ಕೆ.ಡಿ, ೧೯೯೬, ಆಧುನಿಕ ಅರ್ಥಶಾಸ್ತ್ರ, ಪುಟ.೩೫೭-೩೫೮

ಚಂದ್ರಶೇಖರ. ಟಿ.ಆರ್, ಮಹಿಳೆ ಮತ್ತು ಆರ್ಥಿಕತೆ ಮತ್ತು ಅಭಿವೃದ್ದಿ, ಪುಟ ೫೫

ಚಂದ್ರಶೇಖರ. ಟಿ.ಆರ್, ಮಹಿಳೆ ಮತ್ತು ಆರ್ಥಿಕತೆ ಮತ್ತು ಅಭಿವೃದ್ದಿ, ಪುಟ ೫೫-೫೬

ರೇಣುಕಾರ್ಯ ಸಿ.ಕೆ, ೨೦೦೦ ಅರ್ಥಶಾಸ್ತ್ರ, ೨೩೫

ಶ್ರೀಮತಿ. ಎಸ್.ಎಸ್. ಶಿವನಂದ, ಎಸ್. ವಿರಕ್ತ ಮ್ಯಠ, ಕೃಷ್ಣ ಜೆ, ಸಂಪಾದಕರು, ವರ್ಷ ೨೦೦೭, ಮಹಿಳೆ ದುಡಿಮೆ ಮತ್ತು ಬಿಡುವು, ಪುಟ.೭೫

ಜ್ಯೋತಿ ಶಶಿಕುಮಾರ್, ವರ್ಷ ೨೦೦೭, ಮಹಿಳಾ ಸಾಮಾಜಿಕತೆ, ಪುಟ ೧೪೪-೧೪೫

ಆರ್. ಇಂದಿರಾ, ಮಹಿಳೆ ಮತ್ತು ಸಂಸ್ಕೃತಿ, ಪುಟ ೮೧

ಎಚ್ಚಾರ್ತೆ, ಭಾರತೀಯ ಆರ್ಥಿಕ ವ್ಯವಸ್ಥೆ, ಪುಟ ೧೭

ಆರ್. ಇಂದಿರಾ, ಮಹಿಳೆ ಮತ್ತು ಸಂಸ್ಕೃತಿ, ಪುಟ ೮೧-೮೨

ಎಚ್ಚಾರ್ತೆ, ಭಾರತೀಯ ಆರ್ಹಿಕ ವ್ಯವಸ್ಥೆ, ಪುಟ ೧೯

